# ಮೃತ್ಯುಭವನ

( ಪತ್ತೇದಾರಿ ಕಾದಂಬರಿ )

" ರಮೇಶ್ "



ಮುದ್ರಕರು ಮತ್ತು ಪ್ರಕಾಶಕರು :
ಭಾಲಚಂದ್ರ ಘಾಣೇಕರ
**ಪ್ರತಿಭಾ ಮುದ್ರಣ, ಧಾರವಾಡ.**

ಎಪ್ರಿಲ್ ೧೯೫೫ ]　　　[ ಬೆಲೆ: **ಹತ್ತು ಆಣೆ**

# ರಮ್ಯ ಪತ್ತೇದಾರಿ ಕಾದಂಬರಿಗಳು

---

| | | ರೂ. | ಆ. | ಪೈ. |
|---|---|---|---|---|
| ಮಿಸ್ ಮೈಸೂರು | .... | ೦ | ೯ | ೦ |
| ಕಳ್ಳನಿಗೆ ಕಾಣಿಕೆ | .... | ೧ | ೪ | ೦ |
| ಕೇತಕೀ ಕುಸುಮ | .... | ೧ | ೦ | ೦ |
| ಅಂಬಿಕೆ | .... | ೧ | ೪ | ೦ |
| ಕೊಂದವರು ಯಾರು? | .... | ೧ | ೪ | ೦ |
| ಕರೇ ಚಿಕ್ಕಿ | .... | ೧ | ೪ | ೦ |
| ಹಂತಕನು ಯಾರು? | .... | ೧ | ೪ | ೦ |
| ಮಿಸ್ ಅಮೇಲಿಯಾ | .... | ೧ | ೪ | ೦ |
| ಚೋರ ಶಿಖಾಮಣಿ | .... | ೧ | ೪ | ೦ |
| ಕಳ್ಳರ ಕೈಚಳಕ | .... | ೧ | ೪ | ೦ |
| ಅವಳಿ-ಜವಳಿ ಸೋದರರು | .... | ೧ | ೪ | ೦ |
| ಕಾಲಾ ಬಝಾರ | .... | ೧ | ೪ | ೦ |
| ಅದೃಶ್ಯ ಮನುಷ್ಯ | .... | ೧ | ೦ | ೦ |
| ರತ್ನಗೋಲ | .... | ೧ | ೦ | ೦ |
| ಕೊತವಾಲನ ಕಾರಸ್ಥಾನ | .... | ೧ | ೦ | ೦ |
| ಡಾಕ್ಟರ್ ಗಿರೀಶ | .... | ೦ | ೬ | ೦ |
| ಪತ್ತೇದಾರ ಯಶವಂತರಾಯ | .... | ೦ | ೩ | ೦ |

ಇವಲ್ಲದೆ ನಮ್ಮಲ್ಲಿ ನಾವಿರಾರು ಕನ್ನಡ ಪುಸ್ತಕಗಳು ದೊರೆಯುತ್ತವೆ. ಕ್ಯಾಟಲಾಕಿಗೆ ಎರಡಾಣೆ ಅಂಚೇ ಚೀಟಿ ಕಳಿಸಿರಿ.

**ಸಮಾಜ ಪುಸ್ತಕಾಲಯ,**

**ಭಗತಸಿಂಗ ಬೀದಿ :: ಧಾರವಾಡ.**

# ಮೃತ್ಯುಭವನ

## ೧

ಒಂದು ಮುಂಜಾನೆ. ಪೋಲಿಸ್ ಕಾನ್ಸ್ಟೇಬಲ್ ಹಜೆಸನು ತನ್ನ ಬೀಟಿನಿಂದ ಲಂಬರ್ಡ್ ಸ್ಟ್ರೀಟಿನಲ್ಲಿ ಹೊರಬಿದ್ದ. ಅಲ್ಲೊಂದು ಬ್ಯಾಂಕಿನ ಬಾಗಿಲಲ್ಲಿ ಒಂದು ಪಾರ್ಸಲ್ ಇಟ್ಟದ್ದು ಕಂಡಿತು. ಬಾಗಿಲು ಮುಚ್ಚಿದೆ; ಪಾರ್ಸಲ್ ಹೊರಗೇಕೆ ಬಿದ್ದಿದೆ ಎಂದು ಅವನಿಗೆ ಕುತೂಹಲವುಂಟಾಯಿತು. ಮೆಟ್ಟಿಲುಗಳನ್ನೇರಿ ಹೋಗಿ ಅವನು ಪಾರ್ಸಲನ್ನು ಎತ್ತಿ ನೋಡಿದ. ಅದರ ಆವರಣ ಬಾದಾಮಿ ಕಾಗದದ್ದು. ಆಕಾರ ಚಿಕ್ಕದು—ಎಂಟು ಘನ ಇಂಚು ಇದ್ದಿರಬಹುದು; ಆಕಾರ ಮಾನದಿಂದ ಅದರ ತೂಕ ಬಹಳ ಹೆಚ್ಚೆಂದು ಅವನಿಗೆನಿಸಿತು. ಅದರ ಮೇಲೆ ದೊಡ್ಡ ದೊಡ್ಡ ಅಚ್ಚಾದ ಅಕ್ಷರಗಳ ಮಾದರಿಯ ಅಕ್ಷರಗಳಲ್ಲಿ ವಿಳಾಸ ಬರೆದಿತ್ತು.—"ಸಿಟಿ ಆಫ್ ಲಂಡನ್ ಬ್ಯಾಂಕಿಂಗ ಕಂಪನಿಯ ಅಧ್ಯಕ್ಷರಿಗೆ."

ಹಜೆಸ್ ಪೋಲಿಸ್ ಕೆಲಸಕ್ಕೆ ಸೇರಿ ಬಹಳ ದಿನ ಆಗಿರಲಿಲ್ಲ; ಕಾರ್ಯದಕ್ಷತೆ ತೋರಿಸಿ ಮೇಲಿನವರಿಂದ ಇನ್ನೂ ಭಲೆ ಎನಿಸಿಕೊಂಡಿರಲಿಲ್ಲ. ಈ ಪಾರ್ಸಲನ್ನೀಗ ಏನು ಮಾಡಬೇಕೆಂದು ಯೋಚಿಸತೊಡಗಿದ. ಈಗಲೇ ಠಾಣ್ಯಕ್ಕೆ ಹೋಗಿ ಇದನ್ನು ಅಧಿಕಾರಿಗಳಿಗೆ ಒಪ್ಪಿಸುವುದೇ, ಅಥವಾ ತನ್ನ ಕರ್ತವ್ಯ ತೀರುವ ವರೆಗೆ ಹತ್ತಿರ ಇಟ್ಟುಕೊಂಡಿದ್ದು ಹಿಂದುಗಡೆ ಒಪ್ಪಿಸುವುದೇ ಎಂಬುದು ಅವನಿಗೆ ತೋರದಾಯಿತು. ಅದನ್ನು ಇದ್ದಲ್ಲಿಯೇ ಇಟ್ಟು ಸುಮ್ಮನೆ ಹೋದರೂ ಹೋಗಬಹುದಿತ್ತು; ಅಥವಾ ಪಾರ್ಸಲನ್ನು ತೆರೆದು ಬೆಲೆಯುಳ್ಳ

ವಸ್ತುವಿದ್ದರೆ ಅವನು ತನ್ನ ಜೇಬಿಗೆ ಸೇರಿಸಿಕೊಂಡು ಬಿಟ್ಟರೂ ಕೇಳುವವರು ಯಾರಿದ್ದರು? ಆದರೆ ಇವೆರಡಕ್ಕೂ ಹಜೆಸನ ಮನಸ್ಸೊಪ್ಪಲಿಲ್ಲ. ಇತ್ತೀಚೆಗೆ ಲಂಡನಿನಲ್ಲಿ ಚೋರ ದಳದವರು ಬ್ಯಾಂಕುಗಳಿಂದ ಹಣ ಎಬ್ಬಿಸುವುದಕ್ಕಾಗಿ ಭಯಸೂಚಕ ಪತ್ರ ಬರೆಯುವುದು, ಅದು ವಿಫಲವಾದರೆ ಬ್ಯಾಂಕಿನಲ್ಲಿ ಬಾಂಬು ಹಾಕುವ ಕ್ರಮವನ್ನು ಆರಂಭಿಸಿದ್ದು ಅವನ ಜ್ಞಾಪಕಕ್ಕೆ ಬಂದಿತು. ಇದರಲ್ಲಿ ಬಾಂಬಿರಲಿಕ್ಕಿಲ್ಲವಷ್ಟೇ! ಹಜೆಸನ ಸ್ಮೃತಿ ಜಾಗೃತವಾಯಿತು. ಅವನು ಒಂದೆರಡು ನಿಮಿಷ ಪಾರ್ಸಲನ್ನು ಕಿವಿಯ ಬಳಿ ಹಿಡಿದುಕೊಂಡು ನೋಡಿದ. ಒಳಗೆ ಯಾವ ಶಬ್ದವೂ ಕೇಳಿಸಲಿಲ್ಲ. ಕೆಲವು ವಿಲಂಬವಾಗಿ ಸಿಡಿಯುವ ಬಾಂಬುಗಳಿರುತ್ತವೆ. ಅಂಥ ಸಾಂಘಾತಿಕ ಒಳಗಿದ್ದೀತೇ ಇರಲಾರದೇ—ಯಾವುದೂ ಅವನ ಅನುಮಾನಕ್ಕೆ ನಿಲುಕಲಿಲ್ಲ.

ಕೊನೆಗೆ, ಠಾಣ್ಯದ ಸಾರ್ಜಂಟ್ ಈ ಬಗ್ಗೆ ಏನು ಹೇಳುತ್ತಾನೋ ಹಾಗೆ ಮಾಡುವುದು ಯುಕ್ತವೆಂದು ಹಜೆಸನಿಗೆನಿಸಿತು. ಆಗ ಬೀಟನ್ನು ಬಿಟ್ಟು ಹೋಗುವುದು ನಿಯಮ ಬಾಹ್ಯವಾದರೂ ವಿಷಯದ ಮಹತ್ವವನ್ನು ಅರಿತು ಸಾರ್ಜಂಟ್ ಲುಕಾಸನು ತನ್ನ ಮೇಲೆ ಸಿಟ್ಟಾಗಲಾರನೆಂದು ಅವನ ಬಗೆದನು. ಅಲ್ಲದೆ, ಅವರಿಬ್ಬರಲ್ಲಿಯೂ ಗೌರವ-ಪ್ರೀತಿಗಳ ಸಂಬಂಧವಿದಿತು.

ತನ್ನ ಅನುಯಾಯಿಯೊಬ್ಬನು ಹಠಾತ್ತಾಗಿ ಅಕಾಲದಲ್ಲಿ ಚಾವಡಿಕೋಣೆಯೊಳಗೆ ಬಂದುದರಿಂದ ಸಾರ್ಜಂಟನ ಮನಸ್ಸು ಸ್ವಲ್ಪ ನಿತುಷ್ಟವಾಯಿತು. ಆದರೆ, ಹಜೆಸನ ಚಿಂತಾವಿಷ್ಟನಾದ ಮುಖವನ್ನು ಕಂಡು ಲುಕಾಸ್ ಕೇಳಿದ: "ನೀನೇನಾದರೂ ತೊಡಕಿನಲ್ಲಿ ಸಿಕ್ಕಿ ಬಿದ್ದಿದ್ದೀಯಾ? ಏನು ಸಮಾಚಾರ?"

ಹಜೆಸ್ ಎಲ್ಲವನ್ನೂ ವಿವರಿಸಿದಬಳಿಕ ವ್ಯಗ್ರಭಾವದಿಂದ "ಅದನ್ನು ಇಲ್ಲಿಡಬೇಡ. ಈಕ್ಷಣ ಒಂದು ಬಕೆಟ್ ನೀರಿನಲ್ಲಿ ಚೆಲ್ಲಿಬಿಡು! ಜೀವ ಉಳಿದರಲ್ಲವೇ ನೌಕರಿ-ಗೀಕರಿ!" ಎಂದು ನುಡಿದ.

ಪಾರ್ಸಲ್ಲನ್ನು ಕೆಲಹೊತ್ತು ನೀರಿನಲ್ಲಿ ಮುಳುಗಿಸಿಡಲಾಯಿತು. ಆಮೇಲೆ ಅದನ್ನು ಒಡೆಯುತ್ತಿರುವಾಗ, ಅದರ ಬದಿಯಲ್ಲಿ ಸಿಕ್ಕಿಸಿದ್ದ ಚೀಟಿಯೊಂದು ಕೆಳಗೆ ಬಿತ್ತು. ನೀರಲ್ಲಿ ನೆನೆದುದರಿಂದ ಅಕ್ಷರಗಳು ಓದಬಾರದಷ್ಟು ಅಳಿಸಿ ಕಾಗದ ಮಸೀಮಯವಾಗಿತ್ತು. ಓದಲು ಸಾಕಷ್ಟು ಪ್ರಯತ್ನಿಸಿ ಹತಾಶನಾಗಿ

ಸಾರ್ಜಂಟ್, "ಏನೂ ಸುಳುವು ಹತ್ತುವಂತಿಲ್ಲ. ಯಾರ್ಡಿನ ಅಸ್ಪಷ್ಟ ಲೇಖನವನ್ನು ಓದುವ ತಜ್ಞರ ಕಡೆ ಕಳಿಸಬೇಕು." ಎಂದನು.

—"ಪತ್ರದಲ್ಲಿ ಏನು ಬರೆದಿದೆ ಬಿಟ್ಟಿದೆ ಅದನ್ನು ತಿಳಿದುಕೊಳ್ಳುವ ಆತುರ ನನಗೇನಿಲ್ಲ. ಪಾರ್ಸಲಿನಲ್ಲಿ ಏನಿದೆ ನೋಡಬೇಕು."

—"ಇದನ್ನಿನ್ನು ಬೇಕಾದ ಹಾಗೆ ಪೊಯ್ವಾಡಿಸಬಹುದು. ಏನೂ ಭಯವಿಲ್ಲ. ನಾನೇ ಸ್ವತಃ ಇದನ್ನು ತೆಗೆದುಕೊಂಡು ಹೋಗುತ್ತೇನೆ" ತೋಯ್ದು ಪಾರ್ಸಲಿನ ಕಡೆ ನೋಡುತ್ತ ಸಾರ್ಜಂಟ್ ಹೇಳಿದ.

—"ಇಬ್ಬರೂ ಕೂಡಿಯೇ ಹೋಗೋಣವೆ? ಹೇಗೆ?"

ಸಾರ್ಜಂಟ್ ಹುಬ್ಬು ಮುರಿದು ಕಾನ್ಸ್‌ಟೆಬಲನ ಮೋರೆಯನ್ನು ದುರುದುರು ನೋಡಿದ "ಈ ಕೆಲಸವನ್ನು ನಾನೊಬ್ಬನೇ ಮಾಡಬಲ್ಲೆ ಹಜೆಸ್! ನೀನು ಸಂಗಡ ಬರದಿದ್ದರೂ ನಷ್ಟವೇನಿಲ್ಲ" ಎಂದ.

—"ನಿಮಗೆ ಅಸಾಧ್ಯವೇ? ಎಲ್ಲವೂ ಸಾಧ್ಯ;—ಹೋಗದಿರುವುದು ಸಹ ಸಾಧ್ಯ."

ಕ್ಷಣಹೊತ್ತು ಇಬ್ಬರೂ ಒಬ್ಬರ ಮೋರೆ ಒಬ್ಬರು ನೋಡಿದರು. ಒಬ್ಬರೊಬ್ಬರ ಮನೋಭಾವವನ್ನು ಅರಿತುಕೊಳ್ಳಲು ಯತ್ನಿಸಿರಬಹುದು. ಕೊನೆಗೆ ಸಾರ್ಜಂಟ್ ಕಾಗದದ ಕಡೆ ನೋಡುತ್ತ, "ಮೊದಲು ಪತ್ರವನ್ನು ಒಣಗಿಸಿಕೊಳ್ಳುವಾ." ಎಂದು ನುಡಿದ.

ಅಗ್ಗಿಷ್ಟಿಗೆಯ ಹತ್ತಿರ ಎರಡು ಕುರ್ಚಿಗಳನ್ನಿಟ್ಟು, ಅವುಗಳ ತೋಳಿಗೆ ದಾರ ಕಟ್ಟಿ, ಪತ್ರವನ್ನು ಅದರ ಮೇಲೆ ಹಾಕಿ ಒಣಗಿಸಿದರು. ಆಗ ಅದರಲ್ಲಿಯ ಬರೆದ ತುಸುಮಟ್ಟಿಗೆ ನಿಚ್ಚಳವಾಯಿತು. ಸಾರ್ಜಂಟ್ ಪತ್ರವನ್ನು ಡೆಸ್ಕಿನಮೇಲೆ ಹರಡಿ, ವಿದ್ಯುದ್ದೀಪವನ್ನು ಹತ್ತಿಸಿ ಮನಸಿನಲ್ಲಿಯೇ ಓದಿಕೊಳ್ಳಲಾರಂಭಿಸಿದ. ಕಾನ್ಸ್‌ಟೆಬಲ್ ಹಜೆಸ್ ಸಾರ್ಜಂಟನ ಮುಖವನ್ನು ದಿಟ್ಟಿಸಿ ನೋಡುತ್ತ ನಿಂತ. ಓದುದುತ್ತ ಸಾರ್ಜಂಟನ ನೇತ್ರಗಳು ಪ್ರದೀಪ್ತವಾದವು; ಆವನು ಪತ್ರವನ್ನು ಕೈಯಲ್ಲಿ ತೆಗೆದುಕೊಂಡ—ಕೈಗಳು ನಡುಗುತ್ತಿದ್ದವು.

ಪತ್ರದಲ್ಲಿ ಏನಿರಬಹುದೆಂಬುದನ್ನು ತಿಳಿದುಕೊಳ್ಳುವ ಆತುರ ಹಜೆಸನಿಗೆ

ಅನಿವಾರ್ಯವಾಯಿತು. " ಏನು ಬರೆದಿದೆ ಸಾರ್ಜಂಟ್ ? " ಎಂದು ಪ್ರಶ್ನಿಸಿದ.

ಸಾರ್ಜಂಟ್ ಮುಖವೆತ್ತಿ ಕಾನ್ಸ್‌ಟೆಬಲನ ಕಡೆ ನೋಡಿದ ಮಾತ್ರ. ಅವನ ಪ್ರಶ್ನೆಗೆ ಉತ್ತರವನ್ನೀಯದೆ ಪತ್ರವನ್ನು ಮಡಿಚಿ ಎದೆ ಮೇಲಿನ ಜೇಬಿನಲ್ಲಿಟ್ಟುಕೊಂಡ. ಅವನ ಈ ಅಶಿಷ್ಟ ವ್ಯವಹಾರದಿಂದ ಹಜೆಸ್ ಅಸಂತುಷ್ಟನಾಗಿ, "ಆ ಪತ್ರ ನಾನು ತಂದದ್ದು, ನನಗೆ ತಿರುಗಿ ಕೊಡಿರಿ. ಅದನ್ನಿಟ್ಟುಕೊಳ್ಳುವ ಅಧಿಕಾರ ನನಗೇ ಉಂಟು." ಎಂದೆನ್ನುತ್ತ ಕೈನೀಡಿದ.

ತಮ್ಮ ಕಾನ್ಸ್‌ಟೆಬಲನ ಈ ಸ್ಪರ್ಧೆಯನ್ನು ಕಂಡು ಸಾರ್ಜಂಟನ ತಲೆ ಬೆಚ್ಚಗಾಯಿತು. "ಪ್ರಮಾಣಪತ್ರ ನಿನ್ನ ಕೈಯಲ್ಲಿ ಕೊಡಬೇಕೆ? ಇದು ಸರಕಾರೀ ವಿಷಯ !" ಎಂದು ಗಂಭೀರ ಸ್ವರದಲ್ಲಿ ಉತ್ತರವಿತ್ತ.

ಹಜೆಸನಿಗೆ ಕೋಪವನ್ನು ತಡೆದುಕೊಳ್ಳುವುದಾಗಲಿಲ್ಲ. "ಇದ್ದೀತು ಸರಕಾರೀ ವಿಷಯ. ನಾನೇನು ಸರಕಾರೀ ಸೇವಕನಲ್ಲವೇ? ಈ ಪತ್ರವನ್ನು ನನಗೆ ನೋಡಲು ಕೊಡದಿದ್ದರೆ ಈಬಗ್ಗೆ ಮೇಲಿನವರಿಗೆ ನಾನು ಬರೆಯುತ್ತೇನೆ. ಆ ಪತ್ರ ಕೂಡ ಬಿನ್‌ಸರಕಾರಿ ಆಗಲಿಕ್ಕಿಲ್ಲ." ಎಂದ.

ಕಾನ್ಸ್‌ಟೆಬಲನ ದುರ್ವಿನೀತತನಕ್ಕಾಗಿ ಸಾರ್ಜಂಟನಿಗೆ ವಿಪರೀತಕೋಪ ಬಂದಿತು. ಅವನು ಕರಕರ ಹಲ್ಲುತಿಂದನು. ಆದರೆ ಕೊನೆಗೆ ಅವನು ಮೆತ್ತಗಾಗಬೇಕಾಯಿತು. "ಪತ್ರ ನಿನಗೇತಕ್ಕೆ ಬೇಕು ಹೇಳು" ಸಿಟ್ಟನ್ನು ಸಂವರಿಸಿಕೊಂಡು ಕೇಳಿದ.

—"ಅದನ್ನು ನಾನು ಗಟ್ಟಿಸಿ ಓದುತ್ತೇನೆ."

—"ಹಾಗಾದರೆ ತಗೋ, ಓದಿಕೋ."

ಸಾರ್ಜಂಟ್ ಪತ್ರವನ್ನು ತೆಗೆದು ಎಸೆದ. ಹಜೆಸ್ ಅದನ್ನು ಬಿಡಿಸಿ ಉಚ್ಚ ಕಂಠದಿಂದ ಓದಿದ:

"ಇಂಗ್ಲಂಡಿನ ಒಂದಾನೊಂದು ಸ್ಥಾನ
ತಾ. ೨೮ ಮಾರ್ಚ್

"ಸಿಟಿ ಆಫ್ ಲಂಡನ್ ಬ್ಯಾಂಕಿಂಗ ಕಂಪನಿಯ
ಅಧ್ಯಕ್ಷರ ಸಮಕ್ಷಮಕ್ಕೆ—

ಈ ಮೂಲಕ ತಮಗೆ ತಿಳಿಸುವುದೇನಂದರೆ— ಬಂಗಾರವು ಸಹಜ ಪ್ರಾಪ್ಯವಾಗುವ ಉಪಾಯವನ್ನು ಕಂಡು ಹಿಡಿದು, ನಾಗರಿಕ ಜಗತ್ತಿನಲ್ಲಿ ಕ್ರಾಂತಿಯನ್ನುಂಟು ಮಾಡಿಬಿಡುತ್ತೇನೆ. ಭವಿಷ್ಯತ್ತಿನಲ್ಲಿ ಸಕಲ ವಸ್ತುಗಳ ಕ್ರಯ-ವಿಕ್ರಯಗಳ ಇದರ ಮೂಲ್ಯಮಾನವು ನಷ್ಟವಾಗುವುದು. ಈ ಉಪಾಯದಿಂದ ಮಾನವ ಸಭ್ಯತೆಯ ಪುನರ್ಘಟನೆ ಮಾಡಬೇಕೆಂದು ನನ್ನ ಸಂಕಲ್ಪ. ಏಕೆಂದರೆ ಮಾನವ ಜಾತಿಯ ಸರ್ವಕಷ್ಟಗಳ ಮೂಲವೇ ಸುವರ್ಣ. ನನ್ನ ಪ್ರಯತ್ನದಿಂದ ಅದರ ಆ ಶಕ್ತಿಯೇ ನಾಶವಾಗುವುದು. ನನ್ನ ಸಂಕಲ್ಪವು ಸಿದ್ಧಿಸುವುದೆಂಬುದಕ್ಕೆ ಪ್ರಮಾಣವೆಂದು ಕಳಿಸಿರುವ ಮಾದರಿ ನಾನೇ ಶೋಧಿಸಿದ್ದು.

ಇದರ ಶೋಧನೆಯಲ್ಲಿ ನಾನು ಹಿಡಿದ ದಾರಿ ಅತ್ಯಂತ ಸ್ವಾಭಾವಿಕವಾದದ್ದು, ಮತ್ತು ಸಹಜವಾದದ್ದು. ನನ್ನ ಮಾತನ್ನು ಪ್ರಮಾಣಿಸಿ ನೋಡುವ ಇಚ್ಛೆ ತಮಗಿದ್ದರೆ, ನಾಳಿನ ಎಪ್ರಿಲ್ ೪ ರಂದು ಮಧ್ಯಾಹ್ನ ೧೨ ಕ್ಕೆ ಸಸೆಕ್ಸ್ ಮೈದಾನಿನಲ್ಲಿ ಫಾರ್ಲಿ ಬಿಕನ್ನಿನ ದಕ್ಷಿಣ ಭಾಗದಲ್ಲಿ ಹಾಸಿದ ಬಿಳಿಯ ಹಾಳೆಯ ಮೇಲೆ ಯಾವುದೊಂದು ಮೌಲಿಕ ಧಾತುವನ್ನು ಇಟ್ಟು ಬನ್ನಿ. ನಾನು ಅದನ್ನು ತೆಗೆದುಕೊಳ್ಳುವಾಗ ಅಲ್ಲಿ ಪೋಲಿಸರಾಗಲಿ ತತ್ಸಂಬಂಧಿಕರಾಗಲಿ ಇರತಕ್ಕದ್ದಲ್ಲ. ನನ್ನನ್ನು ನಂಬಿ ತಾವು ನಿಷ್ಕಪಟತನದಿಂದ ನಡೆದುಕೊಂಡರೆ ನಾಲ್ವತ್ತೆಂಟು ತಾಸುಗಳಲ್ಲಿ ತಮ್ಮ ಧಾತುವನ್ನು ಚೊಕ್ಕ ಬಂಗಾರವನ್ನಾಗಿ ಮಾಡಿ ಕಳಿಸುತ್ತೇನೆ. ಜೊತೆಗೆ ಅದರ ತಯಾರಿಕೆಯ ಫಾರ್ಮ್ಯುಲಾ ಕೂಡ.

ನಾನು ಈ ಪ್ರಯೋಗ ಮೂರು ತಿಂಗಳು ಮಾತ್ರ ಮಾಡಿ ನೋಡುವೆನು. ಮೂರೇ ಮೂರು ತಿಂಗಳು ಸಾಕು, ಜಾಗತಿಕ ಆರ್ಥಿಕ ವ್ಯವಸ್ಥೆ ಆಮೂಲಾಗ್ರ ಬದಲಾಗುವುದಕ್ಕೆ. ಈ ಪರಿವರ್ತನೆಯ ಫಲವಾಗಿ ಬಲಿಷ್ಠರಿಂದ ನಡೆಯುವ ಶೋಷಣೆಯ ಪದ್ಧತಿ ತಳಭ್ರಷ್ಟವಾಗುವುದು. ಆ ತರುವಾಯ ಬಂಗಾರ ತಯಾರಿಕೆಯ ನಿಯಮಾವಲಿಯನ್ನು ಜನಸಾಮಾನ್ಯರಲ್ಲಿ ಪ್ರಚಾರಗೊಳಿಸುವವನಿದ್ದೇನೆ."

—ಕೃತ್ರಿಮ ಸ್ವರ್ಣಕಾರ."

ಪತ್ರವನ್ನೋದಿ ಹಜೆಸ್ ಪಾರ್ಸಲಿನ ಕಡೆ ನೋಡಿದ. ಅಷ್ಟರಲ್ಲಿಯೇ ಸಾರ್ಜಂಟ್ ಅದನ್ನು ಒಡೆದಿದ್ದ. ಅದರಲ್ಲಿ ಚೊಕ್ಕ ಚಿನ್ನದ ಗಟ್ಟಿ ಹೊಳೆಯು

ತ್ತಿತ್ತು. ಅದನ್ನು ನೋಡಿ ಕಾನ್ಸ್‌ಟೆಬಲನ ಕಣ್ಣುಗಳು ಉಜ್ವಲವಾದವು. ಸಾರ್ಜಂಟ್ ಲುಕಾಸನ ಮನದ ಭಾವವನ್ನರಿಯದೆ ಅವನು ವಿಚಲಿತಸ್ವರದಿಂದ ಪ್ರಶ್ನಿಸಿದ: "ಈ ಪಾರ್ಸಲನ್ನು ಯಾರ್ಡಿನ ಕಚೇರಿಗೆ ಒಪ್ಪಿಸದೆ, ನೀ–ನೀವೇ ಇಟ್ಟುಕೊಳ್ಳಲು ಯೋಚಿಸುವಿರಾ ?"

ಈ ಪ್ರಶ್ನೆಯಿಂದ ಲುಕಾಸ್ ಸ್ವಲ್ಪ ಲಜ್ಜಿತನಾದ. ಆದರೆ ಮನೋಭಾವ ವನ್ನು ಪ್ರಕಟಗೊಳಿಸದೆ, "ಹಾಗೆ ಮಾಡಿದರೆ, ಯಾರಿಗೇನು ಹಾನಿ ? ಇದು ಚೊಕ್ಕ ಬಂಗಾರದಷ್ಟೆ ಬೆಲೆಯುಳ್ಳುದಾಗಿದ್ದರೆ, ಈ ಪಾರ್ಸಲಿನಲ್ಲಿದ್ದುದರ ಬೆಲೆ ತೀರ ಕಡಿಮೆಯೆಂದರೂ ಒಂದು ಸಾವಿರ ಪೌಂಡಾಗುತ್ತದೆ. ನೀನು ಹೇಳಿದೆ— ಇದು ಒಂದು ಮನೆಯ ಬಾಗಿಲಲ್ಲಿ ಬಿದ್ದಿತ್ತು; ಇದನ್ನು ಯಾರು ಒಯ್ದರೆಂಬು ದನ್ನು ಯಾರೂ ನೋಡಿಲ್ಲ ಎಂದು. ಈ ಜೀನಸು ಬಂಗಾರವಾಗಿದ್ದರೆ ಇದರ ಸದ್ವಿನಿಯೋಗವಾಗುವುದು." ಎಂದು ನುಡಿದ.

—"ಸರಿ. ಹೆರವರ ಒಡವೆ ಬೀದಿಯಲ್ಲಿ ಬಿದ್ದಿದ್ದರೆ ಅದನ್ನು ತಕ್ಕೊಂಡು ಬಂದು ತನ್ನದಾಗಿ ಮಾಡಿಕೊಳ್ಳುವುದೆ ? ಒಳ್ಳೆಯ ಲೆಕ್ಕಾಚಾರ; ಪೋಲಿಸ ರಿಗೆ ಒಪ್ಪುವಂಥ ಕೆಲಸ !"

—"ಕೈಕೆಳಗಿನವನ ಉಪದೇಶ ಕೇಳುವ ಇಚ್ಛೆ ನನಗಿಲ್ಲ." ಸಿಟ್ಟಿನಿಂದ ನುಡಿದ ಸಾರ್ಜಂಟ್.

—"ಹೌದು, ನಾನು ನಿಮ್ಮ ಕೈಕೆಳಗಿನವ. ನನ್ನ ಯೋಗ್ಯವಾದ ಮಾತುಗಳು ನಿಮಗೆ ಅಸಹ್ಯವಾಗುವುದೇ ಸರಿ. ಆದರೆ ಈ ಬಂಗಾರವನ್ನು ಎತ್ತಿ ಹಾಕುವುದು ನಿಮ್ಮ ಧರ್ಮವೆ ? ನಾನು ಸಂಗ್ರಹಿಸಿದ ವಸ್ತುವನ್ನು ಸರ ಕಾರಕ್ಕೆ ಒಪ್ಪಿಸುವುದು ನನ್ನ ಕರ್ತವ್ಯ. ನಿಮ್ಮಂತೆ ನಾನೂ ಪೋಲಿಸ್ ಚಾಕರಿ ಮಾಡುತ್ತಿದ್ದೇನೆ. ಕೆಲಸಕ್ಕೆ ಸೇರಿದಂದಿನಿಂದಲೂ ನೋಡುತ್ತಿದ್ದೇನೆ—ಮನಸ್ಸು ಮಾಡಿದರೆ ಬೇಕಾದಷ್ಟು ಮೇಲ್ಸಂಪಾದನೆ ಮಾಡಬಹುದು. ಆದರೆ ನಾನೆಂದೂ ಆ ದಾರಿಗೆ ಹೋಗಲಿಲ್ಲ. ಇಷ್ಟು ಬಂಗಾರವನ್ನು ಸೋಡಿ ನಿಮಗೆ ಲೋಭ ವನ್ನು ನಿಗ್ರಹಿಸಲಿಕ್ಕಾಗಲೊಲ್ಲದು. ಅವರು ಈ ಪತ್ರದಲ್ಲಿ ಬರೆದದ್ದು ನಿಜವಿದ್ದ ಪಕ್ಷದಲ್ಲಿ ಈ ಪದಾರ್ಥಕ್ಕೆ ಬೆಲೆ ಎಷ್ಟು ? ಕೋಳಿಗೆ ಕಾಳು ಕೊಳ್ಳುವುದಕ್ಕಾ ಗುವ ವೆಚ್ಚಕ್ಕಿಂತ ಹೆಚ್ಚಿನ ಬೆಲೆ ಇದಕ್ಕೆ ಬಂದೀತೇ ?"

ಲುಕಾಸ್ ಕ್ರೋಧದಿಂದ ಅಧೀರನಾದ. "ನೀನೇನು ನಿಜವಾಗಿಯೂ ಎಂದುಕೊಂಡೆಯಾ ?—"

—"ಮೊದಲು ನನ್ನ ಮಾತು ಪೂರಾ ಕೇಳಿಕೊಳ್ಳಿರಿ. ಬಂಗಾರ ಮಾಡುವ ಪ್ರಯತ್ನ ಇದೇ ಹೊಸದಲ್ಲ. ಹದಿನೇಳನೆಯ ಶತಕದಲ್ಲಿಯೇ ಅಡಾಲ್ಫ್ಸ ಎಂಬ ತಜ್ಞನು ಪಾರಜದಿಂದ ನಕಲಿ ಬಂಗಾರವನ್ನು ಮಾಡಿದ್ದನೆಂದು ತಿಳಿದು ಬಂದಿದೆ. ಆದರೆ ಅದರಿಂದ ಚೊಕ್ಕ ಬಂಗಾರದ ಬೆಲೆ ಕುಗ್ಗಲಿಲ್ಲ. ನಕಲಿ ಚಿನ್ನ ಚೊಕ್ಕ ಚಿನ್ನದ ಸ್ಥಾನವನ್ನು ಆಕ್ರಮಿಸಲಿಲ್ಲ. ಆಮೇಲೂ ಎಷ್ಟೋ ಜನ ಕೃತ್ರಿಮ ಸುವರ್ಣವನ್ನು ತಯಾರಿಸಲು ಯತ್ನಿಸಿದರು; ಯಾವುದೂ ಸಫಲ ವಾಗಿಲ್ಲ. ಮತ್ತೆ ಈ ಇಪ್ಪತ್ತನೆಯ ಶತಕದಲ್ಲಿ ಆ ಪ್ರಯತ್ನ ವಿಶೇಷ ಆಡಂಬರ ದಿಂದ ಆರಂಭವಾದಂತೆ ಕಾಣುತ್ತದೆ. ಈ ಸ್ವರ್ಣಕಾರನು ಪತ್ರದಲ್ಲಿ ತನ್ನ ಸಂಕಲ್ಪವನ್ನು ದೃಢವಿಶ್ವಾಸದಿಂದ ಸಾರಿದ್ದಾನೆ—ಚೊಕ್ಕ ಚಿನ್ನದ ಹೆಚ್ಚಳವನ್ನು ಹೊಡೆದು ಹಾಕುವೆ, ಬಂಗಾರವನ್ನು ಹಿತ್ತಾಳೆಗಿಂತ ಕಡೆ ಮಾಡಿ ಬಿಡುವೆ ಎಂದು ಕೊಚ್ಚಿಕೊಂಡಿದ್ದಾನೆ. ಒಂದು ವೇಳೆ ಅವನು ನಿಜವಾಗಿಯೂ ಸತ್ಯ ಬಂಗಾರವನ್ನೇ ಮಾಡಲು ಸಮರ್ಥನಾಗಿದ್ದರೆ, ಈ ಪಾರ್ಸಲನ್ನು ಕೈವಶ ಮಾಡಿಕೊಳ್ಳುವುದರಿಂದ ನಿಮಗೆ ಎಷ್ಟು ಲಾಭವಾದೀತು ?"

—"ಹಾಗಾದರೆ ನೀನಾದರೂ ಇದನ್ನು ಸ್ಕಾಟ್ಲಂಡ್ ಯಾರ್ಡಿಗೆ ಒಯ್ಯಲು ಏಕೆ ವ್ಯಗ್ರನಾಗಿದ್ದೀ ?"

—"ಬಂಗಾರ ಉಪಲಕ್ಷ್ಯವಷ್ಟೆ; ಮುಖ್ಯ ಈ ಪತ್ರ. ಈ ಪತ್ರವನ್ನು ನೋಡಿದರೆ ಸರಕಾರ ಭಯಭೀತವಾಗದೆ ಇರದು. ಇದನ್ನು ಬರೆದವನನ್ನು ಹುಡುಕಲು ಆಕಾಶ–ಪಾತಾಳ ಒಂದು ಮಾಡದೆ ಬಿಡುವುದಿಲ್ಲ. ನಿಮಗೇನು ಗೊತ್ತಿಲ್ಲವೇ—ವಿಶ್ವದ ಶಾಸನ ಚಕ್ರವನ್ನು ನಡೆಸುವುದು ಈ ಬಂಗಾರ; ಎಲ್ಲ ಆರ್ಥಿಕ ಸಮಸ್ಯೆಗಳನ್ನು ಬಿಡಿಸುವುದು ಈ ಬಂಗಾರ; ಸಮಾಜದ ಕಟ್ಟು ನಿಟ್ಟು ಶ್ಶಾಂತಿಗಳನ್ನು ಕಾಯುವುದು ಈ ಬಂಗಾರ. ಈ ಬಂಗಾರ ಕಲ್ಲು-ಹೆಂಟೆ ಗಳಂತೆ ಸುಲಭ್ಯವಾಗಿ ಬಿಟ್ಟರೆ ಎಂಥ ಭಯಂಕರ ಅನರ್ಥ ಒದಗುವುದು ! ಸಮಾಜ ವಿಧ್ವಸ್ತವಾಗುವುದು; ಬ್ಯಾಂಕ್ ನೋಟ ಗಳು ತನ್ನ ಕಾಗದ ತುಂಡಿ ಗಿಂತಲೂ ಕಡೆಯಾಗುವವು; ಕೃಷಿ ವ್ಯಾಪಾರ ಪಶುಪಾಲನ ಶಿಲ್ಪ ಇವೆಲ್ಲವು ಗಳು ನಿಂತುಬಿಡುವವು ! ಇಂಥ ವಿಶ್ವವ್ಯಾಪೀ ವಿಪ್ಲವದಲ್ಲಿ ನಮ್ಮ ಅವಸ್ಥೆ

ಏನಾಗಬಹುದು ? ನಾವೇನು ಮಾಡಬಲ್ಲೆವು ?"

ಕಾನ್ಸ್‌ಟೆಬಲ್ ಹಜೆಸನ ವಕ್ತೃತ್ವದಿಂದ ಅವನ ಮೇಲಿನ ಸಾರ್ಜಂಟ್ ಲುಕಾಸ್ ಬೆಸ್ಪಾದ. ಹತಾಶ ಭಾವದಿಂದ ಅವನೆಂದ: "ಕುದುರೆಗೆ ಹುಲ್ಲು ಕೊಯ್ಯುವುದೇ, ಮತ್ತೇನು ಮಾಡುವುದು ? ಸಿಕ್ಕುವ ಸಂಬಳ ಒಂದು ದಿನದ ಹೊಟ್ಟೆಗೂ ಸಾಲಲಿಕ್ಕಿಲ್ಲ—ನೀನೆನ್ನುವುದು ನಿಜವೇ. ಈ ಪಾರ್ಸಲಿನ ಬೆಲೆ ಏನೇ ಇದ್ದುಕೊಳ್ಳಲಿ, ನೀನೊಂದು ವಿರಾಟ್ ರಹಸ್ಯದ ಎಳೆಯನ್ನು ಹಿಡಿದಿದ್ದೀ. ಇವನ ಪ್ರಯತ್ನವನ್ನು ವಿಫಲಗೊಳಿಸದಿದ್ದರೆ ಸಮಾಜ, ದೇಶ ಧ್ವಂಸವಾಗುವವು. ಆದರೆ ನಮಗೆಷ್ಟು ಸಾಧ್ಯ? ಸ್ಕಾಟ್ಲೆಂಡ ಯಾರ್ಡಿಗೆ ಸುದ್ದಿ ಮುಟ್ಟಿಸಿದರಾಯಿತು."

## ೨

ಅಂಧಕಾರಾಚ್ಛನ್ನವಾದ ಹಳ್ಳಿಯ ಹೊರಬದಿಯಲ್ಲಿ ಸಣ್ಣ ನಿಲ್ದಾಣ. ರಾತ್ರಿ ಒಂಬತ್ತಕ್ಕೆ ಒಂದು ಲೋಕಲ್ ಟ್ರೇನ್ ಬಂದು ನಿಂತಿತು. ಒಬ್ಬಳೇ ಒಬ್ಬ ಯುವತಿ ಗಾಡಿಯಿಂದಿಳಿದಳು—ಹೆಸರು ಬಾರಬಾರಾ ಫೆಸ್ತನ್. ನಿಲ್ದಾಣ ಪೇದೆ ಅವಳ ತೊಗಲಿನ ಬ್ಯಾಗನ್ನು ಕೆಳಗಿಳಿಸಿದ. ಗಾಡಿ ಹೊರಟುಹೋಯಿತು. ಬಾರಬಾರಾ ಕಗ್ಗತ್ತಲೆ ಕವಿದ ನಿಲ್ದಾಣದ ನಾಲ್ಕೂ ಕಡೆ ನೋಡಿದಳು. ತಾನು ಅಪಾರ ತಮಸ್ಸಾಗರದಲ್ಲಿ ಬಿದ್ದಿರುವಂತೆ ಅವಳಿಗೆನಿಸಿತು. ಅವಳಲ್ಲಿ ಸಂಪೂರ್ಣ ನಿರಾಶ್ರಯಳು.

ಹಾಗೆ ಅವಳು ಸುತ್ತುಮುತ್ತ ನೋಡುತ್ತ ನಿಂತುದನ್ನು ಕಂಡು ಪೋರ್ಟರ್ ನಿದ್ರೆಯಿಂದ ಭಾರವಾದ ಕಂಠದಿಂದ, "ಎಲ್ಲಿ ಹೋಗಬೇಕು ಮಿಸ್ ?" ಎಂದು ಕೇಳಿದ.

"ಸ್ವಲ್ಪ ದೂರ—ಫಸವ್ಯೂ ಎಂಬ ಮನೆಗೆ ಹೋಗಬೇಕಾಗಿದೆ. ಹೋಗುವುದು ಹೇಗೆ ಹೇಳಬಲ್ಲೆಯಾ ?" ತರುಣಿ ಕೇಳಿದಳು.

ಈ ಪ್ರಶ್ನೆಯಿಂದ ಪೇದೆಯ ನಿದ್ದೆ ಹಾರಿ ಹೋಯಿತು. ವಿಸ್ಮಯವಿಸ್ಫಾರಿತ ನೇತ್ರಗಳಿಂದ ಅವಳ ಮೋರೆ ನೋಡಿದ. ಅವನು ಹಾಗೆ ನೋಡುವುದನ್ನು

ಕಂಡು ಬಾರಬಾರಾ ಮನಃಕ್ಷೋಭದಿಂದ ಹುಬ್ಬುಗಂಟಿಕ್ಕಿದಳು. ಅದನ್ನರಿತು ಪೋರ್ಟರ್ ತಟ್ಟನೆ ಉತ್ತರವಿತ್ತ "ಫಸ್‌ವ್ಯ್ಯಾಗೆ ಹೋಗುವಿರಾ ? ಇಲ್ಲಿಂದ ಸುಮಾರು ಐದು ಮೈಲಾಗುತ್ತದೆ ಮಿಸ್ !"

ಐದು ಮೈಲು ! ಬಾರಬಾರಾಳ ಮುಖದಿಂದ ಆರ್ತನಾದದಂತಹ ಹತಾಶಾ ಸೂಚಕ ಅಸ್ಪಷ್ಟ ಶಬ್ದ ಹೊರಟಿತು. ಗೊತ್ತಿಲ್ಲದ ನಾಡು, ಕಗ್ಗತ್ತ ಲೆಯ ರಾತ್ರಿ, ಇನ್ನೂ ಐದು ಮೈಲು ಹೋಗಬೇಕೆ ? ಇಡೀ ದಿನದ ಶ್ರಮ ದಿಂದ ದಣಿದಿದ್ದಳು; ಹಸಿವೆ ನೀರಡಿಕೆಗಳಿಂದ ಹೈರಾಣಾಗಿದ್ದಳು. ಜೊತೆಗೆ ಮತ್ತೊಬ್ಬರಿಲ್ಲ. ತರುಣಿಯ ತಲೆ ದಿಮ್ಮೆಂದಿತು; ಮನಸು ದಿಗಿಲುಗೊಂಡಿತು.

"ಹೂಂ. ಈ ಕತ್ತಲೊಳಗೆ ಇನ್ನೂ ಐದು ಮೈಲು ಹೋಗಬೇಕೋ ? ಬಹಳ ಕಷ್ಟವೇ ಅಪ್ಪ. ಒಂದು ಗಾಡಿ-ಗೀಡಿ ಗೊತ್ತುಮಾಡಿ ಕೊಡುವೆಯಾ ? ಟ್ಯಾಕ್ಸಿ, ಕುದುರೆ ಗಾಡಿ ಅಥವಾ ಏನಾದರೊಂದು."

ಪೇದೆ ಅಡ್ಡ ತಲೆ ಹಾಕಿದ. "ಇಲ್ಲ ಮಿಸ್ ! ಈಗ ಪಕ್ಕನೆ ಗಾಡಿ-ಪಾಡಿ ಸಿಕ್ಕುವಂತಿಲ್ಲ. ಸ್ಟ್ಯಾಂಪನೇ ಒಂದು ಫೋರ್ಡ್ ಗಾಡಿ ಇಟ್ಟಿದ್ದ; ಸ್ಟೇಶನ್ನಿನಿಂದ ಗ್ರಾಮಾಂತರಗಳಿಗೆ ಜನರನ್ನು ಒಯ್ಯುತಿದ್ದ, ತರುತ್ತಿದ್ದ. ಅದೀಗ ಕೆಟ್ಟುಬಿದ್ದಿದೆ. ಕುದುರೆ ಬಂಡಿ-ಗಿದುರೆ ಬಂಡಿ ಯಾವುದೂ ಸಿಗುವು ದಿಲ್ಲ. ಒಂದು ವೇಳೆ ಯಾವುದಾದರೂ ಗಾಡಿ ಇದ್ದಿದ್ದರೂ ನಿಮ್ಮನ್ನು ಅಲ್ಲಿಗೆ ಒಯ್ದು ಮುಟ್ಟಿಸಲು ಡ್ರೈವರ್ ಒಪ್ಪುತ್ತಲೂ ಇರಲಿಲ್ಲ ಮಿಸ್."

"ಏಕೆ ? ನಾನು ಬಾಡಿಗೆ ಕೊಡುವುದಿಲ್ಲವೇ ?" ತರುಣಿ ವಿಸ್ಮಯ ದಿಂದ ಕೇಳಿದಳು.

"ಬಾಡಿಗೆ ಪ್ರಶ್ನೆ ಅಲ್ಲ ಮಿಸ್, ಆ ಮನೆಗೆ ಹೋಗುವುದಕ್ಕೇ ಹೆದರು ತ್ತಾರೆ."

ಬಾರಬಾರಾ ಸ್ತಂಭಿತಳಾದಳು. ಅಲ್ಲಿ ಯಾವ ಭಯವಿದೆ ಎಂಬುದನ್ನು ತಿಳಿದುಕೊಳ್ಳಲು ಅವಳ ಮನಸ್ಸು ಆಗ್ರಹಪಟ್ಟಿತು. ಆದರೆ ಪೋರ್ಟರ್ ಅವ ಳಿಗೆ ಹೆಚ್ಚಿಗೇನನ್ನೂ ಹೇಳಲು ಒಪ್ಪಲಿಲ್ಲ. ಸ್ಟೇಶನಿನಲ್ಲಿ ಒಬ್ಬ ಕೂಲಿ ಕೂಡ ಕಣ್ಣಿಗೆ ಬೀಳಲಿಲ್ಲ. ಬಾರಬಾರಾ ನಿರುಪಾಯಳಾಗಿ ತನ್ನ ಬ್ಯಾಗನ್ನು ತೆಗೆದು ಕೊಂಡು ನಿಲ್ದಾಣದಿಂದ ಹೊರಬಿದ್ದು ಹಾದಿಗೆ ಬಂದಳು. ಕಗ್ಗತ್ತಲೆಯಲ್ಲಿ ನಿರ್ಜನವಾದ ಮಾರ್ಗವನ್ನು ಕ್ರಮಿಸತೊಡಗಿದಳು. ಹೆಜ್ಜೆಹೆಜ್ಜೆಗೂ ಭಯ

ವಾಗುತ್ತಿತ್ತು. ಇದೇ ಕೊನೆಯ ಕಷ್ಟವಲ್ಲ, ಇನ್ನೂ ಎಷ್ಟೋ ಕಷ್ಟಗಳನ್ನು ತಾನು ಅನುಭವಿಸುವುದಿದೆ. ಆದರೂ ಅಲ್ಲಿಂದ ಹಿಂದೆಗೆಯುವ ವಿಚಾರ ಅವಳಿಗಿಲ್ಲ.

ಹಳ್ಳಿನಾಡಿನ ಕೆಟ್ಟ ಹಾದಿ. ಮೇಲೆ ಸಣ್ಣಾಗಿ ಮಳೆ ಆರಂಭವಾಗಿತ್ತು. ಅವಳ ಕೋಟು ಬಟ್ಟೆಗಳೆಲ್ಲ ತೊಯ್ದುವು. ಹಸಿದ ದಣಿದ ಅವಳ ದೇಹ ಒದ್ದೆ ಬಟ್ಟೆಗಳನ್ನು ಹೊತ್ತುಕೊಂಡು ತಗ್ಗು-ದಿನ್ನೆಗಳಲ್ಲಿ ನೀರು-ಕೆಸರುಗಳಲ್ಲಿ ಮುಗ್ಗರಿಸುತ್ತ ನಡೆದಿತ್ತು. ಸುತ್ತಮುತ್ತ ಯಾವ ಕಡೆಗೂ ದೀಪದ ಮಿಣುಕಿಲ್ಲ; ಜನಪ್ರಾಣಿಯ ಸುಳುವಿಲ್ಲ. ದಾರಿಯ ಪಕ್ಕದಲ್ಲಿ ಅಲ್ಲಲ್ಲಿ ಇದ್ದ ಬೇಲಿಗಳಲ್ಲಿ ಹಕ್ಕಿಗಳ ಉಲುವೂ ಇಲ್ಲ. ಪ್ರೇತಗಳ ದೇಶಕ್ಕೇ ಬಂದು ಬಿಟ್ಟೇನೆಂದು ಅವಳಿಗೆ ನಿಸಿತ್ತು.

ಬಾರಬಾರಾ ಹೀಗೆಯೇ ಕಾಲೆಳೆದುಕೊಂಡು ಮೈಲು—ಮೈಲುವರೆ ದಾರಿ ನಡೆದಳು. ಅವಳ ಕಾಲುಗಳು ತೀರಾ ದಣಿದವು; ಮೈ ಸೋತಿತು. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಅವಸನ್ನಳಾಗಿ ಬಿದ್ದು ಅಡವಿ ಹೆಣವಾಗುವೆನೋ ಎಂದು ಅವಳಿಗೆ ಭಯವಾಯಿತು. ಅವಳ ತಲೆ ತಿರುಗತೊಡಗಿತು, ಕಾಲು ಏಳದಾದವು, ಒದ್ದೆ ಬಟ್ಟೆಗಳು ಹೊರಲಾರದಷ್ಟು ಭಾರವಾದವು, ಚಳಿಯಿಂದ ಮೈಯಲ್ಲೆಲ್ಲ ಕಟಕಟ ನಡುಗು ಹುಟ್ಟಿತು. ಅವಳು ಹತಾಶಭಾವದಿಂದ ಹಿಂದಿರುಗಿ ನೋಡಿದಳು. ದೂರದಲ್ಲಿ ಏನೋ ದೀಪ ಕಂಡಂತೆ ಭಾಸವಾಯಿತು. ಬಾರಬಾರಾ ದಾರಿಯಬದಿಯಲ್ಲಿ ನಿಂತು ದೀಪ ಯಾವಕಡೆ ನಡೆದಿದೆ ಎಂದು ನೋಡತೊಡಗಿದಳು. ಎರಡು ಮೂರು ನಿಮಿಷಗಳಲ್ಲಿ ಪ್ರಕಾಶ ಉಜ್ವಲವಾಯಿತು. ಮೋಟರ್ ಕಾರಿನ ಫಸ್‌ಫಸ್ ಶಬ್ದ ಕೇಳಿಸಿತು. ಅವಳಿಗಾಗ ಸ್ವಲ್ಪ ಧೈರ್ಯ ಬಂದಂತಾಯಿತು. ಆ ಕಾರಿನಲ್ಲಿ ತನಗೆ ಆಶ್ರಯ ಸಿಕ್ಕುವುದೆಂದು ಅವಳು ಆಶಿಸಿದಳು. ಆದರೆ ಆ ಆಶೆಗೆ ಸಂಗತವಾದ ಕಾರಣವೇನೂ ಇರಲಿಲ್ಲ.

ಬಾರಬಾರಾ ಮತ್ತೆ ಯೋಚಿಸಿದಳು: ಕಾರು ನನ್ನನ್ನು ಲಕ್ಷಿಸದೆ ಹೊರಟುಹೋದರೆ— ನಾನು ಸನ್ನೆ ಮಾಡಿದರೂ ಡ್ರೈವರನಿಗೆ ನಾನು ಕಾಣದಿದ್ದರೆ—ನನ್ನ ಉದ್ಧಾರದ ಆಸೆಯೆಲ್ಲ ಮಣ್ಣುಗೂಡುವುದು. ಕಾರು ಹತ್ತಿರ ಬರುವುದರೊಳಗಾಗಿ ಅವಳು ಸರ್ರನೆ ನಡುದಾರಿಗೆ ಹೋಗಿ ನಿಂತಳು. ಎರಡೂ ಕೈಗಳನ್ನು ಮೇಲೆತ್ತಿ ಗಾಡಿಯನ್ನು ತರುಬುವಂತೆ ಸೂಚಿಸಿದಳು. ಡ್ರೈವರು

ಕಾರನ್ನು ನಿಲ್ಲಿಸಿ ಕೆಳಗಿಳಿದನು. ಕಾರಿನ ದೀಪದ ಬೆಳಕಿನಲ್ಲಿ ಡ್ರೈವರ್‌ನ ಮುಖ ವನ್ನು ನೋಡಿದಾಗ, ಇವನನ್ನು ಸಹಾಯ ಯಾಚಿಸಿದರೆ ವ್ಯರ್ಥ ಹೋಗಲಾರ ದೆಂದು ಅವಳಿಗೆನಿಸಿತು.

—"ನನ್ನಿಂದ ನಿಮಗೇನಾದರೂ ಸಹಾಯವಾಗಬೇಕೆ? ನೀವು ಗಾಡಿ ತರುಬಲು ಕೈಯೆತ್ತಿರುವುದನ್ನು ಕಂಡು ಗಾಡಿ ನಿಲ್ಲಿಸಿದೆ." ಎಂದು ಡ್ರೈವರ್ ಕೇಳಿದ.

ಆ ಯುವಕ ಚರ್ಮನಿರ್ಮಿತ ಕೋಟನ್ನು ಧರಿಸಿದ್ದ. ದೀರ್ಘಕಾಯದ ಮೂರ್ತಿ. ಕಂಠಸ್ವರ ಮಧುರ. ಅದರಲ್ಲಿ ಸಹೃದಯತೆ ಒಡೆದು ಕಾಣುತ್ತಿತ್ತು. ಅವನ ಮಾತನ್ನು ಕೇಳಿ ಬಾರಬಾರಾಳ ಹತಾಶಹೃದಯ ಆಶೆಯಿಂದ ತುಂಬಿತು. ಈ ಯುವಕನನ್ನು ನಂಬಿದರೆ ಯಾವ ವಿಪತ್ತಿನ ಭಯವೂ ಇಲ್ಲ ಎಂದು ಅವಳಿ ಗೆನಿಸಿತು.

—"ಹೌದು. ನಿಮ್ಮ ಸಹಾಯ ನನಗೆ ಬೇಕಾಗಿದೆ. ಇಲ್ಲಿಂದ ನಾಲ್ಕು ಮೈಲು ದೂರದಲ್ಲಿ ಒಂದು ಮನೆಯಿದೆ—ಫಸ್‌ವ್ಯೂ ಎಂತ. ನನ್ನನ್ನು ನಿಮ್ಮ ಕಾರಿನಲ್ಲಿ ಕರೆದೊಯ್ದು ಅಲ್ಲಿಗೆ ಬಿಟ್ಟರೆ ಬಹಳ ಉಪಕಾರವಾಗುತ್ತದೆ."

ಅವಳ ಮಾತನ್ನು ಕೇಳಿ ಮೋಟರ್ ಚಾಲಕನ ಪ್ರಸನ್ನಮುಖ ಒಮ್ಮೆಲೆ ಅತಿ ಗಂಭೀರವಾಯಿತು. ಕ್ಷಣಹೊತ್ತು ಅವನು ಚಂಚಲನಾದ. ತೀಕ್ಷ್ಣ ದೃಷ್ಟಿಯಿಂದ ಬಾರಬಾರಾನ ಮುಖವನ್ನು ನಿಟ್ಟಿಸಿ ಅವಳ ಮನೋಭಾವವನ್ನು ಅರಿತುಕೊಳ್ಳಲು ಯತ್ನಿಸಿದ. ಆಮೇಲೆ ಅವಿಚಲಿತ ಸ್ವರದಿಂದಲೇ ಉತ್ತರ ವಿತ್ತ, "ಒಳ್ಳೇದು, ಆಗಬಹುದು. ನಿಮಗೆ ಈ ಉಪಕಾರ ಮಾಡುವುದಕ್ಕೆ ನನ ಗೇನು ಆತಂಕವಿಲ್ಲ. ಗಾಡಿಯಲ್ಲಿ ಕುಳಿತುಕೊಳ್ಳಿರಿ."

ಮೋಟರ್ ಚಾಲಕನು ಬಾಗಲು ತೆರೆದು ಬಾರಬಾರಾನನ್ನು ತನ್ನ ಪಕ್ಕದ ಆಸನದಲ್ಲಿ ಕುಳ್ಳಿರಿಸಿ, ತಾನೂ ಕುಳಿತು ಗಾಡಿಯನ್ನು ಬಿಟ್ಟ.

ಯುವಕನು ನಿಸ್ತಬ್ಧ ಭಾವದಿಂದ ಗಾಡಿ ಹೊಡೆಯುತ್ತಿದ್ದ. ಅವನ ನಿರ್ವಿಕಾರ ಗಂಭೀರ ಮುಖವನ್ನು ನೋಡುತ್ತ ಬಾರಬಾರಾನ ಮನಸು ಅಸ್ವಸ್ಥ ವಾಗುತ್ತಲಿತ್ತು. ಈ ಯುವತಿ ಒಬ್ಬಂಟಿಗಳಾಗಿ, ಅತ್ಯಂತ ಅಸಹಾಯ ಸ್ಥಿತಿ ಯಲ್ಲಿ, ಈ ರಾತ್ರಿಯಲ್ಲಿ ಈ ದಾರಿಯಲ್ಲಿ ಹೊರಟಿರುವ ಉದ್ದೇಶವೇನಿರಬಹುದು?

ಇವಳು ಹೇಳಿದ ಆ ಮನೆಗೆ ಏತಕ್ಕೆ ಹೋಗುತ್ತಿರಬಹುದು ? ಇವಳ ಕಾರ್ಯ ವೇನೋ ರಹಸ್ಯಪೂರ್ಣವಾದದ್ದು. ಇದರ ಕಾರಣವನ್ನು ತಿಳಿಯುವ ಉಪಾ ಯವೇನು ? ಯಾವ ರೀತಿಯಲ್ಲಿ ಮಾತನ್ನಾರಂಭಿಸಿದರೆ ಅಶಿಷ್ಟವ್ಯವಹಾರವೆನಿ ಸಲಿಕ್ಕಿಲ್ಲ ?—ಡ್ರೈವರ್ ಯುವಕ ವಿಚಾರಿಸುತ್ತಲಿದ್ದ.

ಕಿಟ್ ಏರೋಸ್ಮಿಥ್ ಆ ಯುವಕನ ಹೆಸರು. ಯುವತಿ ಹೋಗಬಯ ಸಿದ ಆ ಮನೆ ಅವನಿಗೆ ಅಷ್ಟೇನೂ ಅರಿಯದ್ದಲ್ಲ. ಆ ಮನೆಯಲ್ಲಿ ಇರುವವರು ಸಜ್ಜನರಲ್ಲ, ಅವರ ದುರ್ವ್ಯವಹಾರದ ಬಗ್ಗೆ ನಾನಾ ವದಂತಿಗಳುಂಟು. ಅವ ರೊಡನೆ ಈ ಯುವತಿಯ ಸಂಬಂಧವೇನು ? ಈ ರಾತ್ರಿ ಸಮಯದಲ್ಲಿ ಅವರ ಕಡೆ ಇವಳೇತಕ್ಕಾಗಿ ಹೋಗುತ್ತಿರಬಹುದೆಂಬುದನ್ನು ತಿಳಿದುಕೊಳ್ಳಲು ಅವನಿಗೆ ಕುತೂಹಲ ಪ್ರಬಲವಾಗಿದ್ದರೂ ಅದನ್ನೆಲ್ಲ ಅವಳನ್ನು ಕೇಳುವುದು ಸರಿಯಲ್ಲ ವೆಂದು ಅವನಿಗೆನಿಸಿತು. ಆದರೆ ಸುದೀರ್ಘ ಕಾಲ ಬಾಯಿ ಮುಚ್ಚಿಕೊಂಡಿರು ವುದೂ ಮನಸಿಗೆ ಸೊಗಸಿಲ್ಲ.

ಕೊನೆಗೆ ಬಾರಬಾರಾನೇ ಮಾತನ್ನಾರಂಭಿಸಿದಳು. ಅವಳೆಂದಳು "ನನಗೆ ಎಲ್ಲಕ್ಕಿಂತಲೂ ಹೆಚ್ಚಿನ ಸಂಕಟ ಇರುವುದೆಂದರೆ, ನಾನು ಹೋಗುತ್ತಿರುವ ಸ್ಥಾನದಲ್ಲಿ ನಾನೇನು ಕಂಡುಕೊಳ್ಳುವೆನೋ, ನನ್ನ ಅಭ್ಯರ್ಥನೆ ಯಾವ ರೀತಿ ಆಗುವುದೋ,—ಈ ವಿಷಯದಲ್ಲಿ ನನಗೆ ಯಾವ ಕಲ್ಪನೆಯೂ ಇಲ್ಲ." ಅವಳು ಬೇರೆ ಯಾವ ಮಾತನ್ನೂ ಆಡದೆ ಮೊಟ್ಟಮೊದಲಲ್ಲಿಯೇ ಈ ವಿಷಯವನ್ನೇ ಏಕೆ ತೆಗೆದಳೆಂಬುದು ಅವಳದು ಅವಳಿಗೇ ತಿಳಿಯದು. ಅವಳು ಕಿರಿಯಗಲಾದ ಹ್ಯಾಟಿನಡಿಯಿಂದ ಪಕ್ಕದಲ್ಲಿ ಕುಳಿತಿದ್ದ ಯುವಕನ ಮುಖವನ್ನು ನೋಡಿ ದಳು. ಆದರೆ ಅವನ ಮುಖಭಾವದಲ್ಲಿ ಯಾವ ಪರಿವರ್ತನೆಯೂ ಕಂಡು ಬರಲಿಲ್ಲ.

ಏರೋಸ್ಮಿಥ್ ಕ್ಷಣಹೊತ್ತು ಮೌನವಾಗಿದ್ದು ಉತ್ತರವಿತ್ತ, "ಕೌತೂ ಹಲದ ವಿಷಯವೇ ಸರಿ. ವಿಷಯ ಗುಟ್ಟಿನದಲ್ಲದಿದ್ದರೆ, ಅದರ ಮರ್ಮವನ್ನು ನನ್ನೆದುರು ಹೇಳಿದರೆ ಅಸಂಗತವಾದೀತೆ ?"

ಆದರೆ ಬಾರಬಾರಾ ಬೇರೆ ಮಾತನ್ನು ತೆಗೆದಳು. ಅವಳು ಸ್ವಲ್ಪ ಸಂಕೋಚದಿಂದ, "ತಮ್ಮ ಹತ್ತಿರ !ಊಟ ತಿಂಡಿ ಇದ್ದಿರಲಿಕ್ಕಿಲ್ಲವಲ್ಲವೇ ? ಬರಿ ಹೊಟ್ಟೆಯಿಂದ ಹೆಚ್ಚು ಮಾತನಾಡುವುದಕ್ಕೂ ಕಷ್ಟವಾಗಿದೆ. ನನ್ನ ಈ

ಮಾತನ್ನು ಕೇಳಿ ತಮಗೆ ಬಹುಶಃ—"

—"ಓ, ನೀವು ಉಂಡೇ ಇಲ್ಲವೆಂದು ತೋರುತ್ತದೆ? ನಿಮ್ಮ ಮೋರೆ ನೋಡಿಯೇ ಮೊದಲೇ ಅದನ್ನು ನಾನು ತಿಳಿದುಕೊಳ್ಳಬೇಕಿತ್ತು. ಆದರೆ ತಿಳಿದಿದ್ದರೂ ಅದನ್ನು ನಿಮ್ಮನ್ನು ಕೇಳುವುದಕ್ಕೆ ಸಂಕೋಚವಾಗುವುದು ಸ್ವಾಭಾವಿಕ. ಇದಕ್ಕೆ ಕಾರಣವನ್ನು ಹೇಳುವ ಅಗತ್ಯವಿಲ್ಲ. ಇರಲಿ. ನೀವು ಯಾವಾಗ ಉಂಡಿದ್ದಿರಿ?"

ಮಾತನ್ನು ಮುಗಿಸುತ್ತ ಏರೋಸ್ಮಿಥ್ ಗಾಡಿಯನ್ನು ನಿಲ್ಲಿಸಿದ.

—"ಗ್ಯಾರೆ-ಡು-ನಾರ್ಡ್ ಸ್ಟೇಶನ್ನಿನಲ್ಲಿ ಗಾಡಿ ಹಿಡಿಯುವುದಕ್ಕೆ ಬಹಳ ಅವಸರವಾಯಿತು. ಮುಂಜಾನೆ ಏನೂ ತಿನ್ನದೆ ಹೊರಟದ್ದು ನೆನಪೇ ಇಲ್ಲ. ಆಮೇಲೆ ಡೋವರಿನಲ್ಲಿಯೂ ಗಾಡಿ ಹಿಡಿಯುವುದಕ್ಕೆ ಅದೇ ಹಾಡು. ದಾರಿಯಲ್ಲಿ ಯಾವುದೊಂದು ಸ್ಟೇಶನ್ನಿನಲ್ಲಿ ಉಂಡರಾಯಿತೆಂದುಕೊಂಡಿದ್ದೆ. ಆದರೆ ಎಲ್ಲಿಯೂ ಭೋಜನಾಲಯವನ್ನೇ ಕಾಣಲಿಲ್ಲ."

ಏರೋಸ್ಮಿಥ್ ವ್ಯಥಿತ ದೃಷ್ಟಿಯಿಂದ ಬಾರಬಾರಾನ ಮೋರೆಯ ಕಡೆ ನೋಡಿ ಮಾತನಾಡಿದ, "ನಿಮ್ಮ ಮಾತಿನಿಂದ ಈವೊತ್ತು ಇಡೀ ದಿನ ನೀವು ಏನೂ ತಕ್ಕೊಂಡಿಲ್ಲವೆಂದು ತೋರುತ್ತದೆ." ಇಡೀ ದಿನ ಉಪವಾಸವಿದ್ದು ದೀರ್ಘ ಪಥವನ್ನು ಕ್ರಮಿಸುವುದು ಯಾರಿಗಾದರೂ ಅಸಾಧ್ಯವೆಂದು ಅವನ ಗ್ರಹಿಕೆ.

"ಇಲ್ಲ, ಆಹಾರವಿಲ್ಲ, ಪಾನವೂ ಇಲ್ಲ. ಯಾವುದೂ ಆಗಿಲ್ಲ." ತರುಣಿ ಮೃದುನಗೆಯೊಡನೆ ಹೇಳಿದಳು.

ಏರೋಸ್ಮಿಥ್ ಕಾರಿನ ಹಿಂಬದಿಯ ಆಸನದಡಿಯಿಂದ ಒಂದು ಥರ್ಮಾಸನ್ನೂ ಒಂದು ಪ್ಯಾಕೆಟ್ಟನ್ನೂ ತೆಗೆದ. ಅವುಗಳಲ್ಲಿ ಬಿಸಿ ಬಿಸಿ ಕಾಫಿ ಮತ್ತು ಸಾಕಷ್ಟು ಸ್ಯಾಂಡ್‌ವಿಚ್ ಇದ್ದವು. ಖಾದ್ಯ ಪೇಯಗಳೆರಡೂ ಲಭಿಸಿದಂತಾಯಿತು.

ಗಾಡಿ ನಿಂತಿತ್ತು. ಆ ಸುಯೋಗದಲ್ಲಿಯೇ ಏರೋಸ್ಮಿಥ್ ಬಾರಬಾರಾನ ಮುಖವನ್ನು ಪೂರ್ಣ ದೃಷ್ಟಿಯಿಂದ ನೋಡಿದ. ಮೊದಲು ನೋಡಿದಾಗಲೇ ಎನಿಸಿತ್ತು, ಅವಳು ರೂಪವತಿಯೆಂದು. ಈಗ ಆ ರೂಪ ಇಲ್ಲಿ ಕಾಣಸಿಕು

ವಂತಹದಲ್ಲ, ಅಪರೂಪ ಎಂದು ಎನಿಸಿತು. ಆದರೆ ಆವಳ ರೂಪಜ್ಯೋತಿ ಪ್ರಖರವಲ್ಲ, ಕೋಮಲ, ನಯನ ತೃಪ್ತಿಕರ. ಉಪವಾಸ, ದೀರ್ಘಪ್ರವಾಸ ಪರಿಶ್ರಮಗಳಿಂದ ಮುಖ ಸ್ವಲ್ಪ ಬಾಡಿದ್ದರೂ ಲಾವಣ್ಯ ಮಂಡಿತವಾದ ಕಳೆ ಯಿತ್ತು. ಪಾನಾಹಾರಗಳಿಂದ ಅವಳು ತೃಪ್ತಳಾದ ಬಳಿಕ ಅವನೆಂದ, “ಈ ಗಭೀರ ರಾತ್ರಿಯಲ್ಲಿ ಜೊತೆಗೆ ಯಾರೂ ಇಲ್ಲದೆ ನೀವೊಬ್ಬರೇ ಹಳ್ಳಿಯ ಘಸವ್ಯಾ ಭವನಕ್ಕೆ ಹೊರಟಿದ್ದೀರಿ; ಅಲ್ಲಿಯವರು ನಿಮ್ಮನ್ನು ಕರೆದೊಯ್ಯುವುದಕ್ಕೆ ಯಾರೂ ಬಂದಿಲ್ಲ. ಹೀಗೇಕಾಯಿತೆಂಬುದನ್ನು ಹೇಳಲು ಅಡ್ಡಿಯಿಲ್ಲವಷ್ಟೇ?”

ಬಾರಬಾರಾ ವಿವೃತಳಾಗಿ ಅವನ ಗಂಭೀರ ಮುಖದ ಕಡೆ ನೋಡಿದಳು. ಗಾಡಿಯಲ್ಲಿ ಆಶ್ರಯವಿತ್ತು, ಆಹಾರವಿತ್ತು ತಣಿಸಿದ ಈ ಅಪರಿಚಿತ ಯುವಕ ನಿಗೆ, ಈ ಪ್ರಶ್ನೆಯನ್ನು ಕೇಳುವ ಅಧಿಕಾರವೂ ಉಂಟೆ? ಈ ಪ್ರಶ್ನೆಗೆ ಉತ್ತರ ಕೊಡಬೇಕೇ ಬೇಡವೇ ಎಂದವಳು ಯೋಚಿಸಿದಳು. ಕೆಲಹೊತ್ತಿನ ವಿಚಾರದ ಅನಂತರ ಅವಳ ಧಾರಣೆ ಅನುಕೂಲವಾಯಿತು. ಪರಿಚಯ ಅಲ್ಪ ಸಮಯ ದ್ದಾದರೂ ಆ ಯುವಕನ ನಡೆ-ನುಡಿಗಳಿಂದ ಅವನು ಸರಲ ಪ್ರಕೃತಿಯುವ ನೆಂದೂ, ಕರುಣಹೃದಯನೆಂದೂ ಚರಿತ್ರವಂತನೆಂದೂ ಅವಳಿಗೆನಿಸಿತ್ತು; ಅವನು ವಿಶ್ವಾಸಯೋಗ್ಯನೆಂದೂ ಭಾವನೆಯಾಗಿತ್ತು. ನಂಬುಗೆಯಿಂದ ಮನದ ಮಾತನ್ನು ಹೇಳಬಹುದಾದಂತಹ ವ್ಯಕ್ತಿ, ಅಗತ್ಯವುಂಟಾದರೆ ವಿಪತ್ತಿನಲ್ಲಿ ಒಳ್ಳೆಯ ಸಲಹೆಯನ್ನು—ಏಕೆ ಸಹಾಯವನ್ನು ಕೂಡ— ಕೊಡಬಹುದಾದಂ ತಹ ವ್ಯಕ್ತಿ ಈ ಅಸಹಾಯ ಅವಸ್ಥೆಯಲ್ಲಿ ಲಭಿಸಿದ್ದು ದೊಡ್ಡ ಲಾಭವೆಂದು ಅವಳು ಬಗೆದಳು. ಆದುದರಿಂದ ಅವಳು ಸಂಕೋಚವನ್ನು ತೊರೆದು ಮಾತ ನಾಡಿದಳು, “ನಾನು ನನ್ನ ತಂದೆಯನ್ನು-ಅರ್ಥಾತ್ ನನ್ನ ತಾಯಿಯ ದ್ವಿತೀಯ ಸಂಬಂಧದ ಪತಿಯನ್ನು ನೋಡುವುದಕ್ಕೆ ನಾನಲ್ಲಿಗೆ ಹೊರಟಿದ್ದೇನೆ. ಹಠಾತ್ ಹೊರಟು ಬರಬೇಕಾದುದರಿಂದ ಮೊದಲೇ ತಿಳಿಸಿ ಹೊರಡಲಿಕ್ಕಾಗಲಿಲ್ಲ.”

ಎರೋಸ್ಮಿಥ್ ಸಂದಿಗ್ಧ ದೃಷ್ಟಿಯಿಂದ ಅವಳ ಮುಖವನ್ನು ನೋಡುತ್ತ “ಅವರು ಅಂದರೆ ನಿಮ್ಮ ಮಲತಂದೆ ಆ ಮನೆಯಲ್ಲಿಯೇ ಇರುತ್ತಾರೇನು ?” ಎಂದು ಕೇಳಿದ.

“ಹೌದು. ನನಗೆ ತಿಳಿದದ್ದು ಹಾಗೆ.” ಎಂದು ಯುವತಿ ಸ್ವಲ್ಪ ಹೊತ್ತು ನೀರವವಾಗಿದ್ದು ಮತ್ತೆಂದಳು. “ನೋಡಿ ಮಹಾಶಯ, ಯಾವುದೇ ಅಪರಿಚಿತ

ವ್ಯಕ್ತಿಯ ಮುಂದೆ ನನ್ನ ವ್ಯಕ್ತಿಗತ ವಿಷಯ ಹೇಳುವುದಕ್ಕೆ ನನಗೆ ಸಂಕೋಚ ವಾಗುತ್ತದೆ; ಆ ಅಭ್ಯಾಸವೂ ನನಗಿಲ್ಲ. ಆದರೆ ನನ್ನ ಈಗಿನ ಅವಸ್ಥೆಯಲ್ಲಿ...."

—"ಸರಿ, ನಿಮ್ಮ ಅಂಜೋಣ ತಿಳಿಯಿತು. ನಾನಾದರೂ ನಿಮಗೆ ಇಷ್ಟೇ ಹೇಳಬಲ್ಲೆ—ನಿಮ್ಮಿಂದಿನ ಸಂಕಟ ಕಾಲದಲ್ಲಿ ಸಲಹೆ ಸಹಾಯಗಳ ಆವಶ್ಯಕತೆಯಿದ್ದರೆ, ನನ್ನ ಶಕ್ತಿ-ಸಾಮರ್ಥ್ಯಗಳಲ್ಲಿ ನೀವು ಪೂರಾ ಭರವಸೆ ಇಡ ಬಹುದು. ಸಾಧ್ಯವಿದ್ದಷ್ಟು ಸಹಾಯ ಮಾಡಲು ಸಿದ್ಧನಿದ್ದೇನೆ."

ಪಕ್ಕನೆ ಏನು ಉತ್ತರ ಹೇಳುವುದಕ್ಕೂ ಬಾರಬಾರಾಗೆ ತೋಚಲಿಲ್ಲ ನಿಜ. ಆದರೆ ಅವಳ ಕಣ್ಣುಗಳು ಕೃತಜ್ಞತೆಯಿಂದ ಹೊಳೆದವು; ಎದೆಯ ಮೇಲಿನ ಕಲ್ಲು ಇಳಿದಂತೆ ಅವಳಿಗೆ ಹಾಯೆನಿಸಿತು. ಒಂದೆರಡು ನಿಮಿಷಗಳಲ್ಲಿ ಅವಳು ತನ್ನ ಕರ್ತವ್ಯವನ್ನು ನಿರ್ಧರಿಸಿಕೊಂಡಳು. ಅವಳೆಂದಳು, "ತಮ್ಮ ಸಹೃದಯ ತೆಗಾಗಿ ಧನ್ಯವಾದಗಳು. ನನ್ನ ಈ ಸಂಕಟ ಸಮಯದಲ್ಲಿ ತಮ್ಮ ನೆರವು ಎಷ್ಟು ಬೆಲೆಯುಳ್ಳದ್ದೆಂಬುದು ಇನ್ನೊಬ್ಬರಿಗೆ ತಿಳಿಯುವುದು ಸಾಧ್ಯವಿಲ್ಲ. ನಾನು ತಮಗೆ ಎಲ್ಲವನ್ನೂ ಬಿಚ್ಚಿ ಹೇಳುತ್ತೇನೆ, ಕೇಳಿ. ನಮ್ಮ ತಂದೆ--ಖಾಸ ತಂದೆಯ ವಿಷಯ ಮಾತನಾಡುತ್ತಿದ್ದೇನೆ—ವರ್ಜೀನಿಯದ ಪ್ರಖ್ಯಾತ ತಂಬಾಕ ಕಂಪನಿಯ ಒಡೆಯ. ನಾನು ಹತ್ತು ವರುಷದವಳಿದ್ದಾಗ ಅವರು ತೀರಿಕೊಂ ಡರು. ಮುಂದೆ ಸ್ವಲ್ಪ ದಿನಗಳಲ್ಲಿ ತಾಯಿ ಮರುಮದುವೆ ಮಾಡಿಕೊಂಡಳು. ಎರಡು ವರುಷಗಳ ಹಿಂದೆ ನಮ್ಮ ತಾಯಿ ಸತ್ತಳು. ಅದರಿಂದ ನನ್ನ ಮಲ ತಂದೆಯ ಹೃದಯಕ್ಕೆ ದೊಡ್ಡ ಆಘಾತವಾಯಿತು. ದಕ್ಷಿಣ ಭಾಗದಲ್ಲಿ ಇರು ವುದು ಬೇಡವಾಗಿ ನನ್ನನ್ನು ಕಟ್ಟಿಕೊಂಡು ನ್ಯೂಯಾರ್ಕಿಗೆ ಬಂದರು. ಮನೋ ವ್ಯಥೆಯನ್ನು ಮರೆಯುವುದಕ್ಕಾಗಿ ವಿಲ್ ಸ್ಟ್ರೀಟಿನಲ್ಲಿ ಒಂದು ಜೂಜಾಟದ ಅಡ್ಡೆ ಯನ್ನು ತೆರೆದನು. ಲಾಭ-ನಷ್ಟಗಳ ಕಡೆಗೆ ಅವರ ಲಕ್ಷ್ಯವಿಲ್ಲವಾದರೂ ಈ ವ್ಯವಸಾಯದಿಂದ ಅವರು ಹಣ ಗಳಿಸಿದರು. ಆದರೆ ಈ ವ್ಯವಸಾಯದಲ್ಲಿ ತೊಡಗಿರುವಾಗಲೇ ಅವರ ತಲೆಯೊಳಗೊಂದು ಹುಚ್ಚು ಸೇರಿತು.—ಅನೇಕ ವ್ಯವಹಾರಗಳಲ್ಲಿ ಹಣ ತೂರಿ ಅಲ್ಪಾವಧಿಯಲ್ಲಿಯೇ ಕುಬೇರನಾಗಬೇಕೆಂಬುದು. ಶೇರ್ ಪೇಟೆ, ಹುಂಡಿ ಇತ್ಯಾದಿ ಮಾತುಗಳೇ ಹಗಲು ರಾತ್ರಿ ಅವರ ಬಾಯಲ್ಲಿ ಕೇಳತೊಡಗಿದವು. ಅವರಿಗೆ ಅವುಗಳ ಹೊರತು ಬೇರೆ ವಿಷಯಗಳ ವಿಚಾ ರವೇ ಇಲ್ಲ."

ಕ್ಷಣಹೊತ್ತು ನೀರವವಾಗಿದ್ದು ಯುವತಿ ಮುಂದುವರಿದಳು, "ಆಮೇಲೆ ಸುಮಾರು ಒಂದು ತಿಂಗಳಿಂದ ಹಗಲಿರುಳೂ ಯಾವುದೋ ಕೆಲಸದಲ್ಲಿ ವ್ಯಸ್ತ ರಾಗಿರುತ್ತಿದ್ದರು. ಅದೇನೆಂದು ಮಾತ್ರ ಗೊತ್ತಿಲ್ಲ. ಆದರೆ ಅದೇ ಅವರ ಜೀವನದ ಪ್ರಧಾನ ಸಾಧನವಾಗಿ ಬಿಟ್ಟಿತು! ಮುಂಜಾನೆ ಎಂಟಕ್ಕೆ ಮನೆಬಿಟ್ಟ, ವರು ರಾತ್ರಿ ಹತ್ತಕ್ಕೆ ಬರುತ್ತಿದ್ದರು. ಆಗಲೂ ಅವರು ವಿಶ್ರಾಂತಿ ಪಡೆಯದೆ ತಮ್ಮ ಓದುವ ಕೋಣೆಯಲ್ಲಿ ಕುಳಿತುಕೊಳ್ಳುತ್ತಿದ್ದರು. ನನಗೆ ರಾತ್ರಿ ಎಚ್ಚತ್ತ ರಾದಾಗ ಆ ಕೋಣೆಯಲ್ಲಿ ಅವರ ಹೆಜ್ಜೆಯ ಸದ್ದು ಕೇಳುತ್ತಿತ್ತು. ಅವರು ವ್ಯಾಕುಲಚಿತ್ತದಿಂದ ಎಡೆಯಾಡುತ್ತಿದ್ದರು. ಆ ಅವಧಿಯಲ್ಲಿ ಅವರ ಮಾನ ಸಿಕ ಉದ್ವೇಗ ಮಿತಿದಪ್ಪುತ್ತಿತ್ತು. ಅದರಿಂದ ಕೆಲ ದಿನಗಳಲ್ಲಿಯೇ ಅವರ ತಲೆ ಗೂದಲು ಹಣ್ಣಾದವು, ಅವರ ಕಣ್ಣುಗಳು ಅಸ್ವಾಭಾವಿಕವಾಗಿ ಉಜ್ವಲವಾದವು, ಅವುಗಳಲ್ಲಿ ಸ್ವಪ್ನಮಯ ಭಾವವು ಒಡೆದು ಕಾಣುತ್ತಿತ್ತು. ಅವರ ಭಾವಭಂಗಿ ಯನ್ನು ಕಂಡು ನನಗೆ ಬಹಳ ಚಿಂತೆಯಾಯಿತು. ನನ್ನ ಮಾನಸಿಕ ಸುಖ ಶಾಂತಿಗಳು ಲುಪ್ತವಾದವು. ಹೀಗೆ ಕೆಲ ದಿನಗಳು ಕಳೆದ ಮೇಲೆ ಅವರ ಮಾನಸಿಕ ಉದ್ವೇಗದ ಅವಸಾನವಾಯಿತು. ಅವರ ಮನಸು ಸಂಯತವಾ ಯಿತು. ಮನೆಯ ಹೊರಗೆ ಹೆಚ್ಚು ಸಮಯ ಕಳೆಯದೆ, ಹೊತ್ತುಂಟಲೆ ಮನೆಗೆ ಬರತೊಡಗಿದರು. ಅವರ ಮುಖದಲ್ಲಿಯ ಪ್ರಸನ್ನತೆಯನ್ನು ಕಂಡು ಅವರು ತಮ್ಮ ಕಠೋರ ಸಾಧನೆಯಲ್ಲಿ ಸಿದ್ಧಿ ಪಡೆದಿದ್ದಾರೆಂದು ಅನಿಸುತ್ತಿತ್ತು. ಜೀವನದ ಸಾರ್ಥಕ್ಯದ ಗರ್ವಭಾವ ಅವರ ಮುಖದಲ್ಲಿ ಮೂಡಿತ್ತು." ಇಷ್ಟು ಹೇಳಿ ಬಾರ ಬಾರಾ ಸುಮ್ಮನಾದಳು.

"ಬಿಟ್ಟರೇಕೆ ? ಆಮೇಲೆ ಏನಾಯಿತು ಹೇಳಿ." ಏರೋಸ್ಮಿಥ್ ಪ್ರಶ್ನಿಸಿದ.

—"ಆದರೆ ಅವರು ಪಡೆದ ಸಿದ್ಧಿ ಎಂಥದು, ಅವರ ಈ ಸ್ಫೂರ್ತಿಗೆ ಕಾರಣ ಏನು, ಯಾವುದೊಂದನ್ನೂ ಅವರು ನನಗೆ ತಿಳಿಸಲಿಲ್ಲ. ಸುತರಾಂ ನನಗೆ ಸ್ವಲ್ಪವೂ ಗೊತ್ತಾಗಲಿಲ್ಲ. ಒಂದು ವಿಸ್ಮಯದ ವಿಷಯವೆಂದರೆ, ಅವರು ನನಗೆ ಪತ್ರಿಕೆ ಓದಕೂಡದೆಂದು ಪ್ರತಿಬಂಧಿಸಿದ್ದರು. ಬರೀ ಪ್ರತಿಬಂಧಿಸಿ ಬಿಡ ಲಿಲ್ಲ—ಮನೆಗೆ ಯಾವ ಪತ್ರಿಕೆಯನ್ನೂ ತರಿಸುವುದಿಲ್ಲ, ಹೊರಗೂ ಕೊಳ್ಳು ವುದಿಲ್ಲ, ಓದುವುದಿಲ್ಲ ಎಂದು ನಾನು ಪ್ರತಿಜ್ಞೆಯನ್ನೇ–ಮನಸ್ಸಿಲ್ಲದಿದ್ದರೂ— ಮಾಡಬೇಕಾಯಿತು. ಹೀಗೆ ಪ್ರತಿಜ್ಞೆ ಮಾಡದಿದ್ದರೂ ನಡೆಯುತ್ತಿತ್ತು.

ಏಕೆಂದರೆ, ಅದನ್ನು ತಡೆಯುವ ಶಕ್ತಿ ಅವರಲ್ಲಿದ್ದಿಲ್ಲ. ದುಡ್ಡಿಗಾಗಿ ನಾನು ಅವರ ಮುಖ ನೋಡಬೇಕಾಗಿದ್ದಿಲ್ಲ. ಆ ವಿಷಯದಲ್ಲಿ ನನ್ನ ಸ್ವಾತಂತ್ರ್ಯ ನಷ್ಟವಾಗಿದ್ದಿಲ್ಲ. ಇತರ ಎಲ್ಲ ವಿಷಯಗಳಲ್ಲಿಯೂ ನಾನು ಸ್ವತಂತ್ರಳಾಗಿದ್ದೆ. ಅವರು ವ್ಯಾಕುಲ ಭಾವದಿಂದ ನನ್ನನ್ನು ಕೇಳಿಕೊಂಡುದರಿಂದ ಈ ವಿಷಯದಲ್ಲಿ ಬದ್ಧಳಾಗಬೇಕಾಯಿತು. ವಿಶೇಷವಾಗಿ ಪತ್ರಿಕೆ ಓದುವ ಅಭಿರುಚಿಯೂ ನನಗೆ ಅಷ್ಟಕ್ಕಷ್ಟೇ."

—"ಈ ನಿಮ್ಮ ಮಲತಂದೆಯಲ್ಲಿ ನಿಮಗೆ—ಸ್ಪಷ್ಟ ಕೇಳುತ್ತಿರುವುದಕ್ಕೆ ಕ್ಷಮಿಸಿ—ಭಕ್ತಿ ಶ್ರದ್ಧೆಗಳುಂಟೆ? ಪ್ರೀತಿಯುಂಟೆ?"

ಒಂದು ಕ್ಷಣ ಯೋಚಿಸಿಕೊಂಡು ಬಾರಬಾರಾ ಉತ್ತರವಿತ್ತಳು: "ಶ್ರದ್ಧೆಗಿದ್ದೆ ಇದ್ದೇ ಇದೆ! ಪ್ರೀತಿಯ ಆಕರ್ಷಣವೆ? ಅದು ಇಲ್ಲವೆಂದು ಹೇಗೆ ಹೇಳಲಿ? ಬಹಳ ಕಾಲ ನನ್ನನ್ನು ಮಗಳೋಪಾದಿಯಲ್ಲಿ ಸಲಹಿದ್ದಾರೆ; ಅವರನ್ನು ತಂದೆಯಂತೆಯೇ ಕಾಣುತ್ತ ಬಂದಿದ್ದೇನೆ. ವಿಶೇಷವಾಗಿ, ನನ್ನ ತಾಯಿಯ ಮೇಲೆ ಅವರಿಗೆ ಹೆಚ್ಚು ಪ್ರೀತಿಯಿತ್ತು; ಅವರ ಕಡೆ ನನ್ನ ಆಕರ್ಷಣವಿರುವುದಕ್ಕೆ ಅದೂ ಮುಖ್ಯ ಕಾರಣ. ಏನೇ ಇರಲಿ. ಕೆಲ ತಿಂಗಳಲ್ಲಿಯೇ ಅವರು ತಮ್ಮ ಆಫೀಸನ್ನು ಚಿರವಾಗಿ ಮುಚ್ಚಿಬಿಟ್ಟರು. ಅವರ ಪ್ರಕೃತಿಯು ಕೆಟ್ಟಿತ್ತು. ಸ್ಥಳ ಬದಲಿಸಬೇಕೆಂದು ಡಾಕ್ಟರು ಸಲಹೆಯಿತ್ತರು. ಆಮೇಲೆ ಅವರು ಯುನೈಟೆಡ್ ಸ್ಟೇಟ್ಸಿನ ಬೇರೆ ಬೇರೆ ದೇಶಗಳ ಸಂಚಾರ ಕೈಕೊಂಡರು. ಮಧ್ಯಪ್ರದೇಶದ ಪಶ್ಚಿಮ ಭಾಗದಲ್ಲಿಯೂ ಅವರು ಬಹಳ ತಿರುಗಾಡಿದರು. ಆದರೆ ಅವರು ತಿರುಗಿ ಊರಿಗೆ ಬಂದಾಗ ಸುಸ್ವಸ್ಥರಾದಂತೇನು ಕಾಣಲಿಲ್ಲ."

—"ಸುಸ್ವಸ್ಥರಂತೆ ಕಾಣಲಿಲ್ಲ ಎಂದರೇನು?"

—"ಜೀರ್ಣದೇಹ, ಭಗ್ನ ಹೃದಯರಾಗಿ ಬಂದರು; ವಿಷಾದದ ಜೀವಂತ ಮೂರ್ತಿಯಂತೆ. ಆಮೇಲೊಂದು ದಿನ ಅವರು ಹಠಾತ್ತಾಗಿ—ಯಾರಿಗೂ ಏನೂ ತಿಳಿಸುವದೊತ್ತಟ್ಟಿಗಿರಲಿ, ನನಗೆ ಕೂಡ ಪ್ರಯಾಣಕ್ಕೆ ಸಿದ್ಧಳಾಗಲು ಅವಕಾಶ ಕೊಡದೆ—ನನ್ನನ್ನು ಕಟ್ಟಿಕೊಂಡು ಪ್ಯಾರಿಸಿಗೆ ಬಂದರು. ಸಂಗಡ ಅಡಿಗೆಯವಳನ್ನು ಕರೆತಂದರು. ಅವಳು—ಮಿಸೆಸ್ ಲಾರ್ಸೆನ್—ಬಹು ದಿನಗಳಿಂದಲೂ ನಮ್ಮಲ್ಲಿ ಅಡಿಗೆಗಿದ್ದವಳು; ವರ್ಜೀನಿಯಲ್ಲಿದ್ದಾಗಲೇ ಕೆಲಸಕ್ಕೆ

ಸೇರಿದವಳು. ಅವರು ಹೀಗೆ ಒಮ್ಮೆಲೆ ಪ್ಯಾರಿಸಿಗೆ ಬಂದುದರಿಂದ ಪ್ರಾಣಭಯದಿಂದ ಓಡಿ ಬಂದರೇನೋ ಎಂದು ನನಗೆ ಸಂದೇಹವುಂಟಾಯಿತು. ಪ್ಯಾರಿಸಿನಲ್ಲಿ ಸುಮಾರು ಒಂದು ತಿಂಗಳು ಕಳೆದಿರಬಹುದು. ಒಂದು ದಿನ ಅವರು ಮನೆಗೆ ಬಂದು, ತಾವು ಕೂಡಲೇ ಒಬ್ಬರೇ ದೇಶಾಂತರ ಹೋಗಬೇಕಾಗಿದೆ ಎಂದು ತಿಳಿಸಿದರು. ಎಲ್ಲಿಗೆ, ಏಕೆ—ಎಂಬುದನ್ನೇನೂ ಹೇಳಲು ಅವರು ಸಮ್ಮತಿಸಲಿಲ್ಲ. ತಿರುಗಿ ಬರಲು ಎಷ್ಟು ದಿನ ಬೇಕಾದೀತೆಂಬುದನ್ನೂ ಹೇಳಲಿಲ್ಲ. ಅದರ ಮರುದಿನವೇ ಅವರು ಒಮ್ಮೆಲೆ ಅದೃಶ್ಯರಾಗಿ ಬಿಟ್ಟರು !"

ಬಾರಬಾರಾ ಮೊಗವೆತ್ತಿ ಡ್ರೈವರನ ಮೊಗದ ಕಡೆ ನೋಡಿದಳು. ಸಮವೇದನೆ ಅಲ್ಲಿ ಒಡಮೂಡಿತ್ತು. ಮತ್ತು ತನ್ನ ಮಲತಂದೆಯಬಗ್ಗೆ ಕೆಲವೊಂದು ಸಂಗತಿಗಳು ಏರೋಸ್ಮಿಥ್‌ನಿಗೆ ಗೊತ್ತಿರಬೇಕೆಂದೂ ಅದನ್ನು ತನ್ನೆದುರು ಪ್ರಕಟಗೊಳಿಸುವುದು ಯುಕ್ತವಲ್ಲೆಂದು ಮುಚ್ಚಿಕೊಂಡಿದ್ದಾನೆಂದೂ ಅವನ ಮುಖಲಕ್ಷಣದಿಂದ ಅವಳಿಗೆಸಿಸಿತು.

—"ಒಮ್ಮೆಲೆ ಕಾಣೆ ! ನಕ್ಕು ಸುಮ್ಮನಿರುವ ವಿಷಯವಲ್ಲ. ನಿಮ್ಮ ಮಲತಂದೆ, ಮಮತೆಯೂ ಇತ್ತು. ನಿಮಗೆ ಚಿಂತೆಯ ಮಾತೇ. ಇರಲಿ, ಮುಂದೇನಾಯಿತು ?"

—"ಇಡೀ ಮೂರು ತಿಂಗಳು ಅವರ ಸುದ್ದಿಯೇ ಗೊತ್ತಾಗಲಿಲ್ಲ. ಒಂದು ಕಾಗದವೂ ಇಲ್ಲ, ಮುಖ್ಯತಃ ಸಮಾಚಾರವೂ ಇಲ್ಲ. ಆ ಮೇಲೆ ಒಂದು ದಿನ ಹಠಾತ್ತಾಗಿ ಒಂದು ಕಾಗದ ಕೈಸೇರಿತು."

—"ಯಾರು ಬರೆದರು ? ನಿಮ್ಮ ಮಲತಂದೆಯೇ ?"

—"ಅಲ್ಲ; ಅಡಿಗೆಯುವಳು. ಅವಳಿಗೆ ನನ್ನಲ್ಲಿ ಪ್ರೀತಿ.—ನಮ್ಮ ತಾಯಿಯಿದ್ದಾಗಿನಿಂದಲೂ ನಮ್ಮಲ್ಲಿದ್ದವಳೆಂದು ಹೇಳಿದ್ದೇನಲ್ಲ, ಅದಕ್ಕೆ."

—"ಇದರಲ್ಲಿ ಆಶ್ಚರ್ಯವೇನೂ ಇಲ್ಲ."

—"ಅದ್ಭುತ ಪತ್ರ ! ಅದರಿಂದ ನನ್ನ ಮನಸು ಅತ್ಯಂತ ಚಂಚಲವಾಯಿತು. ಹಾಗಾಗುವುದಕ್ಕೆ ಯಥೇಷ್ಟ ಕಾರಣವೂ ಇತ್ತು. ಆ ಅಡಿಗೆಯವಳು ಸ್ಕಾಂಡಿನೇವಿಯದವಳು. ಕಲ್ಲು ಗೋಡೆಯಂತೆ ಕಠೋರಳು. ಅವಳಲ್ಲಿ ಅಕಸ್ಮಾತ್ತಾಗಿ ಆದ ಪರಿವರ್ತನೆಯಿಂದ ನನಗೆ ಅಚ್ಚರಿಯಾಯಿತು. ಅವಳು ನನ್ನ ಮಲತಂದೆಯ ಸಮಾಚಾರ, ಅವರು ಇಲ್ಲಿ ಈ ಮನೆಯಲ್ಲಿರುವ ವಿಷಯ

ತಿಳಿಸಿದ್ದಳು. ತಮ್ಮ ಸದ್ಯದ ಸ್ಥಳ ವಿಳಾಸವನ್ನೂ ತಾವು ನಡೆಸಿದ ಕಾರ್ಯ ವನ್ನೂ ಯಾರಿಗೂ ತಿಳಿಸಕೂಡದೆಂದು ತಂದೆಯವರು ಅವಳಿಗೆ ಕಟ್ಟಪ್ಪಣೆ ಮಾಡಿದ್ದಾರಂತೆ.”

—“ಹೀಗೊ. ಹಾಗಾದರೆ ಅವರಿಲ್ಲಿ ಎಂತಹ ಕಾರ್ಯದಲ್ಲಿ ತಲೆ ತೊಡ ಕಿಸಿದ್ದಾರೆ? ಮನುಷ್ಯ ಎಂದೂ ಸುಮ್ಮನೆ ಇರುವುದು ಸಾಧ್ಯವಿಲ್ಲ; ಒಳ್ಳೆ ಯದೋ ಕೆಟ್ಟದೋ ಏನಾದರೊಂದು ಕೆಲಸವನ್ನು ಮಾಡಿಯೇ ಮಾಡಬೇಕಾ ಗುತ್ತದೆ.”

—“ಅವರೇನು ಮಾಡುತ್ತಿದ್ದಾರೆಂಬುದನ್ನೇನೂ ಆಕೆ ಬರೆದಿಲ್ಲ. ಯಾವ ಕೆಲಸದಲ್ಲಿ ಕಾಲಕ್ಷೇಪ ಮಾಡುತ್ತಿದ್ದಾರೆಂಬುದು ತನಗೆ ಗೊತ್ತಿಲ್ಲವೆಂದು ಆಕೆ ಬರೆದಿದ್ದಾಳೆ. ಆ ಮನೆಯ ಕೆಳಗಿನ ಒಂದು ಕೋಣೆಯಲ್ಲಿ ಅವರು ಹಗಲೂ ರಾತ್ರಿ ಅದೇನು ಮಾಡುತ್ತಿರುತ್ತಾರೋ ಅವರೇ ಬಲ್ಲರು; ಎಂಟು ಹತ್ತು ದಿನ ಗಳಿಗೊಮ್ಮೆ ಸ್ವಲ್ಪ ಕಾಲ ಮಾತ್ರ ಆ ಕೋಣೆಯಿಂದ ಹೊರಗೆ ಬರುತ್ತಿರುವರು; ಅವರು ಆ ಕೋಣೆಯಲ್ಲಿಲ್ಲದಾಗ ಅದರ ಬಾಗಿಲನ್ನು ಭದ್ರವಾಗಿ ಮುಚ್ಚಿ ಗಟ್ಟಿ ಯಾದ ಕೀಲಿ ಜಡಿದಿರುತ್ತಾರೆ; ಆ ಕೋಣೆಯಲ್ಲಿ ಅನ್ಯರಿಗೆ ಪ್ರವೇಶವೇ ಇಲ್ಲ. ಇಷ್ಟು ಮಾತ್ರ ಅಡಿಗೆಯವಳಿಗೆ ತಿಳಿದದ್ದು.”

ಏರೋಸ್ಮಿಥ್ ತೀಕ್ಷ್ಣ ದೃಷ್ಟಿಯಿಂದ ತರುಣಿಯ ಮುಖದ ಕಡೆ ನೋಡಿ, “ಅನ್ಯರಿಗೆ ! ಅನ್ಯ ಜನರೂ ಇದ್ದಾರಂತೇನು ಅಲ್ಲಿ ?” ಎಂದು ಕೇಳಿದ.

—“ಮಿಸೆಸ್ ಲಾರ್ಸೆನ್ನಳ ಪತ್ರದಿಂದ ತಿಳಿದ ಮಟ್ಟಿಗೆ, ಕೆಲ ಜನ ಅನು ಚರರನ್ನು ಅವರಿಟ್ಟುಕೊಂಡಿದ್ದಾರೆ. ಅವರ ವಿಷಯ ಹೆಚ್ಚಾಗಿ ಗೊತ್ತಿಲ್ಲದಿ ದ್ದರೂ ಆ ಅಡಿಗೆಯವಳ ದೃಷ್ಟಿಯಲ್ಲಿ ಅವರು ಒಳ್ಳೆಯ ಜನ ಅಲ್ಲ. ಪುಂಡರಿ ದ್ದರೂ ಇರಬಹುದು. ಅವರ ಬಗ್ಗೆ ಯಾವ ಕಲ್ಪನೆಯೂ ಉಂಟಾಗುವಂತಿಲ್ಲ. ನಾನು ಯಾವ ಗುಪ್ತ ಕಾರಸ್ಥಾನದ ಪಕ್ಷಪಾತಿಯೂ ಅಲ್ಲ. ಅಲ್ಲದೆ ನಮ್ಮ ಮಲತಂದೆ ವಾಸವಾಗಿರುವ ವಾತಾವರಣ ಸದ್ಗೃಹಸ್ಥರಿಗೆ ಅಸಹ್ಯವಾದುದೇ ಇರಬೇಕೆಂದು ನನಗೆ ಸಂದೇಹವುಂಟಾಗುತ್ತದೆ. ಅವರು ಇಲ್ಲಿಗೆ ಬಂದು ಅಡ್ಡ ಹಾದಿಗೆ ಬಿದ್ದಿದ್ದರೆ, ಯಾವ ಉಪಾಯದಿಂದಲಾದರೂ ಸರಿದಾರಿಗೆ ತರಲಾಗು ವುದೇ ಇಲ್ಲವೇ ಪ್ರಯತ್ನಿಸಿ ನೋಡಬೇಕೆಂಬ ಸಂಕಲ್ಪದಿಂದಲೇ ಅವರನ್ನು

ಹುಡುಕಿಕೊಂಡು ಹೊರಟಿದ್ದೇನೆ. ಅದಕ್ಕಾಗಿಯೇ ಅವರಿಗೆ ಯಾವ ಸೂಚನೆಯನ್ನೂ ಕೊಡದೆ ಬಂದದ್ದು."

ಏರೋಸ್ಮಿಥ್ ಕಾರನ್ನು ನಡೆಸತೊಡಗಿದ. ಯಾವ ಮಾತನ್ನೂ ಆಡದೆ ಗಂಭೀರ ಯೋಚನೆಯಲ್ಲಿ ಮುಳುಗಿದ. ಬಾರಬಾರಾನ ಮನದಲ್ಲಿಯೂ ನಾನಾ ವಿಚಾರಗಳು ನಡೆದಿದ್ದವು. ಕೆಲ ನಿಮಿಷಗಳಲ್ಲಿ ಕಾರು ದಟ್ಟವಾದ ಮತ್ತು ಎತ್ತರವಾದ ಬೇಲಿಯ ಹತ್ತಿರ ಬಂದಿತು. ಬೇಲಿಯಲ್ಲಿ ನಡು ನಡುವೆ ದೊಡ್ಡ ದೊಡ್ಡ ಗಿಡಗಳಿದ್ದವು. ಈ ಬೇಲಿ ದಾರಿಗುಂಟ ಸುಮಾರು ಅರ್ಧ ಮೈಲಿನಷ್ಟು ಹಬ್ಬಿತ್ತು. ಏರೋಸ್ಮಿಥ್ ಗಾಡಿ ನಿಲ್ಲಿಸಿ, "ನೀವು ಹೋಗತಕ್ಕ ಸ್ಥಳ ಬಂತು." ಎಂದು ನುಡಿದ.

ಆಗ ಮಳೆ ನಿಂತಿತ್ತು; ಮೋಡ ಹರಿದು ಮುಗಿಲು ಜಳಜಳವಾಗಿತ್ತು. ಬಾರಬಾರಾ ಗಾಡಿಯಿಂದಿಳಿದಳು. ಇಳಿಯಲೊಲ್ಲದೆ ಮೆಲ್ಲಮೆಲ್ಲನೆ ಇಳಿದಳು. ಹಸ್ತಾಂದೋಲನಕ್ಕಾಗಿ ಏರೋಸ್ಮಿಥ್‌ನ ಕಡೆಗೆ ಕೈಯನ್ನೇನೋ ಚಾಚಿದಳು. ಆದರೆ ಆ ಹಿತೈಷಿ ಯುವಕನಿಂದ ಬೀಳ್ಕೊಳ್ಳುವ ಇಚ್ಛೆ ಆವಳಿಗಿರಲಿಲ್ಲ. ಶಾಂತಿಪೂರ್ಣವಾದ ನಿರಾಪದವಾದ ಬಂದರವನ್ನು ಬಿಟ್ಟು ತರಂಗಭಂಗಮಯವಾದ ವಿಪತ್ಸಂಕುಲವಾದ ಅಂಧಕಾರಾಚ್ಛನ್ನ ಸಮುದ್ರ ಗರ್ಭದಲ್ಲಿ ಇಳಿದಂತೆ ಆವಳಿಗೆ ನಿಸಿತು. ಅವಳ ಹೃದಯವನ್ನು ಗಭೀರ ಚಿಂತೆ ಆವರಿಸಿತು. 'ಇದೆಲ್ಲಿಗೆ ಬಂದೆ? ಏಕಾದರೂ ಬಂದೆ? ಎಂಥ ಆತಿಥ್ಯ ಕಾದಿದೆಯೋ?' ಎಂದು ಚಿಂತಿಸತೊಡಗಿದಳು. ಇಲ್ಲಿ ವಿಪತ್ತು ಒದಗಿದರೆ ಯಾರ ಸಹಾಯ ಸಿಕ್ಕೀತು ಎಂಬುದು ಅವಳಿಗೆ ತಿಳಿಯದಾಯಿತು. ತನ್ನನ್ನು ದಯವಿಟ್ಟು ಇಲ್ಲಿಯ ವರೆಗೆ ತಂದಿಳಿಸಿದ ಆ ಯುವಕನ ಭೆಟ್ಟಿ ಮತ್ತೆ ಆಗುವುದೋ ಇಲ್ಲವೋ ಗೊತ್ತಿಲ್ಲ.

ಏರೋಸ್ಮಿಥ್ ಅವಳ ಕೈಯನ್ನು ಹಿಡಿದುಕೊಂಡೇ ಮಾತನಾಡಿದ: " ನಾನು ಒಂದು ಮಾತು ಹೇಳಿ ಹೋಗುತ್ತೇನೆ. ನಿಮಗಿಲ್ಲಿ ಭಯಕ್ಕೆ ಕಾರಣವೇನಾದರೂ ಇದ್ದೀತೆಂದು ನನಗೆನಿಸುವುದಿಲ್ಲ. ಆದರೆ ನಿಮ್ಮ ತಂದೆಯ ಅನುಚರರ ಬಗ್ಗೆ ನೀನು ಹೇಳಿದ ಮಾತುಗಳಿಂದ, ನಿಮ್ಮ ತಂದೆ ಅವರ ಪ್ರೀತ್ಯರ್ಥವಾಗಿ ನಿಮ್ಮನ್ನು ಕೆಟ್ಟ ರೀತಿಯಿಂದ ನಡೆಸಿಕೊಂಡರೂ ನಡೆಸಿಕೊಳ್ಳಬಹುದೆಂದು ನನಗೆ ಸಂದೇಹವಾಗುತ್ತಿದೆ. ಆದರೆ ನಿಮಗಿಲ್ಲಿ ಸಂಕಟ ಒದಗುವು

ದೆಂದು ಕಂಡು ಬಂದರೆ ಹೇಗೆ ಮಾಡುವುದೆಂಬುದನ್ನು ನೀವಿನ್ನು ನಿರ್ಧರಿಸಿ ಕೊಂಡಂತೆ ಕಾಣುವುದಿಲ್ಲ. ನಿಮ್ಮ ಹತ್ತಿರ ಮ್ಯಾಚ್ ಉಂಟೇ ?"

"ಮ್ಯಾಚ್ ?" ಬಾರಬಾರಾ ಆಶ್ಚರಿಯಿಂದ ಕೇಳಿದಳು.

"ತಿಳಿಯಲಿಲ್ಲವೆ ? ಕಡ್ಡಿಯ ತುದಿಯನ್ನು ಪೆಟ್ಟಿಗೆಗೆ ತಿಕ್ಕಿದರೆ ದೀಪ ಹತ್ತುತ್ತದಲ್ಲ, ಅದು." ಏರೋಸ್ಮಿಥ್ ನಗುತ್ತ ವಿವರಿಸಿದ.

"ಇಲ್ಲ. ಮ್ಯಾಚ್‌ಬಾಕ್ಸ ನನ್ನ ಹತ್ತರ ಇಲ್ಲ. ನನ್ನ ಬ್ಯಾಗಿನಲ್ಲಿ ಒಂದು ಪೆಟ್ರೋಲ್ ಲೈಟರ್ ಇದೆ."

—"ಇಲ್ಲ, ಅದರಿಂದ ಪ್ರಯೋಜನವಿಲ್ಲ." ಎಂದು ನುಡಿದು ಏರೋಸ್ಮಿಥ್ ತನ್ನ ಪ್ರಕಾಂಡ ಕೋಟಿನ ಬಿರಡಿ ಬಿಚ್ಚಿ ಒಳಜೇಬಿನಲ್ಲಿ ಕೈಹಾಕಿ ಒಂದು ಸಣ್ಣ ವಿದ್ಯುದ್ದೀಪವನ್ನು ಹೊರತೆಗೆದು ಬಾರಬಾರಾನ ಕೈಗೆ ಕೊಡುತ್ತ ಹೇಳಿದ: "ಯಾರ ಕಣ್ಣಿಗೂ ಬೀಳದ ಹಾಗೆ ಹಿಡಿದುಕೊಂಡಿರ್ರಿ.—ಏನಾದರೂ ನಿಮಗೆ ಸಂಕಟ ಒದಗಿದರೆ, ಸಹಾಯದ ಅವಶ್ಯಕತೆ ಎನಿಸಿದರೆ, ಇಂದು ಅಪರಾತ್ರಿಯ ವರೆಗೆ ಕಾಯ್ದಿದ್ದು, ರಾತ್ರಿ ಹನ್ನೊಂದರಿಂದ ಎರಡರ ಮಧ್ಯದಲ್ಲಿ ಬೇಕಾದಾಗ ಮಹಡಿಯ ಯಾವುದೊಂದು ಬೀದಿಯ ಕಡೆಯ ಕಿಡಿಕಿಯ ಹತ್ತಿರ ನಿಂತು ಪುನಃ ಪುನಃ ಮೂರು ಸಲ ದೀಪವನ್ನು ಬೆಳಗಿಸಿರಿ.—ತಿಳಿಯಿತೇ ನಾನು ಹೇಳಿದ್ದು ?"

ಅವನ ಮಾತು ಮುಗಿಯುವದರೊಳಗೇ ಬಾರಬಾರಾನ ದೃಷ್ಟಿ ಆವಾರದ ಬಾಗಿಲ ಕಡೆ ಆಕರ್ಷಿತವಾಯಿತು. ಅದರ ಪಕ್ಕದಲ್ಲಿ ಉಜ್ವಲ ದೀಪ ಚಕ್ರವು ಕಂಡಿತು. ಭಯ ವಿಸ್ಮಯಗಳಿಂದ ಆವಳು ದೀಪಚಕ್ರದ ಕಡೆಗೆ ನೋಡುವಷ್ಟ ರಲ್ಲಿಯೇ ಅದು ಅದೃಶ್ಯವಾಯಿತು.

"ಈ ಮನೆಯೊಳಗಿಂದಲೇ ಯಾರೋ ಯಾರಿಗೋ ಏನೋ ಸಂಕೇತ ಮಾಡಿದರು ದೀಪದಿಂದ. ಏನು ರಹಸ್ಯವಿದು ?" ಬಾರಬಾರಾ ವ್ಯಾಕುಲ ಸ್ವರ ದಿಂದ ನುಡಿದಳು. ಅವಳ ಎದೆಯಲ್ಲಿ ಧಕ್‌ಧಕ್ಕೆನ್ನುತ್ತಿತ್ತು.

ಏರೋಸ್ಮಿಥ್ ಅವಳ ಕೈಯನ್ನು ಗಟ್ಟಿಯಾಗಿ ಅದುಮಿ ಸುಮ್ಮನಿರುವಂತೆ ಸೂಚಿಸಿದ. ಆ ಸೂಚನೆಯ ಇಂಗಿತವನ್ನು ತಿಳಿದೂ ಬಾರಬಾರಾ ಅಸ್ಫುಟ ಸ್ವರದಿಂದ, "ಏನು ಸಮಾಚಾರ ?" ಎಂದು ಕೇಳಿದಳು.

"ಎಚ್ಚರಿಕೆಯಿಂದ ಗಮನಿಸಿರಿ." ಏರೋಸ್ಮಿಥ್ ಹೇಳಿದ.

ಕ್ಷಣಹೊತ್ತಿನಲ್ಲಿ ಮತ್ತೆ ದೀಪ ಹತ್ತಿ ನಂದಿತು. ಸುಮಾರು ಒಂದು ನಿಮಿಷದ ತರುವಾಯ ದೀಪ ಮೂರನೆಯ ಸಲ ಬೆಳಗಿ ಅಡಗಿತು. ಆಮೇಲೆ ತಿರುಗಿ ಬೆಳಗಲಿಲ್ಲ.

ಏರೋಸ್ಮಿಥ್ ಹೇಳಿದ: "ನಾವು ಮೂರು ಸಲ ದೀಪಚಕ್ರ ನೋಡಿದೆವು. ಇಲ್ಲಿ ಕೇವಲ ನಮಗೆ ಮಾತ್ರ ದೀಪಸಂಕೇತದ ಅಗತ್ಯವಿದೆ ಎಂದಲ್ಲ, ಯಾವ ಕಾರಣದಿಂದಲೋ ಬೇರೆಯವರಿಗೂ ಹಾಗೆಯೇ ಅವಶ್ಯಕವಾಗಿದೆ ಎಂದು ಇದರಿಂದ ಗೊತ್ತಾಗುತ್ತದೆ. ನಿಜವಾಗಿಯೂ ಇದರಲ್ಲೇನೋ ಜಟಿಲ ರಹಸ್ಯವಿದೆಯೆಂದು ಹೇಳುವುದೇ ಬೇಡ."

ಮಾನಸಿಕ ಉತ್ಕಂಠೆಯನ್ನು ನಿಗ್ರಹಿಸುವುದು ಬಾರಬಾರಾಗೆ ಅಸಾಧ್ಯವಾಯಿತು. ಕ್ಷುಬ್ಧ ಸ್ವರದಿಂದ ಅವಳೆಂದಳು: "ಆದರೆ ಇದೇನು ಪ್ರಕರಣವೋ ನನಗಂತೂ ತೋಚಲೊಲ್ಲದು. ನಮ್ಮ ಮಲತಂದೆ ಯಾವ ಉದ್ದೇಶದಿಂದ ಈ ರೀತಿ ದೀಪದ ಮೂಲಕ ಯಾರಿಗೆ ಯಾವ ಸಂಜ್ಞೆ ಮಾಡುತ್ತಿರಬಹುದು? ಇಂತಹ ಗುಪ್ತ ವ್ಯವಹಾರಕ್ಕೆ ಕಾರಣವಾದರೂ ಏನು?"

—"ಅದನ್ನೇ ನಾನು ಶೋಧಿಸಬೇಕಾಗಿದೆ. ಏನೇ ಇರಲಿ, ನಿಮಗಿಲ್ಲಿ ಯಾವುದೇ ವಿಪತ್ತಿನ ಭಯ ತೋರಿದರೆ ನಾನು ಹೇಳಿದಂತೆ ಮಾಡಲು ಮರೆಯಬೇಡಿರಿ. ಮೇಲಿಂದ ಮೇಲೆ ಮೂರು ಬಾರಿ ದೀಪ ಬೆಳಗಿಸಿರಿ. ಆದರೆ ಈ ವರೆಗೂ ನನ್ನ ಹೆಸರು ನಿಮಗೆ ಗೊತ್ತಾಗಿಲ್ಲ. ನನ್ನ ಹೆಸರು ಕಿಟ್ ಏರೋಸ್ಮಿಥ್; ಸರಕಾರದ ಪರರಾಷ್ಟ್ರ ಶಾಖೆಯೊಡನೆ ನನ್ನ ಸಂಬಂಧವಿದೆ."

## ೩

ಕಿಟ್ ಏರೋಸ್ಮಿಥ್ ಕಾರು ತಕ್ಕೊಂಡು ಹೋಗಲು ಅಲ್ಲಿಯ ಕತ್ತಲೆ ಗಾಢವಾಯಿತು. ಬಾರಬಾರಾ ಮುಂಬಾಗಿಲನ್ನು ಪ್ರವೇಶಿಸಿ ಕಟ್ಟಡದ ಕಡೆಗೆ ಮುಂಬರಿದಳು. ಹೆಜ್ಜೆಹೆಜ್ಜೆಗೂ ಕಾಲುಗಳು ನಡುಗುತ್ತಿದ್ದವು. ಒಮ್ಮೆ ಈ ಕಟ್ಟಡದೊಳಗೆ ಹೊಕ್ಕರಾಯಿತು, ಬಿಡುಗಡೆಯ ಆಶೆಯೇ ಇಲ್ಲವೆಂದು ಅವಳಿಗೆ

ಭಯವೆನಿಸಿತು. ಆದರೂ ಅಂತಹ ಭಯಕ್ಕೆ ಕಾರಣವೇನೆಂಬುದು ಅವಳಿಗೆ ತೋರಲಿಲ್ಲ.

ಕೊಂಚ ದೂರ ನಡೆದ ಬಳಿಕ ಬರಾಕಿನಂತೆ ದೀರ್ಘವಾದ ಒಂದು ಕಟ್ಟಡ ಗೋಚರಿಸಿತು. ಅದರ ಎತ್ತರವಾದ ಹೊಗೆ ಕೊಳವೆಗಳು ಸ್ತಬ್ಧವಾಗಿ ನಿಂತಿದ್ದವು. ಯಾವ ಕೊಳವೆಯಲ್ಲಿಯೂ ಹೊಗೆ ಮಾತ್ರ ಕಾಣಲಿಲ್ಲ. ಬಾರಬಾರಾ ಕಟ್ಟಡದ ಯಾವ ಕೋಣೆಯಲ್ಲಿಯೂ ಬೆಳಕು ಕಾಣಲಿಲ್ಲ. ಬಾರಬಾರಾ ಕಟ್ಟಡದ ಪ್ರವೇಶ ದ್ವಾರದ ಬಳಿ ಹೋಗಿ ನಿಂತಳು. ಬಾಗಿಲು ಮುಚ್ಚಿತ್ತು. ಬಾಗಿಲಿಗೆ ಹಿಡಿಕೆ ಕೊಂಡಿಗಳಿರಲಿಲ್ಲ; ಘಂಟೆಯೂ ಇರಲಿಲ್ಲ. ಬಾಗಿಲು ಸುದೃಢವಾದದ್ದು. ಆಯ್‌ವ್ಹಿ ಲತೆಯ ನಿಬಿಡ ಪಲ್ಲವಗಳಿಂದ ದ್ವಾರದ ಕೆಲವಂಶ ಮುಚ್ಚಿತ್ತು. ಅದರೊಳಗೆ ಕೈಹಾಕಿ ಆಡಿಸಿದಾಗ ಜಂಗು ತಿಂದ ಕೊಂಡಿ ಕೈಗೆ ಹತ್ತಿತು. ಆ ಕೊಂಡಿಯನ್ನು ಹಿಡಿದು ಬಲವಾಗಿ ಜಗ್ಗಿದಳು. ಕಟ್ಟಡದ ಒಳಗೆ ಯಾವ ಭಾಗದಲ್ಲಿಯೋ ಗಂಟೆ ಬಾರಿಸಿತು. ಅದರ ಶಬ್ದ ಬಾರಬಾರಾಗೆ ಅತ್ಯಂತ ಭೀಕರವಾಗಿ ಕೇಳಿಸಿತು.

ಗಂಟೆಯೇನೋ ಬಾರಿಸಿತು. ಒಳಗಿನಿಂದ ಯಾರೂ ಓಗೊಡಲಿಲ್ಲ. ಗಂಟೆಯ ನಾದ ಅಡಗಲು ಆ ನಿರ್ಜನ ಸ್ಥಾನದ ನಿಃಸ್ತಬ್ಧತೆ ನೂರ್ಮಡಿಯಾದಂತಾಯಿತು. ಬಾರಬಾರಾ ಒಂದೆರಡು ಮಿನಿಟು ಬಿಟ್ಟು ಪುನಃ ಪುನಃ ಮೂರು ಬಾರಿ ಗಂಟೆ ಬಾರಿಸಿದಳು. ಆಮೇಲೆ ಸ್ವಲ್ಪ ಹೊತ್ತಿನಲ್ಲಿ ಒಳಗಡೆ ಯಾರದೋ ಹೆಜ್ಜೆಗಳ ಸದ್ದು ಕೇಳಿಸಿತು. ಆದರೆ ಅದರಿಂದ ಅವಳಿಗೆ ನೆಮ್ಮದಿ ಎನಿಸಲಿಲ್ಲ. ಯಾವುದೋ ಹಿಂಸ್ರ ಪಶುವಿನ ಪದಶಬ್ದವಾಗುತ್ತಿರುವಂತೆ, ಇನ್ನೇನು ಈಗ ತನ್ನ ಮೇಲೆ ಎರಗುವುದೆಂಬಂತೆ ಅವಳಿಗೆನಿಸಿತು. ಅವಳು ಸ್ವಲ್ಪ ಹಿಂದೆ ಸರಿದು ನಿಂತುಕೊಂಡಳು.

ಸ್ವಲ್ಪ ಹೊತ್ತಿನಲ್ಲಿ ಬಾಗಿಲ ಕೊಂಡಿ ತೆಗೆದ. ಅಗುಳಿ ಸರಿಸಿದ ಸದ್ದಾಯಿತು. ಕೊನೆಗೆ ಆ ಗಟ್ಟಿಮುಟ್ಟಾದ ಕದ ಆರು ಇಂಚಿನಷ್ಟು ಮಾತ್ರ ತೆರೆಯಿತು. ಒಬ್ಬ ಮನುಷ್ಯ ಬಾಗಿಲ ಹಿಂದಿನಿಂದ ಒಳ್ಳೇ ಜಾಗರೂಕತೆಯಿಂದ ಹಣಿಕಿ ನೋಡಿದ. ಕತ್ತಲೆಯಲ್ಲಿ ಚೆನ್ನಾಗಿ ಕಾಣದಿದ್ದರೂ ಬಾರಬಾರಾ ಆ ಮುಖದ ಕಡೆ ನೋಡಿ ರೋಮಾಂಚಿತೆಯಾದಳು, ಅದೊಂದು ಪಿಶಾಚವೇ ಇರಬೇಕೆಂದು ಅವಳಿಗೆನಿಸಿತು. ಅವಳು ತನ್ನ ತಂದೆಯ ಶೋಧಕ್ಕೆ ಬಂದದ್ದು.

ಆದರೆ ಈ ಭೀಷಣ ಮೂರ್ತಿ ಯಾರದು ? ತಂದೆಗೆ ಇದರ ಸಂಬಂಧವೇನು ?

ಇವೆಲ್ಲವನ್ನು ಚಿಂತಿಸುತ್ತ ಬಾರಬಾರಾ ಬಾಗಿಲಿಂದ ಸ್ವಲ್ಪ ಅಂತರದಲ್ಲಿ ನಿಂತಿರಲು ಬಾಗಿಲು ಪೂರ್ಣ ತೆರೆಯಿತು. ಬಾಗಿಲ ಹಿಂದೆ ಹಾಲಿನಲ್ಲಿ ದೀಪ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ ಬಾಗಿಲಲ್ಲಿ ನಿಂತಿದ್ದ ಮನುಷ್ಯನನ್ನು ಅವಳು ನೋಡಿದಳು. ಮರುಕ್ಷಣದಲ್ಲಿ ಹಾಲಿನಿಂದ ಇನ್ನೊಬ್ಬನು ಬಾಗಿಲ ಬಳಿ ಬಂದ. ಅವನು ಗಿಡ್ಡ ಮನುಷ್ಯ; ಮೈ ತೆಳುವು. ಆದರೆ ಅವನ ಮುಖವೂ ಅತ್ಯಂತ ಕುರೂಪ; ಕಣ್ಣುಗಳಲ್ಲಿ ಕ್ರೂರತೆ ನಿಷ್ಠುರತೆಗಳು ಹೊಮ್ಮುತ್ತಿದ್ದವು. ಅವನು ನಿಶ್ಶಬ್ದವಾಗಿ ಬಂದು ಬಾರಬಾರಾನನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿ ಹಿಂದಿರುಗಿ ಅರೆನಿಮಿಷದಲ್ಲಿ ಕಣ್ಮರೆಯಾದ.

ಬಾಗಿಲು ತೆರೆದು ಇದಿರಿಗೆ ನಿಂತಿದ್ದ ಮನುಷ್ಯನನ್ನು ಬಾರಬಾರಾ ಅಡಿಯಿಂದ ಮುಡಿವರೆಗೆ ನೋಡಿದಳು. ಆಳು ಎತ್ತರ, ಸ್ಥೂಲ ಕಾಯನಲ್ಲ. ಪ್ರಶಸ್ತವಾದ ಹೆಗಲುಗಳು, ಪೀತ ವರ್ಣದ ಮುಖಕಾಂತಿ. ಅತಿ ಹೆಚ್ಚಾಗಿ ಮದ್ಯಪಾನ ಮಾಡುವ ಶ್ರಮಜೀವಿಯೋಪಾದಿಯಲ್ಲಿ ಮುಖಭಾವ. ಒಣಗಿದ ಮೋರೆ; ಎಲುಬೆದ್ದ ಗಲ್ಲಗಳು; ತೆಳುವಾದ ಕೆಳದುಟಿ; ಕೆಂಪು ಕಣ್ಣುಗಳು. ಅವನ ಮುಖ ಮುದ್ರೆಯಲ್ಲಿ ಸಜ್ಜನಿಕೆಯ ಚಿಹ್ನವೂ ಇಲ್ಲ. ದೃಷ್ಟಿಯಲ್ಲಿ ಸಂದಿಗ್ಧ ಭಾವ ಎದ್ದು ಕಾಣುತ್ತಿತ್ತು.

"ಇಲ್ಲೇನು ಕೆಲಸ ನಿನಗೆ ?" ಬಾರಬಾರಾನ ಮುಖವನ್ನು ದಿಟ್ಟಿಸುತ್ತ ಆ ಮನುಷ್ಯ ಕರ್ಕಶ ಸ್ವರದಲ್ಲಿ ಪ್ರಶ್ನಿಸಿದ.

"ನಮ್ಮ ತಂದೆ ಮಿಸ್ಟರ್ ಮೆಲ್ಡ್ರಮ್ ಇಲ್ಲಿ ಇರುತ್ತಾರೇನು ?" ಅವಳು ಮೋರೆ ಮೇಲೆತ್ತಿ ದೃಢ ಸ್ವರದಿಂದ ಕೇಳಿದಳು.

ಅವನು ಪ್ರಶ್ನೆಗೆ ಕೂಡಲೆ ಉತ್ತರ ಕೊಡದೆ ಕೆಂಗಣ್ಣಿನಿಂದ ಅವಳನ್ನು ಅಪಾದ ಮಸ್ತಕವಾಗಿ ನೋಡಿದ. ತಾನಿಲ್ಲಿಗೆ ಬಂದುದರಿಂದ ಅವನು ಅತ್ಯಂತ ಅಸಂತುಷ್ಟನಾತರುವನೆಂದು ಅವನ ಮುಖಭಾವದಿಂದ ಬಾರಬಾರಾ ತಿಳಿದುಕೊಂಡಳು. ಆದರೆ ಅವನ ಕಠೋರತೆಯಿನ್ನು ಕಂಡು ಅವಳೇನು ಹಿಂಜರಿಯಲಿಲ್ಲ. ತನ್ನ ತಂದೆಯನ್ನು ಶೋಚನೀಯ ಅಧಃಪತನದಿಂದ ಉದ್ಧರಿಸಬೇಕಾದರೆ ಈ ಎಲ್ಲ ನರಪಶುಗಳ ಸಂಬಂಧ ಕಟ್ಟಿಕೊಳ್ಳಲೇಬೇಕೆಂದು ಅವಳೆಂದುಕೊಂಡಳು.

"ಯಾರು ನೀನು?" ಕ್ಷಣ ಹೊತ್ತು ಮೌನವಾಗಿದ್ದು ಆ ಮನುಷ್ಯ ಪ್ರಶ್ನೆ ಮಾಡಿದ.

"ನಾನು ಮಿಸ್ ಫೆಲ್‌ಸ್ಟನ್."

"ಅಪ್ಪನೆ? ಚೆಲೋ ಸಿಕ್ಕುಬಿದ್ದೆ. ಮಿ. ಮೆಲ್ಮ್ರಮರ ಮಗಳು ಮಿಸ್ ಫೆಲ್‌ಸ್ಟನ್! ಎಂಥ ಮಗಳು ನೀನವರಿಗೆ?" ತಲೆ ಹಾಕುತ್ತ ಹಲ್ಲು ಕಿರಿಯುತ್ತ ಅವನು ಕೇಳಿದ.

"ಅವರು ನನ್ನ ತಾಯಿಯ ಎರಡನೆಯ ಗಂಡ. ಆದರೆ ಅವರು ನನ್ನನ್ನು ಚಿಕ್ಕಂದಿನಿಂದಲೂ ಖಾಸ ತಂದೆಯಂತೆಯೇ ಸಲಹಿದ್ದಾರೆ."

ಆ ಮನುಷ್ಯ ಕೊಂಚ ಯೋಚಿಸಿ ಅನಿಚ್ಛಾಭಾವದಿಂದ ಹೇಳಿದ: "ಒಳ್ಳೇದು, ನನ್ನ ಸಂಗಡ ಬಾ."

ಬಾರಬಾರಾ ಹಾಲಿನಲ್ಲಿ ಪ್ರವೇಶಿಸಿದಳು. ಸುಪ್ರಶಸ್ತವಾದ ಕೋಣೆ. ಅದರ ಬಾಗಿಲುಗಳು ಬಹಳ ಹಳೆಯ ಕಾಲದವು. ಸುದೃಢ ಓಕ ಕಟ್ಟಿಗೆಯಿಂದ ಮಾಡಿದವು. ಮಧ್ಯ ಸ್ಥಳದಲ್ಲಿ ಮಧ್ಯ ಯುಗದಲ್ಲಿ ಪ್ರಚಲಿತವಾಗಿದ್ದ ದೀಪಾಧಾರದಲ್ಲಿ ಎಣ್ಣೆಯ ದೀಪ ಉರಿಯುತ್ತಿತ್ತು. ಮೇಲ್ಗಡೆ ಸಾಲ್ಗೊಂಡ ಗ್ಯಾಲರಿ. ಅದರ ಪಕ್ಕದಲ್ಲಿ ಕಿರಿಯಗಲಾದ ಮೆಟ್ಟಿಲು. ಅಲ್ಲಿದ್ದ ಕುರ್ಚಿ ಮೇಜು ಮೊದಲಾದವೂ ಓಕ್ ಕಟ್ಟಿಗೆಯವು. ಹಳೆಯವಾದುದರಿಂದ ಜೀರ್ಣವಾಗಿದ್ದವು. ಬಹಳ ಕಾಲ ಹಾಗೇ ಬಿದ್ದಿದ್ದರಿಂದ ಹುಳ ಕೊರೆದಿದ್ದವು. ಕೆಲವು ಪ್ರಶಸ್ತವಾದ ಕುರ್ಚಿಗಳೂ ಒಂದು ಮೇಜೂ ಅಲ್ಲಿದ್ದವು. ಮೆಟ್ಟಿಲ ಕೆಳಗಿನ ಸಂದಿಯಲ್ಲಿ ದೊಡ್ಡದೊಂದು ಸಂದುಕವಿತ್ತು. ಅಂತಹ ಸಂದುಕಗಳು ಮಧ್ಯ ಯುಗದಲ್ಲಿಯೇ ತಯಾರಾಗುತ್ತಿದ್ದವು. ಸಂದುಕ ಸುದೃಢವಾದುದಾದರೂ ಅಂದವಾದದ್ದಲ್ಲ.

ಮಳೆ ನಿಂತ ಬಳಿಕ ಹವೆ ಸ್ವಲ್ಪ ಉಷ್ಣವಾಗಿತ್ತು. ಕೋಣೆಯಲ್ಲಿ ಅಗ್ನಿಕುಂಡವೂ ಉರಿಯುತ್ತಿತ್ತು. ಆದರೂ ಕೋಣೆಯೊಳಗಿನ ಹವೆ ಮಾತ್ರ ತಂಪಾಗಿಯೂ ಆರ್ದ್ರವಾಗಿಯೂ ಇತ್ತು. ದೀರ್ಘ ಕಾಲದಿಂದಲೂ ಈ ಮನೆಯಲ್ಲಿ ದುಷ್ಕರ್ಮಗಳನ್ನು ಮಾಡುತ್ತಿದ್ದ ದುರ್ಜನರು ಸತ್ತ ಬಳಿಕ ಅವರ ಆತ್ಮಗಳು ತಮ್ಮ ನಾನಾ ದುಷ್ಕೃತ್ಯಗಳ ಲೋಮಹರ್ಷಕ ಕಥೆಗಳನ್ನು ಅದೃಶ್ಯಭಾಷೆಯಲ್ಲಿ ಗೋಡೆಗಳ ಮೇಲೆಲ್ಲ ಬರೆದಿವೆಯೋ, ಆ ಪಾಪಾತ್ಮಗಳು ಈಗಲೂ

ಕೋಣೆಯಲ್ಲಿ ಸುತ್ತಾಡುತ್ತಿವೆಯೋ ಎಂಬಂತೆ ಬಾರಬಾರಾಗೆ ಭಾಸವಾಯಿತು. ಬರಿ ಭಾಸವೇಕೆ, ಅವುಗಳ ಅಸ್ತಿತ್ವವು ಸ್ಪಷ್ಟವಾಗಿಯೇ ಅವಳ ಅನುಭವಕ್ಕೆ ಬಂದಿತು. ಅವಳೆಷ್ಟು ಪ್ರಯತ್ನ ಪಟ್ಟರೂ ಅವಳ ಮಾನಸಿಕ ಅಶಾಂತಿ ದೂರಾಗಲಿಲ್ಲ.

ಕೋಣೆಯ ಒಂದು ಕಡೆ ದೊಡ್ಡದಾದ ಬಾಗಿಲಿದ್ದಿತು. ಬಾರಬಾರಾನ ಪಥಪ್ರದರ್ಶಕನು ಆ ಬಾಗಿಲನ್ನು ಮೂರು ಸಲ ತಟ್ಟಿದನು. ಕ್ಷಣಹೊತ್ತಿನಲ್ಲಿ ಬಾಗಿಲಿನ ಆ ಬದಿಯಲ್ಲಿಯೂ ಅದೇ ರೀತಿ ಕರಾಘಾತದ ಶಬ್ದ ಕೇಳಿಸಿತು. ಆ ಮೇಲೆ ಕೊಂಡಿ ತೆಗೆದ, ಅಗುಳಿ ಸರಿಸಿದ ಶಬ್ದ. ಮರುಕ್ಷಣದಲ್ಲಿ ಬಾಗಿಲು ಎರಡು ಇಂಚಿನಷ್ಟು ಮಾತ್ರ ತೆರೆಯಿತು.

"ಯಾರು? ಏನು ಕೆಲಸ?" ಒಳಗಿನಿಂದ ಗಂಭೀರ ಸ್ವರದ ಪ್ರಶ್ನೆ ಬಂದಿತು. ಧ್ವನಿ ಕರ್ಕಶ, ನೀರಸ. ಇದು ತನ್ನ ಮಲತಂದೆಯ ಧ್ವನಿಯೆಂದು ಬಾರಬಾರಾ ಗುರ್ತಿಸಿದಳು. ಕೇಳಿದೊಡನೆ ಅವಳು ಅತ್ಯಂತ ವಿಚಲಿತಳಾದಳು. ಅವಳಿಂದ ಉತ್ತರ ಕೊಡುವುದಾಗಲಿಲ್ಲ.

"ಇಲ್ಲೊಬ್ಬ ಯುವತಿ ಬಂದಿದ್ದಾಳೆ. ತಾನು ನಿಮ್ಮ ಮಗಳೆಂದು ಹೇಳುತ್ತಿದ್ದಾಳೆ." ಅವಳು ನೀರವವಾಗಿರುವುದನ್ನು ಕಂಡು ಕರೆತಂದ ಮನುಷ್ಯನೇ ಉತ್ತರವಿತ್ತ.

ಅದನ್ನು ಕೇಳಿ ಮಲತಂದೆ ಕಠೋರ ಸ್ವರದಲ್ಲಿ ಹೂಂಕರಿಸಿದ. ಆ ಹೂಂಕಾರದಲ್ಲಿ ಅವನ ವಿರಾಗ, ಭಯ, ಉದ್ವೇಗಗಳು ಬೆರೆತಿದ್ದವು. ಬಾರಬಾರಾ ಬಾಗಿಲ ಕಡೆ ನೋಡಿದಳು. ವಿವರ್ಣ ಶುಷ್ಕ ಮುಖವೊಂದು ಕಂಡಿತು. ಅವನ ಎವೆಯಿಕ್ಕದ ಕಣ್ಣುಗಳು ಅವಳ ಮುಖದಲ್ಲಿಯೇ ನಟ್ಟಿದ್ದವು. ದೃಷ್ಟಿ ಕೋಮಲತಾವಿಹೀನ, ಅಸಂತೋಷಭರಿತ.

ಆ ಮನುಷ್ಯ ಮತ್ತೆ ಯಾವ ಮಾತನ್ನೂ ಆಡದೆ ಬಾಗಿಲು ತಳ್ಳಿಕೊಂಡು ಈಚೆಗೆ ಬಂದನು. ಅವನ ಕೈಯಲ್ಲಿ ಬೀಗದ ಕೈ ಗೊಂಚಲಿತ್ತು. ಹೊರಗೆ ಬಂದವನೇ ಬಾಗಿಲನ್ನಿಕ್ಕಿ ಕೀಲಿ ಹಾಕಿ, ಬಾರಬಾರಾನ ಎದುರಿಗೆ ಬಂದು ನಿಂತನು. ಅವಳು ಅವನನ್ನು ಬಹು ದಿನಗಳ ತರುವಾಯ ಕಂಡಿದ್ದರೂ ಅವಳ ಮನಸ್ಸು ಸಂತುಷ್ಟವಾಗಲಿಲ್ಲ. ಅವಳ ಹೃದಯದಲ್ಲಿ ಒಂದು ಬಗೆಯ ಅವ್ಯಕ್ತ ವೇದನೆಯುಂಟಾಯಿತು. ತಾನು ಎಳೆತನದಿಂದಲೂ ನೋಡುತ್ತ ಬಂದ,

ತನ್ನನ್ನು ಸ್ನೇಹ ಯತ್ನಗಳಿಂದ ಜೋಪಾನ ಮಾಡಿದ, ತನ್ನ ಸುಖದುಃಖಗಳಲ್ಲಿ ಅವಲಂಬನವಾಗಿದ್ದ ಪ್ರಸನ್ನಚಿತ್ತನಾದ ಕರ್ಮಠ ಜಾನ್ ಮೆಲ್ಡ್ರಮ್ ಇವನಲ್ಲ ಎಂದು ಬಾರಬಾರಾಗೆ ಎನಿಸಿತು. ಹೆಚ್ಚು ಕಾಲ ಅವನೊಂದಿಗೆ ಕಾಲ ಕಳೆದ ವಳಾಗಿದ್ದರೆ, ಈಗ ಅವನನ್ನು ನೋಡಿ ಖಂಡಿತವಾಗಿ ಅವಳು ಗುರುತಿಸುತ್ತಿರ ಲಿಲ್ಲ. ಇಷ್ಟು ಅಲ್ಪಾವಧಿಯಲ್ಲಿ ಮನುಷ್ಯ ಇಷ್ಟು ಬದಲಾಗುವನೆಂಬುದನ್ನು ನಂಬುವುದೇ ಅವಳಿಗೆ ಕಷ್ಟವಾಯಿತು. ಆದರೆ ಈ ಮನುಷ್ಯ ತನ್ನ ಮಲ ತಂದೆಯೇ ಎಂಬಲ್ಲಿ ಅವಳಿಗೆ ಸಂದೇಹವಿರಲಿಲ್ಲ.

ಜಾನ್ ಮೆಲ್ಡ್ರಮನಂತೆ ಈ ಮನುಷ್ಯ ಪರಿಷ್ಕಾರ ಪರಿಚ್ಛನ್ನನಲ್ಲ. ಮೋರೆ ಕಪ್ಪಾಗಿ ಹೋಗಿದೆ, ಮೈಯೊಳಗಿಂದ ಬೂದಿ ಹಾರುತ್ತಿರುವಂತೆ ಕಾಣು ತ್ತಿದೆ; ಬಣ್ಣಗೆಟ್ಟ ಹರಕ ಕೋಟಿನಲ್ಲಿ ಅಲ್ಲಲ್ಲಿ ಹಲವಾರು ಬಣ್ಣಗಳ ಕಲೆಗಳು; ಬಡಕಲಾದ ಮೈಗೆ ಉಡಿಗೆ ತೊಡಿಗೆಗಳು ಸಡಿಲುಬಡಿಲಾಗಿವೆ; ಅಸ್ವಾಭಾವಿಕ ಉಜ್ವಲವಾದ ಕಣ್ಣುಗಳ ದೃಷ್ಟಿಯಲ್ಲಿ ಕ್ರೌರ್ಯ ಮನೆ ಮಾಡಿದೆ. ಅವನ ಕಂಠ ಸ್ವರವೂ ಬದಲಾಗಿದೆ. ಅವನು ಮಗಳ ದರ್ಶನದಿಂದ ಕೊಂಚವೂ ಸಂತೋಷ ವನ್ನು ವ್ಯಕ್ತಗೊಳಿಸಲಿಲ್ಲ. ಅವನ ಮುಖ ಭಾವದಲ್ಲಿ ಸಹಾನುಭೂತಿಯ ಚಿಹ್ನೆ ಕೂಡ ತೋರಲಿಲ್ಲ.

"ನೀನು ಇಲ್ಲಿಗೆ ಹೇಗೆ ಬಂದೆ ?" ಕಠೋರ ಸ್ವರದಿಂದ ಬಾರಬಾರಾನ ಮೋರೆ ನೋಡುತ್ತ ಅವನು ಕೇಳಿದ.

ಈ ಪ್ರಶ್ನೆಯಿಂದ ಅವಳು ಅತ್ಯಂತ ವಿಚಲಿತಳಾದಳು. ನಾಮ ಮಾತ್ರ ಪರಿಚಿತರು ಕೂಡ, ಬಹುಕಾಲದ ಮೇಲೆ ಭೆಟ್ಟಿಯಾದರೆ ಎಷ್ಟೋ ಸಹೃದಯತೆ ಯಿಂದ ಮಾತನಾಡುವರು. ಆದರೆ, ತಾನು ಬಹು ಕಾಲ ಗೌರವ ಶ್ರದ್ಧೆ ಗಳಿಂದ ನೋಡುತ್ತ ಬಂದ ತಂದೆಯ ವ್ಯವಹಾರ ಈ ರೀತಿ ! ಆದರೆ ಅವಳಿಗೆ ನೀರವವಾಗಿರುವುದು ಅಶಕ್ಯವಾಯಿತು. ಮನದ ಕಷ್ಟವನ್ನು ಬಚ್ಚಿಟ್ಟು ಸಹಜ ಸ್ವರದಲ್ಲಿ ಅವಳು ಉತ್ತರವಿತ್ತಳು: "ಸ್ವಲ್ಪ ದಾರಿ ನಾವೆಯಲ್ಲಿ; ಸ್ವಲ್ಪ ದಾರಿ ಟ್ರೇನಿನಲ್ಲಿ;"

"ಹಾಂ, ಹಾಂ. ಅದು ನನಗೆ ಗೊತ್ತಿದೆ. ಆದರೆ ನಾನು ಇಲ್ಲಿದ್ದದ್ದು ನಿನಗೆಲ್ಲಿ ಗೊತ್ತಾಯಿತು ?" ಜಾನ್ ಮೆಲ್ಡ್ರಮ್ ಕೊಂಚ ಅಧೀರ ಸ್ವರದಿಂದ ಕೇಳಿದ.

ಇದಕ್ಕೇನು ಹೇಳಬೇಕೆಂಬುದು ಬಾರಬಾರಾಗೆ ತೋಚದಾಯಿತು. ಬಲು ಕಠಿನ ಪ್ರಶ್ನೆ. ಶ್ರೀಮತಿ ಲಾರ್‌ಸನ್ನಳಿಂದ ತಿಳಿಯಿತೆಂದು ಹೇಳಲು ಅವಳ ಮನವೊಪ್ಪದು. ಅದರಿಂದ ಆ ಬಡ ಅಡಿಗೆಯವಳು ಎಂತಹ ಹಿಂಸೆಗೆ ಈಡಾಗುವಳೆಂಬುದು ಅವಳಿಗೆ ತಿಳಿಯದ ಮಾತಲ್ಲ. ತನ್ನನ್ನು ಒಳಗೆ ಬರಮಾಡಿಕೊಂಡ ಆ ರಕ್ಕಸ ತುಸು ಅಂತರದಲ್ಲಿಯೇ ನಿಂತು ತಮ್ಮ ಮಾತುಗಳನ್ನು ಕೇಳುತ್ತಿದ್ದಾನೆ; ಅದನ್ನು ಅವಳು ಬಲ್ಲಳು. ಆ ಪ್ರಶ್ನೆಯನ್ನು ಬದಿಗಿಟ್ಟೇ ಅವಳು ಮಾತನಾಡಿದಳು: "ನೀವೆಷ್ಟು ಬದಲಾಯಿಸಿ ಬಿಟ್ಟಿದ್ದೀರಿ ! ನಾನು ನಿಮ್ಮ ಪರಮ ಆತ್ಮೀಯಳು; ಇಷ್ಟು ದೂರದಿಂದ ನಿಮ್ಮ ಹತ್ತಿರ ಬಂದಿದ್ದೇನೆ; ನೀವಾದರೋ ಯಾವ ರೀತಿ ಸ್ವಾಗತಿಸುತ್ತೀರಿ ? ನಿಮ್ಮ ಮನಸ್ಸಿಗೆ ಸ್ವಲ್ಪವಾದರೂ ನಾಚಿಕೆ ಎನಿಸುವುದಿಲ್ಲವೆ ?"

ಮೆಲ್ಡ್ರಮ್ ಅವಳ ಮಾತನ್ನು ಕಿವಿಯಲ್ಲೇ ಹಾಕಿಕೊಳ್ಳಲಿಲ್ಲ. "ನಾನಿಲ್ಲಿ ಇದ್ದ ಸಂಗತಿ ನಿನಗೆ ಹೇಗೆ ಗೊತ್ತಾಯಿತೆಂಬುದೇ ಮೊದಲು ಬೇಕಾಗಿದೆ." ಎಂದು ಕೇಳಿದ.

ಅವನ ಮುಖಭಾವವನ್ನು ನೋಡಿ, ಕಂಠಸ್ವರವನ್ನು ಕೇಳಿ ಬಾರಬಾರಾ ಅಂಜಿದಳು. ಈ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯದಿದ್ದರೆ ಅವನು ತನ್ನನ್ನು ಈ ಕ್ಷಣ ಕತ್ತು ಹಿಸುಕಿ ಕೊಂದು ಬಿಡಬಹುದೆಂದು ಅವಳಿಗೆನಿಸಿತು. ಹುಲಿಯಂತೆ ಕ್ರೂರ ದೃಷ್ಟಿಯಿಂದ ಅವಳ ಕಡೆ ನೋಡುತ್ತ ಅವನು ಉತ್ತರವನ್ನು ನಿರೀಕ್ಷಿಸುತ್ತಿದ್ದ.

ಆದರೂ ಅವಳು ಈ ಪ್ರಶ್ನೆಗೆ ಉತ್ತರವೀಯಲಿಲ್ಲ. ಸಮೀಪದಲ್ಲಿಯೇ ನಿಂತಿದ್ದ ಮೆಲ್ಡ್ರಮನ ಅನುಚರನ ಕಡೆಗೊಮ್ಮೆ ವಕ್ರ ಕಟಾಕ್ಷ ಬೀರಿ ಅವಳೆಂದಳು: "ನೀವೇಕೆ ಇಷ್ಟು ವಿಚಲರಾಗುತ್ತೀರಿ ? ನಮ್ಮ ಮನೆವಾರ್ತೆಯ ವಿಷಯ ಹಿಂದುಗಡೆ ಗುಟ್ಟಾಗಿ ಮಾತಾಡೋಣ. ಹಾಗೆ ಮಾಡುವುದರಲ್ಲಿ ಏನಾದರೂ ನಷ್ಟವಿದೆಯೆ ?"

ಮೆಲ್ಡ್ರಮ್ ಅವಳ ಮನೋಭಾವವನ್ನರಿತುಕೊಂಡು ಮಾತನಾಡಿದ, "ನಿನ್ನ ಮಾತನ್ನು ಬೇರೆಯವರು ಕೇಳುತ್ತಾರೆಂದು ಸಂಕೋಚವೆನಿಸುತ್ತಿದೆಯೆ ? ಆದರೆ ಇಲ್ಲಿ ಮಿ. ಲಕ್‌ಲಿಜ್ಜನ ಹೊರತು ಮತ್ತೊಬ್ಬರಿಲ್ಲ. ಅವನೆದುರು

ಯಾವ ಮಾತನ್ನಾದರೂ ಬಚ್ಚಿಡುವ ಆಗತ್ಯವಿಲ್ಲ. ನಾನು ಎಲ್ಲಿದ್ದೇನೆಂಬುದು –ನನಗೆನಿಸುತ್ತವೆ–ಲಾರ್‌ಸೆನ್ನಳಿಂದ ಅರಿತುಕೊಂಡೆಯಲ್ಲವೆ? ನನ್ನ ಸದ್ಯದ ವಿಳಾಸವನ್ನು ಅವಳೇ ತಿಳಿಸಿದಳಲ್ಲವೆ, ನಿನಗೆ ?"

ಬಾರಬಾರಾ ಹೂಂ ಉಂಹೂ ಏನೂ ಎನ್ನದೆ ತಲೆ ತಗ್ಗಿಸಿಕೊಂಡು ನಿಂತಳು. ಇದು ಅವಳ ಚಾತುರಿಯೆಂದೇನೂ ಹೇಳಲಾಗದು. ಅವಳಿಗೆ ಜೀವದೊಳಗೆ ಜೀವವೇ ಇಲ್ಲದಂತಾಗಿ ದೇಹ ಅವಸನ್ನವಾಗಿತ್ತು. ಆದರೆ ಅವಳ ದೇಹ ಎಷ್ಟು ಅವಸನ್ನವಾಗಿದ್ದರೂ ಅವಳ ಮಾನಸಿಕ ಶಕ್ತಿ ಸತರ್ಕತೆ ಗಳು ಬಿಂದುಮಾತ್ರವೂ ಸಡಿಲಲಿಲ್ಲ. ಯಾವ ನಂಬುಗೆಯಿಂದ ಆ ಮುದುಕ ಅಡಿಗೆಯವಳು ತನಗೆ ಈ ಗುಪ್ತ ವಿಷಯ ತಿಳಿಸಿರುವಳೋ ಅವಳಿಗೆ ವಿಶ್ವಾಸ ಘಾತ ಮಾಡಲಾಗದೆಂದು ಅವಳ ಮನಸ್ಸು ದೃಢವಾಗಿತ್ತು. ಅವಸನ್ನ ದೇಹ ನಿಲ್ಲಲಾರದೆ ಬೀಳುವಂತಾಯಿತು. ಕ್ಷೀಣ ಸ್ವರದಿಂದ ಅವಳೆಂದಳು: "ನನಗೀಗ ಸ್ವಲ್ಪ ವಿಶ್ರಾಂತಿ ಸಿಕ್ಕದಿದ್ದರೆ ಮೂರ್ಛೆ ಬಂದು ಬೀಳುತ್ತೇನೆ."

ಮೆಲ್ಡ್ರಮ್ ಅವಳ ಮುಖವನ್ನು ದಿಟ್ಟಿಸಿದ. ಇದು ಅಭಿನಯವೆಂಬ ಸಂದೇಹ ಆವನಿಗುಂಟಾಗಲಿಲ್ಲ. ಅವಳಿಗೆ ಸ್ವಲ್ಪ ಹೊತ್ತು ವಿಶ್ರಾಂತಿ ಕೊಡುವ ಉದ್ದೇಶದಿಂದ "ನನ್ನ ಸಂಗಡ ಬಾ" ಎಂದು ಹೇಳಿ ಅವನು ಒಂದು ಕಿರಿಯಗ ಲಾದ ಸೋಪಾನವನ್ನೇರಿ ಸಾಗಿದ.

ಇಬ್ಬರೂ ವರಾಂಡವನ್ನು ದಾಟಿ ಸುಮಾರು ನೂರಡಿ ಕ್ರಮಿಸಿದ ಮೇಲೆ ಕೆಲವು ಕೋಣೆಗಳ ಸಾಲು ಹತ್ತಿತು. ಮೆಲ್ಡ್ರಮ್ ಅವುಗಳಲ್ಲಿ ಕೊನೆಯ ಕೋಣೆಯ ಬಾಗಿಲನ್ನು ತೆರೆದು, ಆದರೊಳಗೆ ಹೋಗುವಂತೆ ಬಾರಬಾರಾಗೆ ಸಂಜ್ಞೆ ಮಾಡಿದ. ಆವನೂ ಒಳಗೆ ಹೋಗಿ ಸ್ವಿಚ್ಚೊತ್ತಿ ದೀಪ ಹಚ್ಚಿದ. ಅಲ್ಲಿ ಏನೂ ಹಾಸಿರಲಿಲ್ಲ. ತೇವ ಬಸಿಯುತ್ತಿತ್ತು; ಬಹಳ ತಂಪಾಗಿತ್ತು. ಆಲ್ಲೊಂದು ಮಡಿಚಿಡಲು ಬರುವಂತಹ ಕಿರಿಯಗಲಾದ ಕಾಟು. ಅದರ ಮೇಲೆ ತೆಳ್ಳನೆಯ ಕಂಬಳಿ ಹಾಸಿತ್ತು. ಪಕ್ಕದಲ್ಲಿ ಒಂದು ಮೇಜು, ಕುರ್ಚಿ ಮತ್ತು ಬಟ್ಟೆಯಿಡುವ ಸೆಲ್ಫ. ಮೇಜಿನ ಮೇಲೆ ಕೆಲವು ಅಲಂಕರಣದ ಸಾಮುಗ್ರಿಗಳು.

ಅಪ್ರಸನ್ನ ಸ್ವರದಿಂದ ಮೆಲ್ಡ್ರಮ್ ಹೇಳಿದ: "ಆ ಮಂಚದಲ್ಲಿ ವಿಶ್ರಮಿ ಸಿಕೋ. ನಾನು ಹೋಗಿ ಊಟಕ್ಕೆ ಏನಾದರೂ ಕಳಿಸುತ್ತೇನೆ. ನಿನ್ನ ಊಟ ವಿಶ್ರಾಂತಿ ಮುಗಿದ ಬಳಿಕ ನಿನ್ನ ಮಾತೆಲ್ಲಾ ಕೇಳಿಕೊಳ್ಳುತ್ತೇನೆ, ನಾನು ಹೇಳು

ವುದನ್ನೂ ಹೇಳುತ್ತೇನೆ. ಆದರೆ ನೀನೇನಾದರೂ ಸುಳ್ಳುಪಳ್ಳು ಹೇಳಿ ನನ್ನನ್ನು ವಂಚಿಸಲು ಹವಣಿಸಿದರೆ ನೋಡಿಕೋ —"

ಬಾರಬಾರಾ ಯಾವ ಮಾತನ್ನೂ ಆಡದೆ ಮಂಚದ ಮೇಲೆ ಒರಗಿಕೊಂಡಳು. ಮೆಲ್ಡ್ರಮ್ ತೀವ್ರ ದೃಷ್ಟಿಯಿಂದ ಅವಳ ಮುಖವನ್ನು ನೋಡಿ ಮೌನವಾಗಿ ಹೊರಟು ಹೋದ. ಕೋಣೆಯ ಬಾಗಿಲಿಕ್ಕಿ ಕೀಲಿ ಹಾಕಿಕೊಂಡು ಹೋದ. ಆಮೇಲೆ ಬಾರಬಾರಾ ನಿಶ್ಶಬ್ದವಾಗಿ ಮಂಚದಿಂದೆದ್ದು ಬಾಗಿಲ ಬಳಿ ಹೋದಳು. ಬಾಗಿಲು ತೆರೆಯಲು ಪ್ರಯತ್ನಿಸಿದಳು, ವಿಫಲವಾಯಿತು. ಈ ಕಟ್ಟಡವನ್ನು ಪ್ರವೇಸಿಸಿದ ಹತ್ತು ನಿಮಿಷಗಳೊಳಗೇ ಅವಳು ತಂದೆಯಿಂದ ಸೆರೆಯಾಳಾದಳು.

ಎಷ್ಟೋ ನಿಮಿಷ ಬಾರಬಾರಾ ಮುಚ್ಚಿದ ಕದವನ್ನೇ ನೋಡುತ್ತ ನಿಂತಳು. ಇನ್ನೇನು ಮಾಡುವುದೆಂದು ತೋಚಲಿಲ್ಲ ಅವಳಿಗೆ. ಮುಂಬಾಗಿಲೊಳಗೆ ಅಡಿಯಿಡುವಾಗಲೇ ಅವಳಿಗುಂಟಾಗಿದ್ದ ವಿಪತ್ತಿನ ಭಯ ಈಗ ಕ್ಷಣಕ್ಷಣಕ್ಕೂ ಹೆಚ್ಚತೊಡಗಿತು. ಈ ನಿರ್ಜನವಾದ ಕೋಣೆಯಲ್ಲಿ ಸೆರೆ ಬಿದ್ದುದರಿಂದ, ತನ್ನ ಭಾಗ್ಯದಲ್ಲಿ ಮುಂದೇನಿದೆಯೋ ಎಂಬ ಚಿಂತೆ ಬಲವಾಗಿ ಅವಳನ್ನು ವ್ಯಾಕುಲಗೊಳಿಸಿತು. ತನ್ನೊಡನೆ ಈ ರೀತಿ ವರ್ತಿಸಲು ಕಾರಣವೇನು ಎಂದವಳು ಯೋಚಿಸತೊಡಗಿದಳು. ಸಂಗಡಲೇ ಅನೇಕ ಮಾತುಗಳು ನೆನಪಿಗೆ ಬಂದವು.

ಡಾಕ್ಟರು ವಿಶ್ರಾಂತಿ ಪಡೆಯಬೇಕೆಂದು ಸಲಹೆಯಿತ್ತರೂ ತನ್ನ ತಂದೆ ಮನ್ನಿಸದೆ ಕೈಕೊಂಡ ಕಾರ್ಯಭಾರದ ಫಲವಾಗಿಯೇ ಅವನಿಗೆ ಇಂತಹ ಶೋಚನೀಯ ಸ್ಥಿತಿ ಪ್ರಾಪ್ತವಾಯಿತೆಂದು ಅವಳಿಗೆನಿಸಿತು. ನ್ಯೂಯಾರ್ಕಿನಿಂದ ಅವನು ಹಠಾತ್ ಪಲಾಯನ ಮಾಡಿದ್ದೇಕೆಂಬುದು ಅವಳಿಗೆ ತಿಳಿಯಲಿಲ್ಲ. ಆಮೇಲೆ ಪ್ಯಾರೀಸಿನಿಂದ ಯಾರಿಗೂ ತಿಳಿಯದಂತೆ ಹೊರಟು ಬಂದುದರಲ್ಲಿ, ತನ್ನ ಸದ್ಯದ ನಿವಾಸ ಸ್ಥಳವನ್ನು ಗುಪ್ತವಾಗಿರಿಸಲು ಅತ್ಯಂತ ಪ್ರಯತ್ನಪಡುವುದರಲ್ಲಿ ಯಾವ ರಹಸ್ಯವಿರಬಹುದೆಂಬುದನ್ನು ತರ್ಕಿಸುವುದೂ ಅವಳಿಗೆ ಅಸಾಧ್ಯವಾಯಿತು. ವಿಶೇಷವಾಗಿ, ಅವನು ಇಂಗ್ಲಂಡಿಗೆ ಬಂದು ಈ ನಿರ್ಜನವಾದ ಭಾಗದಲ್ಲಿ, ಸಜ್ಜನರಿಗೆ ಅಯೋಗ್ಯವಾದ ಈ ಪರಿತ್ಯಕ್ತ ಸ್ಥಾನದಲ್ಲಿ, ಚೋರ ತಸ್ಕರರ ವಾಸಯೋಗ್ಯವಾದ ಮನೆಯಲ್ಲಿ ವಾಸ ಮಾಡಿದ ಉದ್ದೇಶವೇನಿರಬಹುದು? ಕೆಲವು ಜನ ಕ್ರೂರ ಪ್ರಕೃತಿಯ ದುರ್ಜನರೊಂದಿಗೆ ಫರಾರಿ ಮನುಷ್ಯರಂತೆ ಅಡಗಿಕೊಂ

ಡಿರುವುದೇಕೆ? ಇಲ್ಲಿ ಯಾರಿಗೂ ತನ್ನ ಪತ್ತೆ ಹತ್ತಬಾರದೆಂದು ಯಥಾಶಕ್ತಿ ಪ್ರಯತ್ನಿಸುತ್ತಿರುವುದಕ್ಕೆ ಕಾರಣವೇನು? ಇಷ್ಟು ದಿನವೂ ತನ್ನನ್ನು ಪ್ರೀತಿ ಯಿಂದ ಜೋಪಾನ ಮಾಡಿದವನು, ಎಂದೂ ತನಗೆ ಕಠಿನ ಮಾತನಾಡದವನು ತನ್ನ ತಂದೆ ತಾಯಿಗಳ ಅಭಾವ ತೋರದಂತೆ ನೋಡಿಕೊಂಡವನು, ಇಂದು ಅದೇ ತಾನು ಸ್ವೇಚ್ಛೆಯಿಂದ ಅವನಿದ್ದಲ್ಲಿಗೆ ಬಂದಿರಲು ಇದೆಂತಹ ಅದ್ಭುತ ವರ್ತನೆ! ತನ್ನನ್ನು ಪೀಡಿಸುವುದಕ್ಕೆ ಅವನಿಗೆ ಸ್ವಲ್ಪ ಸಂಕೋಚವೂ ಇಲ್ಲ; ಅಷ್ಟೇಕೆ, ಅಗತ್ಯವೆನಿಸಿದರೆ ತನ್ನನ್ನು ಕೊಲ್ಲಲೂ ಅವನು ಹಿಂದೆಮುಂದೆ ನೋಡ ಲಿಕ್ಕಿಲ್ಲ! ಅವನು ಕೆಳಭಾಗದ ಕೋಣೆಯಲ್ಲಿಯೇ ಯಾವಾಗಲೂ ಬಾಗಿಲಿಕ್ಕಿ ಕೊಂಡು ಇರುವುದೇಕೆ? ಅಲ್ಲಿ ಬೇರೆ ಯಾರಿಗೂ ಪ್ರವೇಶವಿಲ್ಲವಂತೆ, ಏಕೆ? ಒಬ್ಬನೇ ಅಲ್ಲಿ ಮಾಡುವುದೇನು? ಅವನ ಎಲ್ಲ ಕಾರ್ಯವೂ ರಹಸ್ಯಪೂರ್ಣ! ಅವನು ನಿಜವಾಗಿಯೂ ಗುಪ್ತವಾಗಿ ಏನೋ ಒಂದು ಗುಪ್ತ ಅನುಷ್ಠಾನದಲ್ಲಿ ಮಗ್ನನಾಗಿದ್ದಾನೆಂಬಲ್ಲಿ ಬಾರಬಾರಾಗೆ ಸಂದೇಹ ಉಳಿಯಲಿಲ್ಲ.



ತುಸು ಹೊತ್ತಿನಲ್ಲಿ ಕೋಣೆಯ ಬಾಗಿಲನ್ನು ತೆರೆದು ಇಬ್ಬರು ಒಳಗೆ ಬಂದರು. ಒಬ್ಬನ ಕೈಯಲ್ಲಿ ಆಹಾರದ ತಟ್ಟೆ; ಇನ್ನೊಬ್ಬನ ಕೈಯೊಳಗೆ ನೀರಿನ ಗ್ಲಾಸು.

ಊಟವನ್ನು ತಂದ ಮನುಷ್ಯ ಪರ್ವತಪ್ರಾಯ ವಿರಾಟ್ ಕಾಯ. ಇಂತಹ ಸ್ಥೂಲಕಾಯನನ್ನು ಬಾರಬಾರಾ ಹಿಂದೆಂದೂ ನೋಡಿರಲಿಲ್ಲ. ಪುರಾಣ ಗಳಲ್ಲಿ ವರ್ಣಿಸಿದ ದೈತ್ಯನೇ. ಎತ್ತರ ಸುಮಾರು ನಾಲ್ಕೂವರೆ ಮೊಳ. ಅವನು ನಿಗ್ರೋ ಜಾತಿಯವನಾದರೂ ಮೈಬಣ್ಣ ಸಂಕರವನ್ನು ಸೂಚಿಸುವ ಬಿಳಿಛಾಯೆ ಯದು. ಕಣ್ಣುಗಳು ಸಣ್ಣವು, ಆದರೆ ಉಜ್ವಲ, ಕ್ರೌರ್ಯಪೂರ್ಣ. ಕೆಳದುಟಿ ಗಡುತರ–ಚಪ್ಪಟೆ. ನಾಲಿಗೆ ಕ್ಷಣಕ್ಷಣಕ್ಕೂ ಕೆಳದುಟಿಯನ್ನು ನೆಕ್ಕುತ್ತಿತ್ತು. ಮೊರಗಿವಿಗಳು ತಲೆಗೆ ಅಂಟಿಕೊಂಡಿದ್ದವು.

ಅವನ ಹಿಂದಿದ್ದ ಮನುಷ್ಯ ಗಿಡ್ಡ. ದೇಹ ಮೂಳೆಯ ಗೂಡು—ಬಹುಶಃ ಮಾಂಸ ಕೊಂಚವೂ ಇರಲಿಕ್ಕಿಲ್ಲ. ಮೇಲಕ್ಕೆದ್ದ ಹುಬ್ಬುಗಳು. ಮುಂದಲೆಯಿಂದ ತಲೆಯ ಮೇಲಕ್ಕೆ ತಳ್ಳಿಟ್ಟ ಎಣ್ಣೆ ಹಚ್ಚಿದ ಕಪ್ಪು ಕೂದಲು. ಕಿರಿಯುಗಲಾದ ಉಬ್ಬು ಹಣೆ. ದೊಡ್ಡ ಕಣ್ಣುಗಳು; ನೀಲಿಯ ಕಣ್ಗೊಂಬೆಗಳು; ಉಬ್ಬಿದ ಕಣ್ಗುಡ್ಡೆಗಳು.

ಟೊಣಪನು ಆಹಾರದ ತಟ್ಟೆಯನ್ನು ಮೇಜಿನ ಮೇಲಿರಿಸಲು, ಬಡಕಲ ವಾಮನನು ಗ್ಲಾಸನ್ನು ಅದರ ಹತ್ತಿರ ಇಟ್ಟು ಕೋಣೆಯ ಬಾಗಿಲಿಗೆ ಅಡ್ಡ ನಿಂತು ಜಾಗರೂಕತೆಯಿಂದ ಕಾಯತೊಡಗಿದ. ಬಾರಬಾರಾಳನ್ನು ಈ ಕೋಣೆಯಲ್ಲಿ ಬಂಧನದಲ್ಲಿಡಲಾಗಿದೆಯೆಂಬುದನ್ನು ಅವಳಿಗೆ ಸೂಚಿಸುವುದಕ್ಕಾಯೇ ಅವನು ಹಾಗೆ ನಿಂತನೇನೋ. ಇದನ್ನವಳು ಈ ಮೊದಲೇ ಅರಿತು ತನ್ನ ತಂದೆಯ ಈ ಅನುಚರರ ವ್ಯವಹಾರ ಅಪಜ್ಞನಕವೆಂದು ಎನಿಸಿದುದರಿಂದ ಅವಳು ಅತ್ಯಂತ ಕ್ರುದ್ಧಳಾದಳು. ತಾನು ಅಸಹಾಯಳೆಂಬ ಅರಿವು ಅವಳಿಗಿದ್ದರೂ ಕ್ರೋಧವನ್ನು ಸೈರಿಸಿಕೊಳ್ಳುವುದು ಅಸಾಧ್ಯವಾಯಿತು.

ಬಾರಬಾರಾ ಊಟ ಮಾಡುತ್ತ ಮಾಡುತ್ತ ಬಾಗಿಲಲ್ಲಿ ನಿಂತಿದ್ದ ಮನುಷ್ಯನನ್ನು ಉದ್ದೇಶಿಸಿ ಮಾತನಾಡಿದಳು, "ನಮ್ಮ ತಂದೆಗೆ ಹೇಳು—ಹದಿನೈದು ನಿಮಿಷಗಳಲ್ಲಿ ಇಲ್ಲಿಗೆ ಬಂದು ಅವರು ನನ್ನನ್ನು ಕಾಣಲಿ. ಶೀಘ್ರದಲ್ಲಿಯೇ ಅವರೊಡನೆ ಎಲ್ಲ ಮಾತುಗಳನ್ನು ಮುಗಿಸಿಕೊಳ್ಳಬೇಕಾಗಿದೆ ನಾನು."

ಬಾಗಿಲಲ್ಲಿ ನಿಂತ ಆ ಮನುಷ್ಯ, ಕೋಟಿನ ಜೇಬುಗಳಲ್ಲಿ ಕೈಯಿಟ್ಟುಕೊಂಡು ನೀಲೀ ಕಣ್ಣುಗಳನ್ನು ಹಿಗ್ಗಿಸಿ ಬಾರಬಾರಾಳ ಮೋರೆಯನ್ನು ದಿಟ್ಟಿಸುತ್ತ ಅವಳ ಮನೋಭಾವವನ್ನು ಅರಿತುಕೊಳ್ಳಲು ಯತ್ನಿಸುತ್ತಿದ್ದ. ಅವನ ಬಾಯಲ್ಲಿ ಹೊತ್ತಿಸಿದ ಸಿಗಾರೇಟಿತ್ತು. ಅದನ್ನು ತೆಗೆಯದೆಯೇ ವಿಕೃತ ಸ್ವರದಲ್ಲಿ ಅವನು ಉತ್ತರವಿತ್ತ, "ನನಗೆನಿಸುತ್ತದೆ— ಮೆಲ್ಡ್ರಮ್ ಅಜ್ಜನಿಗೆ ಪುರಸತ್ತು ಸಿಕ್ಕಿದಾಗ, ಬರುವುದು ಅಗತ್ಯವೆನಿಸಿದರೆ, ಇಲ್ಲಿಗೆ ಬರುತ್ತಾರೆ. ಅವರು ಇಲ್ಲಿಗೆ ಬರುವುದು ಬಿಡುವುದು ನಿಮ್ಮ ಇಚ್ಛೆಯನ್ನು ಅವಲಂಬಿಸಿಲ್ಲ."

ಬಾರಬಾರಾ ಸರಕ್ಕನೆ ಮುಖವೆತ್ತಿ ದೃಢಸ್ವರದಿಂದ, "ನೀನು ನನ್ನೊಂದಿಗೆ ಏನೇ ಮಾತನಾಡುವಾಗ ಜೇಬಿನಲ್ಲಿಯ ಕೈ ಹೊರತೆಗೆದು ನೆಟ್ಟಗೆ ನಿಂದಿರ

ಬೇಕು, ಬಾಯೊಳಗಿನ ಸಿಗರೇಟನ್ನು ತೆಗೆದು ಮಾತಾಡಬೇಕು. ಇದು ಶಿಷ್ಟರು ಮಾತಾಡುವ ರೀತಿ." ಎಂದಳು.

ಈ ಮಾತನ್ನು ಒಂದುಸುರಿನಲ್ಲಿ ಹೇಳಿದ ಬಳಿಕ ಅವಳಿಗೆನಿಸಿತು—ಈ ಮನುಷ್ಯನಿಗೆ ಹೀಗೆ ಉಪದೇಶಿಸಿದ್ದು ಸರಿಯಾಗಲಿಲ್ಲವೆಂದು. ಇದರಿಂದ ಅವನು ಸಿಟ್ಟಿಗೆದ್ದು ತನ್ನನ್ನು ಅಪಮಾನಪಡಿಸಲೂ ಬಹುದು. ಆದರೆ ಅವನು ಅವಳ ಮಾತುಗಳನ್ನು ಕೇಳಿ, ತನ್ನ ಕಿವಿಯನ್ನೇ ತಾನು ನಂಬದ ಹಾಗೆ ಸ್ತಂಭಿತನಾದ. ಸೆರೆಯಾಳಿನಲ್ಲೂ ಇಂಥ ತೇಜ, ಇಂಥ ಸಾಹಸ! ಆ ಬಡಕಾಟಿ ಮನುಷ್ಯ ಕ್ರೋಧದಿಂದ ಬಾರಬಾರಾನ ಮೋರೆ ನೋಡುತ್ತ, ಅವಳನ್ನು ಹೊಡೆಯುವ ಆವಿರ್ಭಾವದಿಂದ ಕೈಯೆತ್ತಿಕೊಂಡು ಅವಳ ಕಡೆ ಮುಂದುವರಿದ. ಆದರೆ ಅದೇಕೋ ಕೋಪವನ್ನು ತಾಳಿಕೊಂಡು ನಕ್ಕು ಬಿಟ್ಟ. ಆ ನಗೆ ಒಣ ನಗೆ. "ಏಕೆ ಉದ್ದುದ್ದ ಬಾಯಿ ಬಿಡುವೆ? ನಿನ್ನನ್ನು ನೊಣ-ನೊರಜುಗಳನ್ನು ಹೊಡೆಯುವಂತೆ ಹೊಡೆದು ಕೊಲ್ಲಬಲ್ಲೆ ಗೊತ್ತಿಲ್ಲವೆ? ಆದರೆ ಈಗಲೇ ಅದರ ಅಗತ್ಯವಿಲ್ಲ. ಶೀಘ್ರದಲ್ಲಿಯೇ ನೀನು ದುರಸ್ತಾಗುವೆ. ಇಂಥ ದರ್ಪದಿಂದ ನಿನಗೆ ಯಾವ ಲಾಭವೂ ಆಗದು—ಹೇಳಿರುತ್ತೇನೆ." ಎಂದು ಅವಜ್ಞೆಯಿಂದ ನುಡಿದು ಹಿಂದಕ್ಕೆ ಹೋಗಿ ಬಾಗಿಲ ಹತ್ತಿರ ನಿಂತ.

ಅವನ ಕಟೂಕ್ತಿಗಳಿಂದ ಬಾರಬಾರಾನ ಮನಸ್ಸಿಗೆ ಅತ್ಯಂತ ಆಘಾತವಾಯಿತು. ಅವಳು ಮೋರೆ ತಿರುಗಿಸಿ ವಿರಾಟ್ ದೇಹದ ದೈತ್ಯನ ಮುಖದ ಕಡೆಗೆ ನೋಡಿದಳು. ಅವನ ಕೆಲಸ ಮುಗಿದಿತ್ತು. ಅವನು ಮೇಜಿನಮೇಲಿನ ತಟ್ಟೆಯನ್ನೆತ್ತಿಕೊಂಡು ನಿಶ್ಶಬ್ದವಾಗಿ ಕೋಣೆಯಿಂದ ಹೊರಟ. ಇಬ್ಬರೂ ಹೊರಗೆ ಹೋಗಿ ಕೋಣೆಯ ಬಾಗಿಲಿಕ್ಕಿ ಬೀಗ ಹಾಕಿದರು.

ತನ್ನ ಶೋಚನೀಯ ಅವಸ್ಥೆಯನ್ನು ನೆನೆದು ಬಾರಬಾರಾನ ಮನಸ್ಸು ಅತ್ಯಂತ ವಿಹ್ವಲವಾಗಿತ್ತು. ಆದರೂ ಅವಳು ಈಗ ನಿರುತ್ಸಾಹವಾಗಲಿ ಭಯ ವಿಹ್ವಲತೆಯಾಗಲಿ ಪ್ರಯೋಜನವಿಲ್ಲವೆಂದುಕೊಂಡು ತಂದೆಯ ಆಗಮನವನ್ನು ಪ್ರತೀಕ್ಷಿಸತೊಡಗಿದಳು. ಅವನೊಡನೆ ಭಯಸಂಕೋಚಗಳಿಲ್ಲದೆ ವಾದಾನುವಾದ ಮಾಡುವುದೇ, ಅವನ ಕಠೋರ ವ್ಯವಹಾರದಿಂದ ಕುಂಠಿತಳಾಗದೆ ಸ್ಪಷ್ಟವಾಗಿ ಮಾತನಾಡುವುದೇ ಒಳ್ಳೆಯದೆಂದು ಅವಳು ನಿರ್ಧರಿಸಿಕೊಂಡಳು.

ಆದರೆ ಆ ಪ್ರಸಂಗವೇ ಬರಲಿಲ್ಲ; ಮೆಲ್ಡ್ರಮ್ ಅವಳನ್ನು ಕಾಣಲು ಬರಲೇ ಇಲ್ಲ. ಬಾರಬಾರಾ ಇಡೀ ರಾತ್ರಿ ನಿದ್ದೆಯಿಲ್ಲದೆ ಕಳೆದಳು. ಹೊಸ ತೇನೂ ಸಂಭವಿಸಲಿಲ್ಲ. ಯಾವ ಸಂದೇಹಜನಕ ಶಬ್ದವೂ ಕೇಳಲಿಲ್ಲ. ರಾತ್ರಿಯ ಕೊನೆಯಲ್ಲಿ ಮಾತ್ರ ದೊಡ್ಡದೊಂದು ಲಾರಿ ಹೋದ ಶಬ್ದ ಆ ಕಟ್ಟಡದ ಹಿಂದು ಗಡೆಯಿಂದ ಕೇಳಿಸಿತು. ಆ ಶಬ್ದ ಕ್ರಮಶಃ ಕಡಿಮೆಯಾಗಿ ನೀರವವಾಯಿತು. ರುದ್ಧ ದ್ವಾರದ ಕೋಣೆಯೊಳಗಿನ ನೈಶನಿಃಶಬ್ದತೆಯು ಅವಳಿಗೆ ದುಃಸಹವಾಗ ತೊಡಗಿತು.

ತನ್ನನ್ನು ಈ ಮನೆ ಬಾಗಿಲಿಗೆ ತಂದಿಳಿಸಿದ ಯುವಕನ ನೆನಪಾಯಿತವ ಳಿಗೆ. ವಿಪತ್ಪ್ರಸಂಗದಲ್ಲಿ ದೀಪ ಸಂಕೇತ ಮಾಡಬೇಕೆಂದು ಅವನು ಹೇಳಿದ್ದ. ಹಾಗೆ ಮಾಡಬೇಕೋ ಮಾಡಬಾರದೋ ಎಂದು ಬಾರಬಾರಾ ಯೋಚಿಸತೊಡ ಗಿದಳು. ಅವನ ಹೇಳಿಕೆಯಂತೆ ಮಾಡಿದರೆ ತನ್ನ ಬಿಡುಗಡೆಯೂ ಆಗಬಹು ದೆಂದು ಅವಳಿಗೆನಿಸಿತು. ಆದರೆ ತಾನು ಯಾವ ಉದ್ದೇಶದಿಂದ ತಂದೆಯ ಭೆಟ್ಟಿಗೆ ಬಂದಳೋ ಅದು ಪೂರಯಿಸುವ ಮೊದಲೇ ಬಿಡುಗಡೆಹೊಂದಿ ಹೋಗು ವುದಕ್ಕೆ ಅವಳ ಮನಸ್ಸು ಒಪ್ಪಲಿಲ್ಲ. ಈ ಮನೆಯಲ್ಲಿ ಬಹು ನಿಬಿಡ ರಹಸ್ಯವು ವಿಜಡಿತವಾಗಿದೆಯೆಂದು ಅವಳ ದೃಢಕಲ್ಪನೆಯಾಗಿತ್ತು. ಈ ರಹಸ್ಯವನ್ನು ಭೇದಿಸದೆ, ತನ್ನ ತಂದೆಯ ಅದ್ಭುತ ವ್ಯವಹಾರದ ಪ್ರಕೃತ ಕಾರಣವನ್ನು ಅರಿ ತುಕೊಳ್ಳದೆ ಫಸ್‌ವ್ಯೂ ಮಂದಿರವನ್ನುತ್ಯಜಿಸಲು ಅವಳ ಮನಸ್ಸು ಹಾತೊರೆಯ ಲಿಲ್ಲ. ಭವಿಷ್ಯತ್ ಸಂಕಟಗಳು ಈ ಉದ್ದೇಶದೆದುರು ಅವಳಿಗೆ ತುಚ್ಛವಾಗಿ ತೋರಿದವು.

ವೈಚಿತ್ರ್ಯಹೀನ ರಾತ್ರಿ ಅರ್ಧ ನಿದ್ರೆ ಅರ್ಧ ಜಾಗರಣದಲ್ಲಿ ಕಳೆಯಿತು. ಮರುದಿನವೂ ಹಾಗೆಯೇ ಹೋಯಿತು. ಮೂರನೆಯ ದಿನವೂ ಆ ಕೋಣೆ ಯಲ್ಲಿಯೇ ಬಂಧನದಲ್ಲಿ ಅವಳಿರಬೇಕಾಯಿತು. ಅವಳ ತಂದೆ ಬರಲಿಲ್ಲ. ಆ ಇಬ್ಬರು ಮನುಷ್ಯರು ಮಾತ್ರ—ಅವರಲ್ಲಿ ಸ್ಥೂಲ ಕಾಯನ ಹೆಸರು ಸುಲ್ಜ್, ಕ್ಷೀಣ ಕಾಯನ ಹೆಸರು ಕಾನ ಎಂದು ಇಷ್ಟರೊಳಗೆ ಅವಳು ಅರಿತಿದ್ದಳು— ಅವಳಿಗೆ ಅನ್ನ ನೀರು ತಂದುಕೊಡುತ್ತಿದ್ದರು. ಅವರು ದಿನಾಲು ನಿಯಮಿತ ಸಮಯಕ್ಕೆ ಬಂದು ನಿಯಮಿತ ಕಾರ್ಯಮಾಡಿ ಹೋಗುತ್ತಿದ್ದರು.

“ನಮ್ಮಪ್ಪ ನನ್ನನ್ನಿಲ್ಲಿ ಇನ್ನೆಷ್ಟು ದಿನ ಬಂಧಿಸಿಡಬೇಕೆಂದು ಮಾಡಿದ್ದಾನೆ,

ನಿನಗೇನಾದರೂ ಗೊತ್ತಿದೆಯೆ?" ಒಮ್ಮೆ ಬಾರಬಾರಾ ಕ್ಷೀಣಾಂಗ ಕಾನಾನನ್ನು ಕೇಳಿದಳು.

"ನಿಮ್ಮಪ್ಪನ? ನಿನ್ನ ಬಂಧನದ ಬಗ್ಗೆ ಅವನೇನೂ ಹೊಣೆಯಿಲ್ಲ. ಈ ಕಾರ್ಯದಲ್ಲಿ ನಿಮ್ಮಪ್ಪನ ಅಂಗವಿಲ್ಲ." ಅವನು ಹೇಳಿದ.

ಈ ಉತ್ತರವನ್ನು ಕೇಳಿ ಬಾರಬಾರಾ ಬೆಚ್ಚಿದಳು. ಈ ಮಾತನ್ನು ಪಕ್ಕನೆ ಅವಳು ನಂಬದಾದಳು. "ನಿನ್ನ ಮಾತಿನ ಅರ್ಥ ನನಗೆ ಸರಿಯಾಗಿ ಆಗಲಿಲ್ಲ. ಅಂದರೇನು, ನಾನಿಲ್ಲಿ ಸೆರೆಯಾಗಿದ್ದೇನೋ ಇಲ್ಲವೋ ಎಂಬ ಕಡೆ ಅವರ ಗಮನವೇ ಇಲ್ಲವೋ?" ಅವಳು ಅಚ್ಚರಿಯಿಂದ ಕೇಳಿದಳು.

—"ಗಮನವಿಲ್ಲವೆ? ಇದೆಂಥ ಮಾತು? ಗಮನವಿದ್ದರಾದರೂ ಆಗುವುದೇನು? ಶಕ್ತಿಯಿರಬೇಕಲ್ಲ, ಶಕ್ತಿ! ಆತ್ಮರಕ್ಷಣೆ ಮಾಡಿಕೊಳ್ಳುವ ಶಕ್ತಿಯೂ ಇಲ್ಲದವನು ನಿನ್ನನ್ನು ಹೇಗೆ ಉಳಿಸಬಲ್ಲ?"

ಮತ್ತೊಂದು ಮಾತನಾಡದೆ ಕಾನಾ ತನ್ನ ಸಂಗಾತಿಯೊಡನೆ ಬಾಗಿಲಿಕ್ಕಿಕೊಂಡು ಹೊರಟು ಹೋದ. ಬಾರಬಾರಾ ತಿರುಗಾಡುವ ಉಡುಪು ಧರಿಸಿ ಮಂಚದ ಮೇಲೆ ಒರಗಿ ಯೋಚಿಸತೊಡಗಿದಳು. ಕಾನಾನ ಮಾತಿನ ಇಂಗಿತವೇನೆಂದು ಅವಳಿಗೆ ತಿಳಿಯದಾಯಿತು. ಅವಳು ಅನೇಕ ತರ್ಕ ವಿತರ್ಕಮಾಡಿದಳು. ತನ್ನ ತಂದೆಗೆ ತನ್ನನ್ನು ರಕ್ಷಿಸುವ ಶಕ್ತಿಯಿಲ್ಲ. ಅವನಿಲ್ಲಿ ವಿಪನ್ನ, ತಾನೇ ಅವನಿಗೆ ಸಹಾಯಕಳಾಗುವುದು ಆಗತ್ಯ ಎಂಬ ಸಿದ್ಧಾಂತಕ್ಕೆ ಅವಳು ಬಂದಳು. ಅವನಿಗೆ ಸಹಾಯ ಮಾಡಬೇಕಾದರೆ ಹೊರಗಿನಿಂದಲೇ ಮಾಡಬೇಕು. ಅದಕ್ಕಾಗಿ ಮೊದಲು ತನ್ನ ಬಂಧವಿಮೋಚನೆಯಾಗಬೇಕು ಎಂದವಳು ಯೋಚಿಸಿದಳು. ಅವಳೇ ಬಂಧಿತಳು, ಮತ್ತೊಬ್ಬ ಬಂದಿಗೆ ಅವಳು ಸಹಾಯ ಮಾಡುವಳೆಂತು? ತನ್ನ ವಿಪತ್ತು ಕ್ಷಣಕ್ಷಣಕ್ಕೆ ಘನೀಭೂತವಾಗುತ್ತಿದೆ ಎಂಬುದನ್ನು ಅವಳು ಸ್ವಾಭಾವಿಕ ಬುದ್ಧಿ ಪ್ರಭಾವದಿಂದಲೇ ಅರಿತುಕೊಂಡಳು. ಲಕ್ಲಿಜ್ ಯಾವುದೋ ಕಾರಣದಿಂದ ತನ್ನನ್ನೂ ತನ್ನ ತಂದೆಯನ್ನೂ ವಿಪನ್ನಗೊಳಿಸಲು—ಅದೇಕೆ ವಿಧ್ವಸ್ತಗೊಳಿಸಲು—ಷಡ್ಯಂತ್ರ ನಡೆಸಿದ್ದಾನೆಂಬ ಅವಳ ಕಲ್ಪನೆ ಅನಿವಾರ್ಯವಾಯಿತು. ತನಗೆ ದಿನಾಲು ಭೆಟ್ಟಿಯಾಗುವ ಅವರಿಬ್ಬರೇ ತಮ್ಮ ಶತ್ರುಗಳೆಂಬಲ್ಲಿ ಅವಳಿಗೆ ಸಂದೇಹವುಳಿಯಲಿಲ್ಲ.

"ಖಟಾಖಟ್, ಖಟಾಖಟ್, ಖಟಾಖಟ್!"

ಬಾರಬಾರಾನ ಕಿವಿಗಳು ನೆಟ್ಟಗಾದವು. ಅವಳು ಚಟ್ಟನೆ ಎದ್ದು ಕುಳಿತಳು.

"ಖಟಾಖಟ್ ಖಟಾಖಟ್!"

ಹೊರಗಡೆ ಯಾರೋ ಬೇಳಿನಿಂದ ಬಾಗಿಲನ್ನು ಬಡಿಯುತ್ತಿದ್ದಾರೆ. ಯಾರವರು ? ಶತ್ರುವೋ ಮಿತ್ರನೋ ?

ಬಾರಬಾರಾ ಮಂಚದಿಂದ ಕೆಳಗಿಳಿದಳು. ಹೊರಗಡೆ ಭಯಾನಕ ಶಬ್ದವಾಯಿತು. ಅದನ್ನು ಕೇಳಿ ಅವಳ ಹೃದಯದ ರುಧಿರರಾಶಿ ವಿಚಲಿತವಾಯಿತು. ಎದೆ ವೇಗವಾಗಿ ಹಾರತೊಡಗಿತು. ಅದು ಯಾರದೋ ಆರ್ತನಾದ! ಆ ಆರ್ತನಾದದಲ್ಲಿ ಅಸಹ್ಯವೇದನೆಯ ಸ್ವರ ಕ್ರಮಶಃ ಹೆಚ್ಚುತ್ತ ಹೆಚ್ಚು ಹೃದಯಭೇದಕವಾಗುತ್ತಲಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಆ ಆರ್ತಜೀವಿಯ ಎದೆಯೊಡೆದು ಕಂಠವು ಚಿರಕಾಲ ನೀರವವಾಗುವುದೆಂದು ಬಾರಬಾರಾಗೆನಿಸಿತು. ಆದರೆ ಕೆಲ ನಿಮಿಷಗಳಲ್ಲಿ ಆ ಆರ್ತಧ್ವನಿ ದೂರ ಹೋಗಿ ಕೊನೆಗೆ ನೀರವವಾಯಿತು. ವೇದನಾತುರ ಹೃದಯದ ಅಸಹ್ಯ ವೇದನೆಯ ಕ್ಷೀಣ ಪ್ರತಿಧ್ವನಿ ಮೆಲ್ಲಮೆಲ್ಲನೆ ವಾಯುತರಂಗಗಳಲ್ಲಿ ಲೀನವಾಯಿತು.

ತುಸು ಹೊತ್ತಿನ ತರುವಾಯ ಮತ್ತೆ "ಖಟಾಖಟ್ ಖಟಾಖಟ್" ಶಬ್ದವಾಯಿತು. ಈ ಸಲದ ಶಬ್ದ ಮೊದಲಿಗಿಂತ ದ್ರುತವಾಗಿತ್ತು. ಅದರಲ್ಲಿ ಅಧೀರತೆ ವ್ಯಕ್ತವಾಗುತ್ತಿತ್ತು. ಬಾಗಿಲ ಕೆಳಬದಿಯಿಂದ ಮೆಲ್ಲಮೆಲ್ಲನೆ ಆ ಶಬ್ದ ಮೇಲೆದ್ದಿತು. ಕೊನೆಗೆ ಆ ಕಡೆಯ ವರಾಂಡದಲ್ಲಿ ಲಗುಬಗೆಯ ಹೆಜ್ಜೆಯ ಸಪ್ಪಳ ಕೇಳಬಂದಿತು.

ಬಾರಬಾರಾ ಮಂಚದ ಬಳಿ ನಿಂತು ಆತ್ಮಸಂವರಣೆಗಾಗಿ ಪ್ರಯತ್ನಿಸುತ್ತಲಿದ್ದಳು. ಕೋಣೆಯಲ್ಲಿ ಸೆರೆ ಸಿಕ್ಕಿಕೊಂಡಿದ್ದರೆ ತನಗಾಗಲಿ ತನ್ನ ತಂದೆಗಾಗಲಿ ಯಾವ ಪ್ರಯೋಜನವೂ ಆಗಲಾರದೆಂದು ತಿಳಿದು ಅವಳಿನ್ನು ನಿಶ್ಚೇಷ್ಟಳಾಗಿರಕೂಡದೆಂದುಕೊಂಡಳು. ಅವಳು ಸರಕ್ಕನೆ ತಿರುಗಿ ನಿಂತು, ಏರೋಸ್ಮಿಥ್ ಕೊಟ್ಟಿದ್ದ ವಿದ್ಯುದ್ದೀಪವನ್ನು ತೆಗೆದುಕೊಂಡು ದಾರಿಯ ಕಡೆಯ ಕಿಡಿಕಿಯತ್ತ ಧಾವಿಸಿದಳು.

ಕೃಷ್ಣ ಪಕ್ಷದ ರಾತ್ರಿ. ಆದರೆ ಚಂದ್ರೋದಯವಾಗಿರದಿದ್ದರೂ ಆಕಾಶ

ನಿರಭ್ರವಾಗಿ, ಚಿಕ್ಕೆಗಳ ಮೃದು ಬೆಳಕಿನಿಂದ ಕತ್ತಲೆಯ ಗಾಢತೆ ಕಡಿಮೆ ಯಾಗಿತ್ತು. ಕಬ್ಬಿಣ ಸಳಿಗಳ ಮಧ್ಯದಿಂದ ಹೊರಗೆ ದೃಷ್ಟಿ ಬೀಳುತ್ತಲೂ ಅಲ್ಲಿ ಕಣ್ಣಿಗೆ ಬಿದ್ದ ನೋಟ ಅವಳನ್ನು ಸ್ತಂಭಿತಗೊಳಿಸಿತು; ಭಯವಿಹ್ವಲ ಗೊಳಿಸಿತು.

ಆ ಕಟ್ಟಡದ ಮುಂಬಾಗಿಲಿನ ಪಕ್ಕದಲ್ಲಿದ್ದ ಬೇಲಿಯ ವೃಕ್ಷಶ್ರೇಣಿಗೆ ಬೆನ್ನು ಕೊಟ್ಟು ಒಂದು ಮೂರ್ತಿ ಸ್ಥಿರವಾಗಿ ನಿಂತಿತ್ತು. ಆದರೆ ಆ ಮೂ-ರ್ತಿಯ ನಿಜರೂಪ ಮಾತ್ರ ಕಾಣಲಿಲ್ಲ. ಮೈತುಂಬ ಕರೀ ಬಟ್ಟೆಯ ಮುಸುಕು. ಮುಖದ ಮುಸುಕಿನ ಎರಡು ತೂತುಗಳಲ್ಲಿ ಕಣ್ಣುಗಳು ನಿಗಿನಿಗಿ ಕೆಂಡದಂತೆ ಮಿನುಗುತ್ತಿದ್ದವು.

"ಖಟಾಖಟ್, ಖಟಾಖಟ್, ಖಟಾಖಟ್ !"

ಬಾಗಿಲ ಮೇಲೆ ಮತ್ತೆ ಮೂರು ಬಾರಿ ಮೃದು ಶಬ್ದವಾಯಿತು. ಆ ಮೇಲೆ ಆ ಅಗ್ನಿನೇತ್ರನ ಬಲಬದಿಯಿಂದ ರಕ್ತವರ್ಣದ ಅಗ್ನಿಜ್ವಾಲೆ ಬೆಳಗಿತು. ಆಮೇಲೆ ಎರಡು ಮೂರು ಕೃಷ್ಣವರ್ಣದ ಮೂರ್ತಿಗಳು ಆ ಕಟ್ಟಡದ ಕಡೆಗೆ ಓಡಿ ಬರತೊಡಗಿದವು.

ಬಾರಬಾರಾ ಈ ಮನೆಗೆ ಬಂದ ಮೇಲೆ ಎಂದೂ ಕೇಳಿರದಂತಹ ಏನೋ ಒಂದು ಗಂಭೀರ ನಿನಾದದಿಂದ ಕಟ್ಟಡ ಪ್ರತಿಧ್ವನಿತವಾಯಿತು. ಕಟ್ಟಿಗೆಯ ಮೆಟ್ಟಿಲನ್ನೇರಿ ಯಾವನೋ ಸ್ಥೂಲದೇಹಿ ಮೇಲೆ ಬರುತ್ತಿರುವಂತೆ ಪದಶಬ್ದ ಕೇಳಿಸಿತು. ಅದರೊಂದಿಗೆಯೇ ಕೆಳಮನೆಯ ಕೋಣೆಯಿಂದ ಯಾರೋ ಯಾರನ್ನೋ ಕೂಗಲಾರಂಭಿಸಿದರು. ಆಮೇಲೆ ಹೊರಬಾಗಿಲ ಚಿಲಕ ತೆಗೆದ ಝಣಝಣ ಶಬ್ದ.

ಬಾರಬಾರಾ ಕೆಳಗೆ ಹಣಿಕಿ ನೋಡಿದಳು. ವರಾಂಡದಲ್ಲಿ ಒಂದು ಮನುಷ್ಯ ಮೂರ್ತಿ ಕಂಡಿತು. ಚಿಕ್ಕೆಗಳ ಬೆಳಕಿನಲ್ಲಿ ಚೆನ್ನಾಗಿ ಗುರುತಿಸಲಾಗ ದಿದ್ದರೂ ದೇಹದ ನಿಲವು ಮತ್ತು ನಡಿಗೆಗಳಿಂದ, ಮೊದಲು ಅಂಗಳಕ್ಕೆ ಧಾವಿಸಿ ಬಂದ ವ್ಯಕ್ತಿ ತನ್ನ ಮಲತಂದೆಯೆಂದು ಅವಳಿಗೆನಿಸಿತು. ಅವನ ಕೈಯಲ್ಲಿ ಒಂದು ಪಿಸ್ತೂಲು ಮಿನುಗುತ್ತಿತ್ತು. ಮರುಕ್ಷಣದಲ್ಲಿ ವಿರಾಟ್ ಕಾಯದ ಆ ದೈತ್ಯ ಸುಲ್ಜ್ ಅವನನ್ನು ಹಿಂಬಾಲಿಸಿದ. ಅವನ ಹಿಂದೆಯೇ ಕೃಶಕಾಯ ಕಾನನ ಮೂರ್ತಿಯೂ ಕಂಡಿತು. ಮುಂದೊಂದು ನಿಮಿಷದಲ್ಲಿ ದೀರ್ಘ–ಸ್ಥೂಲ

ಜೀಹದ ಮನುಷ್ಯರಿಬ್ಬರು ಅವರ ಹಿಂದೆ ಬಂದು ನಿಂತರು. ಅವರಿಬ್ಬರು ಬಾರ ಬಾರಾಗೆ ಅಪರಿಚಿತರು. ಹಿಂದೆಂದೂ ಅವರನ್ನು ಅವಳು ನೋಡಿರಲಿಲ್ಲ.

ಅವರೆಲ್ಲರೂ ಓಡಿಬಂದು ಕ್ಷಣ ಹೊತ್ತು ನಿಂತು, ಒಂದು ದಿಕ್ಕಿಗೆ--ಅವರ ನಿದ್ರೆಯನ್ನು ಭಂಗಿಸಿದ ಬಂದೂಕಿನ ಗಂಭೀರ ನಿಘೋಷವು ಯಾವ ಕಡೆಯಿಂದ ಬಂದಿತ್ತೋ ಆ ಕಡೆಗೆ—ಗುರಿಯಿಟ್ಟು ಗುಂಡಿನ ಮಳೆಗರೆದರು.

ಕರಿ ಮುಸುಕಿಟ್ಟು ಕಣ್ಣು ಬಿಟ್ಟುಕೊಂಡು ನಿಂತಿದ್ದ ಭೂತ ಮೂರ್ತಿಯ ಕಡೆ ಬಾರಬಾರಾ ನೋಡಿದಳು. ಈಗ ಆ ಮೂರ್ತಿ ಅಲ್ಲಿರಲಿಲ್ಲ.

ಏನೇ ಆಗಲಿ, ಆತತಾಯಿಗಳ ಬಂದೂಕುಗಳ ಶಬ್ದ ಕ್ರಮಶಃ ಕ್ಷೀಣವಾಯಿತು. ಕ್ಷಣಕ್ಷಣಕ್ಕೆ ಆ ಶಬ್ದ ದೂರವಾಗುತ್ತಲಿತ್ತು. ಅವರು ಕಟ್ಟಡದ ಮುಂಬಾಗಿಲನ್ನು ದಾಟಿ ದಾರಿಯತ್ತ ಮುಂಬರಿದರು. ಮನೆಯ ಬಳಿ ಯಾರೂ ಉಳಿಯಲಿಲ್ಲ. ಕೆಲ ನಿಮಿಷಗಳಲ್ಲಿಯೇ ಅವರು ಅದೃಶರಾದರು,—ಕತ್ತಲೆ ಅವರನ್ನು ನುಂಗಿಬಿಟ್ಟಿತೇನೋ. ನಾಲ್ಕೂ ಕಡೆ ನಿಃಸ್ತಬ್ಧತೆ ವಿರಾಜಮಾನವಾಯಿತು.

ಇನ್ನೊಂದು ನಿಮಿಷ ಬಾರಬಾರಾ ಅಲ್ಲಿಯೇ ನಿಂತುಕೊಂಡಿದ್ದಳು. ಸುಲ್ಜ್ ಅದೃಶ್ಯನಾದ ಕಡೆಗೆಯೇ ಎವೆ ಹಳಚದೆ ನೋಡುತ್ತಿದ್ದಳು. ಆಮೇಲೆ ಅವಳು ತನ್ನ ಕೈಯೊಳಗಿನ ವಿದ್ಯುದ್ದೀಪದ ಬಿರಡಿಯನ್ನೊತ್ತಿ ಹೊಯ್ದಾಡುತ್ತ ಹೊಯ್ದಾಡುತ್ತ ಹಾಸಿಗೆಯ ಬಳಿ ಮರಳಿ ಬಂದಳು. ಅದೇ ಹೊತ್ತಿಗೆ ಅವಳ ಕೈದೀವಿಗೆಯ ಬೆಳಕು ಕೋಣೆಯ ಬಾಗಿಲ ಮೇಲೆ ಬಿದ್ದಿತು. ಆ ಬೆಳಕಿನಲ್ಲಿ ಚೌಕಟ್ಟಿನ ಕೆಳಗೆ ಅವಳು ಕಂಡ ದೃಶ್ಯದಿಂದ ಅವಳ ಮೈಯಲ್ಲಿ ಹೊಸ ಜೀವ ಬಂದಿತು. ಕೆಲಹೊತ್ತಿನ ಹಿಂದೆ ಟಿಕ್ ಟಿಕ್ ಶಬ್ದವಾದುದರ ಕಾರಣವೂ ಅವಳಿಗೆ ಗೊತ್ತಾಯಿತು. ಚೌಕಟ್ಟಿನ ಕೆಳಗಡೆಯ ಸಣ್ಣ ಕಿಂಡಿಯೊಳಗಿಂದ ಯಾರೋ ಕೋಣೆಯಲ್ಲಿ ಬೀಗದ ಕೈ ಒಗೆದಿದ್ದರು.

ಈಗ ಕಟ್ಟಡವು ಸಂಪೂರ್ಣ ನಿರ್ಜನವಾಗಿದೆಯೆಂದು ಬಾರಬಾರಾಗೆ ಭರವಸೆಯುಂಟಾಯಿತು. ಅಲ್ಲಿ ವಾಸಿಸಿದ ಜನರೆಲ್ಲ ಯಾರೊ ಅದೃಶ್ಯ ಶತ್ರುಗಳನ್ನು ಅನುಸರಿಸಿ ಹೊರಟು ಹೋಗಿದ್ದರು. ಗಡಿಬಿಡಿಯಲ್ಲಿ ಬಾಗಿಲಿಕ್ಕಿಕೊಂಡು ಹೋಗಲು ಮರೆತಿದ್ದರು. ಕಟ್ಟಡದಿಂದ ಹೊರಬಿದ್ದು ಹೋಗಲು ಮುಕ್ತದ್ವಾರವಾಗಿತ್ತು. ಮುಂಬಾಗಿಲೂ ತೆರೆದುದೇ ಇತ್ತು.

ಬಾರಬಾರಾ ಬಾಗಿ ಕೀಲಿಕೈ ಕೈಗೆ ತಕ್ಕೊಂಡಳು. ಅದು ಕೋಣೆಯ ಬಾಗಿಲದ್ದೇ. ಅವಳು ಲಗುಬಗೆಯಿಂದ ಅದರಿಂದ ಬಾಗಿಲು ತೆರೆದಳು. ಕೋಣೆಯಿಂದ ವರಾಂಡಕ್ಕೆ ಧಾವಿಸಿ, ಮೆಟ್ಟಿಲ ಹತ್ತಿರ ಬಂದು ಮೋರೆ ತಿರುಗಿ ಸುತ್ತಲೂ ಅದೇ ಆ ವಿಕಟಮೂರ್ತಿಯನ್ನು ಕಂಡಳು—ಕ್ಷಣದ ಹಿಂದೆ ಬೇಲಿಯೊಳಗೆ ಕಾಣಿಸಿಕೊಂಡುದು ಅದೇ ಮೂರ್ತಿ. ಆಗ ಅವಳೆದೆಯಲ್ಲಿ ದಿಗಿಲು ಹೊಗಿಸಿದ ಆ ಮೂರ್ತಿ ಈಗ ಮೆಟ್ಟಿಲ ಬಳಿ ನಿಂತಿದೆ! ಬಾರಬಾರಾಗೆ ಆ ಕಡೆ ಮತ್ತೊಮ್ಮೆ ನೋಡುವುದಾಗಲಿಲ್ಲ. ಅವಳು ಚಿಟ್ಟನೇ ಚೀರಿ ತಲೆ ತಿರುಗಿ ಬೀಳುತ್ತಿದ್ದಳು, ಆದರೆ ಆ ಮೂರ್ತಿ ನೆಗೆದು ಬಂದು ಎರಡು ಕೈಗಳಿಂದಲೂ ಅವಳನ್ನು ಎತ್ತಿಹಿಡಿಯಿತು.

ಈಗ ಭೂತನ ಕೈಯಲ್ಲಿಯೇ ಸಿಕ್ಕುಬಿದ್ದೆನೆಂದು ಬಾರಬಾರಾ ಭಯಗೊಂಡಳು. ಆಕೆ ಇನ್ನು ಚೀರಿಕೊಳ್ಳತಕ್ಕವಳು. ಅದಕ್ಕವಕಾಶ ಕೊಡದೆ ಭೂತವೇಷದ ಮೂರ್ತಿ ಮಾತನಾಡಿತು. ಆದರ ಸ್ವರ ಕೋಮಲವಾಗಿತ್ತು. "ಛೀ, ಎಂಥ ಮೂರ್ಖತನವಾಯಿತು. ಕಪ್ಪುಬಟ್ಟೆ ತೆಗೆಯದೆ ಬಂದು ಬಿಟ್ಟೆ. ನೀವು ಅಂಜಿದ್ದು ಆಶ್ಚರ್ಯವಲ್ಲ. ನಾನು ಯಮದೂತನಂತೆ ಕಾಣುತ್ತಿರಬಹುದು."

ಬಾರಬಾರಾಗೆ ಧೈರ್ಯ ಹುಟ್ಟಲೆಂದು ಅವಳನ್ನು ಕೈಬಿಡದೆ ಕಿಟ್ ಏರೋಸ್ಮಿಥ್ ನಗುನಗುತ್ತ ಮಾತನಾಡಿದ. ಅವನ ಬಾಹುಪಾಶದಿಂದ ಬಿಡಿಸಿಕೊಳ್ಳದೆ ವಿಸ್ಮಯ-ವಿಹ್ವಲ ಸ್ವರದಿಂದ ಅವಳೆಂದಳು: "ನೀವು—ನೀವು ಇಲ್ಲಿ ಏನು ಮಾಡುತ್ತಿದ್ದಿರಿ?"

—"ಮತ್ತೇನು ಮಾಡುವುದು? ನಿಮ್ಮನ್ನು ಬಿಡುಗಡೆ ಮಾಡಿ ಹೊರಗೊಯ್ಯಲು ಪ್ರಯತ್ನಿಸುತ್ತಿದ್ದೇನೆ. ನಾವಿಲ್ಲಿ ಒಂದು ಕ್ಷಣವೂ ವಿಲಂಬ ಮಾಡಲಾಗದು. ನೀವು ನಿಮ್ಮ ಕೋಣೆಯಿಂದ ಹೇಗೆ ಹೊರಬಂದಿರಿ?"

—"ಯಾರೋ ಬಾಗಿಲಡಿಯ ಸಂದಿಯಿಂದ ಒಳಗೆ ಕೀಲಿ ಕೈ ಚೆಲ್ಲಿದರು. ಅದರಿಂದ ಬಾಗಿಲು ತೆರೆದೆ. ಒಳಗಿಂದ ಹೊರಗಿಂದ ಎರಡೂ ಕಡೆಗಳಿಂದ ತೆಗೆಯಲು ಬರುವಂತೆ ಕೀಲಿಯ ರಚನೆಯಿದೆ. ನನಗೆನಿಸಿತ್ತು ನೀವೇ—"

—"ಇಲ್ಲ, ನಾನದನ್ನು ಒಗೆಯಲಿಲ್ಲ. ಯಾರು ಚೆಲ್ಲಿದರೆಂಬುದನ್ನು ಚರ್ಚಿಸುವುದರಲ್ಲಿ ಅರ್ಥವಿಲ್ಲ. ನಡೆಯಿರಿ, ಬೇಗನೆ ಪಾರಾಗುವಾ."

ಏರೋಸ್ಮಿಥ್ ಬಾರಬಾರಾಗೆ ಮತ್ತೊಂದು ಮಾತನಾಡಲು ಆಸ್ಪದ ಕೊಡದೆ ಅವಳನ್ನು ಹೆಗಲ ಮೇಲೆ ಹಾಕಿಕೊಂಡು, ಮೆಟ್ಟಿಲುಗಳನ್ನಿಳಿಯಲಾರಂಭಿಸಿದ. ಶೀಘ್ರಗತಿಯಿಂದ ನಡೆದು ತಲೆವಾಗಿಲ ಬಳಿ ಅವಳನ್ನು ಕೆಳಗಿಳಿಸಿದ. ಬಳಿಕ ತೀಕ್ಷ್ಣ ದೃಷ್ಟಿಯಿಂದ ಕತ್ತಲೆಯಲ್ಲಿ ಸುತ್ತಲೂ ನೋಡಿದ. ಯಾರೊಬ್ಬರ ಸುಳಿವೂ ಇರಲಿಲ್ಲ.

"ತೀವ್ರ ನಡೆಯಿರಿ." ಬಾರಬಾರಾನ ಕೈಹಿಡಿದು ಏರೋಸ್ಮಿಥ್ ನುಡಿದ.

ಇಬ್ಬರೂ ಬಯಲಂಗಳಕ್ಕೆ ಬಂದರು. ಅಂಗಳದ ಒಂದು ಬದಿಯಲ್ಲಿ ಒಂದು ಮೋಟರ್ ಕಾರಿತ್ತು. "ನಿಮಗೆ ಕಾರು ನಡೆಸಲಿಕ್ಕೆ ಬರುತ್ತದೆಯೆ ?" ಎಂದು ಏರೋಸ್ಮಿಥ್ ಕೇಳಿದ.

"ನನಗೊಬ್ಬಳಿಗೇ ಏಕೆ, ಪ್ರತಿಯೊಬ್ಬ ಮಾರ್ಕಿಣ ತರುಣಿಗೂ ಬರುತ್ತದೆ. "

"ಹಾಗಾದರೆ ಬೇಗ ಗಾಡಿ ಹತ್ತಿರಿ. ಸೆಲ್ಫ್ ಸ್ಟಾರ್ಟರ್ ಅದೆ. ಗಾಡಿ ತೀವ್ರವೇ ನಡೆಯುತ್ತದೆ. ಆದರೆ ಅದಕ್ಕೂ ಮೊದಲು ಒಂದೆರಡು ಮಾತು. ನಾನು ಹೇಳಿದ್ದಕ್ಕೆ ಯಾವುದಕ್ಕೂ ಪ್ರತಿವಾದಿಸಬೇಡಿರಿ. ಇದು ತರ್ಕವಿತರ್ಕಕ್ಕೆ ಸಮಯವಲ್ಲ. ನಾನು ನಿಮ್ಮೊಂದಿಗೆ ಬರುವುದು ಸಾಧ್ಯವಿಲ್ಲ. ಎರಡು ಮೂರು ನಿಮಿಷ ನಿಮ್ಮ ಜೊತೆ ಬಿಡಬೇಕಾಗುತ್ತದೆ. ಅಷ್ಟರಲ್ಲೇ ನಾನು ಬೇರೊಂದು ಕೆಲಸ ಮಾಡಿಕೊಳ್ಳಬೇಕಾಗಿದೆ. ಒಂದು ವೇಳೆ ಅಷ್ಟರೊಳಗೇ ಆ ತುಡುಗರು ಬಂದರೆ, ಅವರ ಧ್ವನಿಗಿನಿ ಕೇಳಿದರೆ, ನನಗಾಗಿ ನೀವು ಕಾಯದೆ ಪೂರ್ಣ ವೇಗದಿಂದ ಗಾಡಿ ಬಿಟ್ಟುಕೊಂಡು ಹೋಗಿರಿ. ತಿಳಿಯಿತೇ ?" ಎಂದು ಏರೋಸ್ಮಿಥ್ ಕತ್ತಲಲ್ಲೇ ಅವಳ ಮೋರೆ ನೋಡಿದ.

"ನಿಮ್ಮ ಮಾತೇನೋ ತಿಳಿಯಿತು; ಆದರೆ ನಿಮ್ಮ ಹಂಚಿಕೆ ಮಾತ್ರ ತಿಳಿಯಲಿಲ್ಲ." ವಿಚಲಿತ ಸ್ವರದಲ್ಲಿ ಬಾರಬಾರಾ ನುಡಿದಳು.

"ಈ ಮನೆಯ ಕೋಣೆಗಳಲ್ಲಿ ನಾನೊಮ್ಮೆ ಅಡ್ಡಾಡಿ ಬರುತ್ತೇನೆ. ಈ ಕೆಲಸಕ್ಕೆ ಹೆಚ್ಚು ಸಮಯವೇನೂ ಬೇಕಾಗಿಲ್ಲ."

ಇದನ್ನು ಕೇಳಿ ಅವಳ ಆಶ್ಚರ್ಯಕ್ಕೆ ಎಲ್ಲೆಯೇ ಉಳಿಯಲಿಲ್ಲ. ಅವಳೆಂದಳು: "ಈ ಮನೆಯೊಡನೆ ನಿಮ್ಮ ಸಂಬಂಧವೇನು ? ನನ್ನ ಉದ್ಧಾರಕ್ಕಾಗಿ ಎಂದೇ ನೀವು ಬಂದವರು."

—"ಆದರೆ ಈ ಭಾರವೂ ನನ್ನ ಮೇಲೆ ಬಿದ್ದಿದೆ. ಅದೆಲ್ಲ ಈಗಿರಲಿ, ನಾನು ಹೇಳಿದಂತೆ ನೀವು ಮಾಡುವಿರಲ್ಲವೆ ?"

ಕಾರಿನಲ್ಲಿ ಕುಳಿತುಕೊಳ್ಳುತ್ತ ಬಾರಬಾರಾ "ಹಾಂ, ನಿಶ್ಚಯವಾಗಿ ಮಾಡುವೆ. ಈ ನಿಮ್ಮ ಉಪಕಾರವನ್ನು ಜೀವನದಲ್ಲಿಯೇ ಮರೆಯಲಾರೆ." ಎಂದಳು.



ಕಿಟ್ ಏರೋಸ್ಮಿಥ್ ಸುತ್ತುಕಡೆಯೂ ದಿಟ್ಟಿಸಿ ನೋಡಿ, ಗೃಹವಾಸಿಗಳಾರನ್ನೂ ಕಾಣಲಿಲ್ಲ. ಅವರನ್ನು ವಂಚಿಸುವುದಕ್ಕಾಗಿ ಅವನು ಹೂಡಿದ ತಂತ್ರ ಪೂರ್ಣವಾಗಿ ಸಫಲವಾಗಿತ್ತು. ಅವನ ಇಂಗಿತದಂತೆ ಆ ಕಟ್ಟಡವನ್ನು ಆಕ್ರಮಿಸಲು ಉದ್ಯತರಾಗಿದ್ದ ಜನರನ್ನು ಅಲ್ಲಿಯ ನಿವಾಸಿಗಳು ಬಂದೂಕುಧಾರಿಗಳಾಗಿ ಬೆನ್ನಟ್ಟಿ ಹೋಗಿದ್ದರು. ಗಡಿಬಿಡಿಯಲ್ಲಿ ಅವರಿಗೆ ಬಾಗಿಲಿಕ್ಕಲಿಕ್ಕೂ ಅವಕಾಶ ಸಿಕ್ಕಲಿಲ್ಲ. ಏರೋಸ್ಮಿಥ್ ಬಾರಬಾರಾಗೆ ಹೇಳಿ ಪುನಃ ಕಟ್ಟಡವನ್ನು ಪ್ರವೇಶಿಸಿದ.

ಮೊಟ್ಟಮೊದಲೇ ಅವನು ಹಾಲಿಗೆ ಹೋದ. ಅದರ ಪಕ್ಕದಲ್ಲಿ ಒಂದು ಕೋಣೆಯ ಬಾಗಿಲು ಕಂಡಿತು. ಕದ ಕಟ್ಟಿಗೆಯದಾದರೂ ಭಾರೀ ಗಟ್ಟಿ. ದೊಡ್ಡದೊಂದು ಕೀಲಿ ಜೋತಾಡುತ್ತಿತ್ತು. ಆದರೆ ಅಲ್ಲಿ ರಾತ್ರಿ ವಾಸಿಸುತ್ತಿದ್ದ ಮನುಷ್ಯ ಹೊರಗೆ ಬಂದೂಕಿನ ಸದ್ದಾದುದನ್ನು ಕೇಳಿ ಅವಸರದಿಂದ ಕೀಲಿ ಹಾಕದೆ ಅಜ್ಞಾತ ಶತ್ರುಗಳ ಮೇಲೆ ಸಾಗಿ ಹೋಗಿದ್ದ. ಏರೋಸ್ಮಿಥ್ ಬಾಗಿಲು ತೆರೆದುಕೊಂಡು ಒಳಹೊಕ್ಕ. ಹಳ್ಳಿ ಭಾಗದಲ್ಲಿ ಈ ಬಗೆಯ ಕೋಣೆ ಇರುವುದು ಸೋಜಿಗವೆಂದೇ ಅವನಿಗೆ ತೋರಿತು. ಕೋಣೆ ಅಗಲ ಕಿರಿದಾಗಿ ಉದ್ದ ಹೆಚ್ಚಾಗಿತ್ತು. ಒಂದು ಕಡೆಯಲ್ಲಿ ಲೆಬೋರೋಟರಿ, ಇನ್ನೊಂದು ಕಡೆ ಕಮ್ಮಾರ ಕುಲಿಮೆ ! ಮಧ್ಯದಲ್ಲಿ ಒಂದು ವಿದ್ಯುತ್ತಿನ ಹಾಪರ್, ಸಣ್ಣದಾದರೂ ಯಥೇಷ್ಟ ಶಕ್ತಿ ಸಂಪನ್ನವಾದುದು. ಬೆಳಕಿಂಡಿಯ ಬುಡದಲ್ಲಿ ಉದ್ದವಾದೊಂದು

ಬೆಂಚು. ಅದರ ಮೇಲೆ ರಾಸಾಯನಿಕ ಪರೀಕ್ಷೆಗೆ ಉಪಯುಕ್ತವಾದ ವಿವಿಧ ಉಪಕರಣಗಳು. ಅಲ್ಲದೆ ಕಪಾಟುಗಳಲ್ಲಿ ಸ್ಪಿರಿಟ್ಟು, ಪಾರಜ ಇತ್ಯಾದಿ ದ್ರವ್ಯ–ಧಾತುಗಳು ನಾನಾ ಆಕಾರದ ಕಾಜಿನ ಪಾತ್ರೆಗಳಲ್ಲಿ.

ಮತ್ತೊಂದು ಕಡೆ ಪುಸ್ತಕಗಳ ಸೆಲ್ಫು; ಪುಸ್ತಕಗಳಲ್ಲಿ ಹೆಚ್ಚಾಗಿ ಹಳೆಯವು. ಅವುಗಳಲ್ಲಿ ಒಂದೆರಡು ಪುಸ್ತಕಗಳನ್ನು ತೆಗೆದು ಏರೋಸ್ಮಿಥ್ ಅವುಗಳ ಹೆಸರು ಓದಿ ಬೆರಗು ಬೆಪ್ಪಾದ. ಕೆಲವು ಪುಸ್ತಕಗಳ ಹೆಸರುಗಳನ್ನು ಅವನು ಬರೆದುಕೊಂಡ. ಒಂದು ಲೆಂಲೆಡ್ ದೆ ಫ್ರೆಸ್ನೇ ಬರೆದ 'ದಿ ಹಿಸ್ಟ್ರಿ ಆಫ್ ಹಾರ್ಮೆಟಿಕ್ ಫಿಲಾಸಫಿ', ಇನ್ನೊಂದು ರೋಜರ್ ಬೇಕನ್ನಿನ 'ದಿ ಮಿರರ್ ಆಫ್ ಆಲ್ಕೆಮಿ', ಮತ್ತೊಂದು ಜಿನ್ ಡಿ ಮುನೀ ಪ್ರಣೀತ 'ದಿ ರಿಪ್ಲಾಯ್ ಆಫ್ ದಿ ಆಲ್ಕೆಮಿಸ್ಟ್ರಿ ಟು ನೇಚರ್' ಮಗದೊಂದು ಬರ್ನಾರ್ಡ್ ಡಿ ಟ್ರೇವಿಸ್ ಲಿಖಿತ 'ದಿ ಬುಕ್ ಆಫ್ ಕೆಮಿಸ್ಟ್ರಿ'; ಇವುಗಳ ಹೊರತು ಕಫ್‌ಸ್ಕಿ ಬರೆದ 'ದಿ ಪಿಂಚರ್ ಆಫ್ ಮಿನಾರೆಲ್ಸ್', 'ದಿ ಬುಕ್ ಆಫ್ ಲೈಟ್' ಮೊದಲಾದ ಹಲವಾರು ಪುಸ್ತಕಗಳಿದ್ದವು.

ಆ ಕೋಣೆಯೊಳಗಿದ್ದ ವಸ್ತು ಪುಸ್ತಕಗಳನ್ನು ಪರೀಕ್ಷಿಸಿ, ತಿರುಗಿ ಇದ್ದಲ್ಲಿ ಇದ್ದಂತೆ ಇರಿಸಿ ಏರೋಸ್ಮಿಥ್ ಹಾಲಿಗೆ ಮರಳಿದ. ಅದರ ಪ್ರವೇಶ ದ್ವಾರದಲ್ಲಿ ನಿಂತು ಆವಾರ ದ್ವಾರದ ಕಡೆಗೆ ನೋಡಿದ. ಗೃಹವಾಸಿಗಳಾರೂ ತಿರುಗಿ ಬಂದದ್ದು ಕಾಣಲಿಲ್ಲ; ಅವರ ಹೆಜ್ಜೆಯ ಸಪ್ಪಳವೂ ಕೇಳಿಸಲಿಲ್ಲ. ಅವರು ಹಗೆಗಳನ್ನು ಬಹುಶಃ ಬಹಳ ದೂರ ಬೆನ್ನಟ್ಟಿ ಹೋಗಿರಬೇಕು. ಅವರು ಮರಳಲಿಕ್ಕೆ ಇನ್ನೂ ಸ್ವಲ್ಪ ತಡವಾಗಬಹುದೆಂದು ಬಗೆದು ಏರೋಸ್ಮಿಥ್ ಸ್ವಲ್ಪವೂ ಅವಸರ ಪಡದೆ ತನ್ನ ಗಾಡಿಯ ಹತ್ತಿರ ಬಂದ. ಬಾರಬಾರಾ ಅವನನ್ನು ಪ್ರತೀಕ್ಷಿಸುತ್ತ ಕುತಿಳಿದ್ದಳು. ಸಿಕ್ಕುಬೀಳುವ ಭಯವಿದ್ದಿಲ್ಲವಾಗಿ ಅವಳು ಗಾಡಿಯನ್ನು ಆವಾರದಿಂದ ಹೊರಗೆ ಒಯ್ದಿರಲಿಲ್ಲ. ಅವನು ಬಂದುದನ್ನು ಕಂಡು ಅವಳು ಚಾಲಕನ ಆಸನವನ್ನು ಬಿಟ್ಟು ಸರಿದಳು. ಏರೋಸ್ಮಿಥ್ ನಿಃಶಬ್ದವಾಗಿ ಗಾಡಿ ಹತ್ತಿ ತನ್ನ ಆಸನವನ್ನು ಅಲಂಕರಿಸಿದ. ಆದರೆ ಅವನ ಕಾಲು ಸೆಲ್ಫ ಸ್ಟಾರ್ಟರನ್ನು ಮುಟ್ಟುವ ಮೊದಲೇ ಬಾರಬಾರಾ ಅವನನ್ನು ತಡೆದು ಕೇಳಿದಳು— "ಮಿಸೆಸ್ ಲಾರ್‌ಸೆನ್ ಅಲ್ಲಿ ಯಾವುದಾದರೂ ಕೋಣೆಯಲ್ಲಿ ಕಂಡಳೆ ?"

—"ಇಲ್ಲ. ಕಾಣುವುದಿರಲಿ, ಸುಳಿವು ಸದ್ದೂ ಗೋಚರಿಸಲಿಲ್ಲ. ಮನೆ ಜನಹೀನ, ಸುಡುಗಾಡಿನಂತೆ ನಿಃಸ್ತಬ್ಧ."

—"ನೀವು ಯಾರೂ ಇಲ್ಲವೆಂದರೆ ನಾನು ಕೇಳಲೇ ? ಶ್ರೀಮತಿ ಲಾರ ಸೆನ್ ಯಾವುದೊಂದು ಕೋಣೆಯಲ್ಲಿ ಇದ್ದೇ ಇರಬೇಕು. ಮತ್ತೊಮ್ಮೆ ಹೋಗಿ ನೋಡಿರಿ—ಅವಳನ್ನು ಹುಡುಕಲೇ ಬೇಕು. ನಿಮಗೆ ಸಾಧ್ಯವಿಲ್ಲದಿದ್ದರೆ ನಾನೇ ಹೋಗಬೇಕಾಗುತ್ತದೆ. ಅದಳು ನನಗೆ ಸಹಾಯ ಮಾಡಿದ್ದು ಗುಟ್ಟಾಗಿ ಉಳಿಯಲಾರದು; ಅದರ ಫಲ ಏನಾಗುವುದೆಂಬುದೂ ಗೊತ್ತಿದ್ದ ಮಾತೇ. ಈ ನರಪಶುಗಳ ದವಡೆಯಲ್ಲಿ ಅವಳನ್ನು ಬಿಟ್ಟು ನಾನು ಓಡಿಹೋಗಲಾರೆ. ಅವರು ತಿರುಗಿ ಬಂದರೆಂದರೆ ಅವಳು ಚಿತ್ರಹಿಂಸೆಗೆ ಗುರಿಯಾಗುವಳು. ಅವಳನ್ನು ಕರೆ ದೊಯ್ಯಲೇ ಬೇಕು."

ಏರೋಸ್ಮಿಥ್ ಕ್ಷಣಕಾಲ ಯೋಚಿಸಿ ಉತ್ತರವಿತ್ತ: "ಒಳ್ಳೇದು, ಆಗಲಿ. ಆದರೆ ನಾನಿರುತ್ತಿರಲಿಕ್ಕೆ ನೀವು ಹೋಗುವುದೇಕೆ? ನೀವು ಮತ್ತೆ ಒಳಗೆ ಹೋದಿರೆಂದರೆ ಸಂಕಟಕ್ಕೀಡಾಗಬಹುದು; ನಾನೇ ಹೋಗುತ್ತೇನೆ. ಹೆಂಗು ಸನ್ನು ವಿಪತ್ತಿನೊಳಗೆ ನೂಕಿ ತಾನು ಸುಖವಾಗಿರುವುದು ಗಂಡಸಿನ ಅಕ್ಷಮ್ಯ ಹೇಡಿತನ."

ಅವನು ಲಗುಬಗೆಯಿಂದ ಕಾರನ್ನಿಳಿದು ಮನೆಯೊಳಗೆ ಪ್ರವೇಶಿಸಿದ. ಉಳಿದ ಕೋಣೆಗಳನ್ನು ಪರೀಕ್ಷಿಸಿದ. ಆ ಕಾರ್ಯದಲ್ಲಿ ಅವನ ಯತ್ನದಲ್ಲಾಗಲಿ ಆಗ್ರಹದಲ್ಲಾಗಲಿ ಅಭಾವ ಕಂಡುಬರಲಿಲ್ಲ. ಅಡಿಗೆಮನೆ, ಮಲಗುವ ಕೋಣೆ ಯಾವುದೊಂದನ್ನೂ ಬಿಡದೆ ಹುಡುಕಿದ. ಪ್ರತಿ ಕೋಣೆ ಶ್ವಾಪದ ಜಂತುಗಳ ಗುಹೆಯಂತಿತ್ತು. ಯಾವ ಮೂಲೆಯಿಂದ ಯಾವ ಹಿಂಸ್ರಪಶು ಯಾವಾಗ ಮೈಮೇಲೆ ನೆಗೆಯುವುದೋ ಎನಿಸುವಂತಿತ್ತು. ಪ್ರತಿಯೊಂದು ಗೋಡೆ, ಅದರ ಪ್ರತಿಯೊಂದು ಕಲ್ಲು ಅಭಿಶಾಪ-ಅಪಾಯಗಳಿಂದಲೇ ಆಗಿರುವಂತೆ ತೋರು ತ್ತಿತ್ತು. ಏರೋಸ್ಮಿಥ್ ಆ ನಿರಾನಂದಮಯ ಅಶಾಂತಿಪೂರ್ಣ ಕೋಣೆಗಳ ನ್ನೆಲ್ಲ ನೋಡಿಕೊಂಡು ಹೊರಬಿದ್ದ. ಆಗ ಅವನ ಮನಸಿಗೆ ಆರಾಮವೆನಿಸಿತು. ಅವನು ತೀವ್ರಗತಿಯಿಂದ ಬಂದು, ಯಾವ ಕೋಣೆಯೊಳಗೂ ಮಿಸೆಸ್ ಲಾರ್ ಸೆನ್ ಸಿಕ್ಕಲಿಲ್ಲ. ಇಲ್ಲಿಯಂತೂ ಅವಳಿಲ್ಲ, ಮತ್ತೆಲ್ಲಿರಬಹುದೆಂದು ಊಹಿಸು ವುದೂ ಅಸಾಧ್ಯವೆಂದು ಬಾರಬಾರಾಗೆ ತಿಳಿಸಿದ.

ಇವನು ಅಡಿಗೆಯವಳನ್ನು ತುಂಬಾ ಪ್ರಯತ್ನಿಸಿ ಹುಡುಕಿದ್ದಾನೆ, ಆದರೂ ಅವಳು ಸಿಕ್ಕಿಲ್ಲ ಎಂಬುದೂ ಬಾರಬಾರಾಗೆ ಮನವರಿಕೆಯಾಯಿತು. ಆದುದರಿಂದಲೇ ಅವಳೆಂದಳು: "ಸಂಕಟ ಒದಗುವುದೆಂದು ಬಗೆದು ಆಕೆ ಈಮೊದಲೇ ಬಹುಶಃ ಪಲಾಯನ ಮಾಡಿದ್ದಾಳೆ. ಒದಗಿ ಬಂದ ಸುಯೋಗವನ್ನು ಚೆನ್ನಾಗಿ ಉಪಯೋಗಿಸಿಕೊಂಡಿದ್ದಾಳೆ. ಇಂದು ರಾತ್ರಿಯೇ, ಸ್ವಲ್ಪ ಹೊತ್ತಿನ ಮೊದಲು ಅವಳು ಓಡಿ ಹೋಗಿದ್ದರೆ ದಾರಿಯಲ್ಲಿ ಸಿಕ್ಕರೂ ಸಿಕ್ಕಬಹುದು. ನನ್ನ ಕೋಣೆಯಲ್ಲಿ ಕೀಲಿಕೈ ಒಗೆದವಳು ಅವಳೇ ಇರಬೇಕೆಂದು ನನಗೆನಿಸುತ್ತದೆ. ಆ ಜನ ತನ್ನಲ್ಲಿಯೇ ಸಂದೇಹಪಟ್ಟು ಹಿಂಸಿಸಬಹುದೆಂದು ತಿಳಿದೇ–ನನಗೆ ಪಲಾಯನಕ್ಕೆ ಸಹಾಯ ಮಾಡಿದವಳೇ—ಓಟ ಕೊಟ್ಟಿದ್ದಾಳೆ."

—"ಅವಳಿಗೆ ನನ್ನ ಧನ್ಯವಾದ. ಇರಲಿ. ನಾವಿನ್ನು ಇಲ್ಲಿ ಹೆಚ್ಚುಹೊತ್ತು ನಿಲ್ಲುವುದು ಬೇಡ, ನೀವು ಹಿಂದಿನ ಆಸನದಲ್ಲಿ ಮೈತುಂಬ ಹೊದ್ದುಕೊಂಡು ಕುಳಿತುಕೊಳ್ಳಿರಿ. ನನ್ನ ಪಕ್ಕದಲ್ಲಿ ಕುಳಿತುಕೊಳ್ಳುವುದು ಒಳ್ಳೆಯದಲ್ಲ."

ಈ ಸೂಚನೆ ಬಾರಬಾರಾಗೂ ಸರಿಯೆಂದು ತೋರಿತು. ಅವಳೆದ್ದು ಹೋಗಿ ಹಿಂಬದಿಯಲ್ಲಿ ಕುಳಿತಳು.

ಅವರು ಅಗಸೆ ದಾಟಿ ದಾರಿಗೆ ಬಂದರೂ ಗೃಹವಾಸಿಗಳಾರನ್ನೂ ಕಾಣಲಿಲ್ಲ. ಸುಮಾರು ನೂರು ಯಾರ್ಡು ಮಾರ್ಗ ಕ್ರಮಣ ಮಾಡಿ ಅವರು ದಾರಿಯ ಮುರುವಿಗೆ ಬಂದರು. ಅಲ್ಲಿ ಅವರ ಕಾರು ಹೋಗುವಾಗ ಪಕ್ಕದಲ್ಲಿ ಯಾರೋ ಇಬ್ಬರು ಹೋಗುತ್ತಿರುವುದನ್ನು ಕಂಡರು. ಅವರಲ್ಲೊಬ್ಬ ಎತ್ತರ ಆಳು, ಧೃಷ್ಟಪುಷ್ಟ; ಅವನ ಮುಖಚರ್ಯೆ ದೈತ್ಯನಂತೆ ರೌದ್ರ. ಇನ್ನೊಬ್ಬ ಕುಳ್ಳ, ಬಡಕ, ಆದರೆ ಕ್ರೌರ್ಯದ ಜೀವಂತ ಮೂರ್ತಿಯೇ. ದಾರಿಯ ಪಕ್ಕದಿಂದ ಅವರು ತನ್ನನ್ನು ಕ್ರೂರ ದೃಷಿಯಿಂದ ನೋಡಿದುದನ್ನು ಏರೋಸ್ಮಿಥ್ ಲಕ್ಷಿಸದಿರಲಿಲ್ಲ. ಗಾಡಿ ಒಂದು ಕ್ಷಣದಲ್ಲಿಯೇ ಅವರನ್ನು ಹಿಂದೆ ಹಾಕಿ ದೂರ ಹೊರಟುಹೋಯಿತು. ಬಾರಬಾರಾ ಅವರನ್ನು ಗುರುತಿಸಿದಳು.

"ಇವರು ಒಬ್ಬ ಸುಲ್ಜ್, ಒಬ್ಬ ಕಾನ್." ಅವಳು ಹೇಳಿದಳು.

ಏರೋಸ್ಮಿಥ್ ಅವಳ ಮಾತಿಗೆ ಯಾವ ಅಭಿಮತವನ್ನೂ ವ್ಯಕ್ತಗೊಳಿಸಲಿಲ್ಲ. ಅವನು ರಭಸದಿಂದ ಗಾಡಿ ನಡೆಸತೊಡಗಿದ. ಮತ್ತೆ ನೂರು ಯಾರ್ಡು

ಮುಂಬರಿದ ಮೇಲೆ, ಅಲ್ಲೊಂದು ದೀಪದ ಕಂಬದ ಹತ್ತಿರ ಮತ್ತೊಂದು ಮೂರ್ತಿ ಏರೋಸ್ಮಿಥ್‌ನಿಗೆ ಗೋಚರಿಸಿತು. ಆ ಪಥಿಕನನ್ನು ನೋಡಿ ಅವನ ಮೋರೆ ಅಸ್ವಾಭಾವಿಕ ಗಂಭೀರವಾಯಿತು. ಆ ಪಥಿಕನೂ ಶಕಟ ಚಾಲಕ ನನ್ನು ಕುತೂಹಲಿಯಾಗಿ ನೋಡಿದ. ದಾರಿಯಲ್ಲಿ ಏರೋಸ್ಮಿಥ್‌ನನ್ನು ಕಂಡು ಅವನ ಮುಖ ಭಾವದಲ್ಲಿಯೂ ಪರಿವರ್ತನೆಯಾಯಿತು.

ಬಾರಬಾರಾ ಒಂದು ದೊಡ್ಡ ಸೂಟ್ ಕೇಸಿನ ಮರೆಯಲ್ಲಿ ಕುಳಿತಿದ್ದಳು. ಮೈತುಂಬ ರಗ್ಗನ್ನೂ ಹೊತ್ತಿದ್ದಳು. ದಾರಿಯಲ್ಲಿ ಹೋಗುತ್ತಿರುವಾಗ ಯಾವ ದಾರಿಹೋಕನಿಗೂ ಅವಳು ಸುಸ್ಪಷ್ಟವಾಗಿ ಕಾಣುವಂತಿರಲಿಲ್ಲ. ಅವಳು ಮಾತ್ರ ತಾನು ಪ್ರಚ್ಛನ್ನಳಾಗಿದ್ದು ಬರು-ಹೋಗುವವರೆಲ್ಲರನ್ನೂ ನೋಡುತ್ತಿದ್ದಳು. "ಇವನ ಹೆಸರು ನಕ್ಲಿಜ್" ಮೂರನೆಯ ವ್ಯಕ್ತಿಯನ್ನು ಕಂಡು ಅವಳೆಂದಳು.

ಏರೋಸ್ಮಿಥ್ ಕಾರಿನ ವೇಗವನ್ನು ಮತ್ತಷ್ಟು ಹೆಚ್ಚಿಸಿ ಗಂಭೀರ ಸ್ವರದಲ್ಲಿ ಮಾತನಾಡಿದ: "ಇವರು ಮನೆಗೆ ಹೋಗಿ, ತಮ್ಮ ಸೆರೆಯಿಂದ ನೀವು ತಪ್ಪಿಸಿ ಕೊಂಡು ಬಂದಿರುವುದನ್ನು ಅರಿತ ಮೇಲೆ, ತತ್‌ಕ್ಷಣವೇ ನಿಮ್ಮನ್ನು ಹಿಡಿಯುವ ದಕ್ಕಾಗಿ ಕಾರು ತಕ್ಕೊಂಡು ಹೊರಡುವರು. ಒಂದಲ್ಲ, ಅನೇಕ ಗಾಡಿಗಳಲ್ಲಿ ಬರುವರು. ಅದರ ಅಡ್ಡೆಯಲ್ಲಿ ಕಾರು ಎಷ್ಟಿವೆ ಬಲ್ಲಿರಾ?"

—"ಬೇರೆ ಬೇರೆ ಬಣ್ಣದ ಮೂರು ಕಾರುಗಳನ್ನು ನಾನು ನೋಡಿದ್ದೇನೆ. ಎಲ್ಲವೂ ಮಜಬೂತಾದ ಕಾರುಗಳು, ತೀವ್ರಗಾಮಿಗಳು. ನಾನು ಸೆರೆಯಲ್ಲಿ ದ್ದಾಗ, ಹೊತ್ತು ಹೋಗುವುದಕ್ಕೆ ಪುಸ್ತಕ-ಗಿಸ್ತಕ ಏನೂ ಇಲ್ಲದೆ ಕಿಡಿಕಿಯಲ್ಲಿ ನೋಡುತ್ತ ನಿಂತಿರುತ್ತಿದ್ದೆ. ನಾನು ನೋಡಿದ ಮೂರು ಕಾರುಗಳ ಹೊರತು ಇನ್ನೂ ಇವೆಯೋ ಇಲ್ಲವೋ ನನ್ನ ಕಣ್ಣಿಗಂತೂ ಬಿದ್ದಿಲ್ಲ."

ಏರೋಸ್ಮಿಥ್ ಒಂದೆರಡು ನಿಮಿಷ ಮೌನವಾಗಿದ್ದ. ಆ ಮೇಲೆ, "ನೀವೀಗ ಎಲ್ಲಿ ಹೋಗಬೇಕೆಂದು ಮಾಡಿದ್ದೀರಿ?" ಎಂದು ಪಕ್ಕನೆ ಪ್ರಶ್ನಿಸಿದ.

ಅವಳು ಮೆಲ್ಲನೆ ತಲೆಯೆತ್ತಿ ಅವನ ಮೋರೆ ನೋಡಿದಳು. ಏರೋಸ್ಮಿಥ್‌ನ ಮನೋಭಾವವನ್ನು ಅವನ ಮುಖದಲ್ಲಿ ಕಾಣಬಹುದೆಂದು ಆಕೆ ಆಶಿಸಿದ್ದಳು. ಅವನ ನೋಟದೊಡನೆ ಅವಳ ನೋಟದ ವಿನಿಮಯವಾಯಿತು. ಅವನ ಮನ ಸ್ಸಿನ ಭಾವ ತಿಳಿಯದೆ ಅವಳು ನಿಟ್ಟುಸಿರು ಕರೆದಳು. ಅವಳ ಕಣ್ಣುಗಳಲ್ಲಿ ವಿಪನ್ನ ಜೀವನದ ವೇದನೆ ವ್ಯಕ್ತವಾಯಿತು. ಅವಳು ಆಸರೆ ಇಲ್ಲದವಳು;

ಅವಳಿಗೆ ಮನಶ್ಚಕ್ಷುವಿನೆದುರು ಕತ್ತಲೆಯ ಹೊರತು ಏನೂ ಕಾಣಲಿಲ್ಲ. ಆದರೆ ಬಾರಬಾರಾ ಅವನಿಗೆ ಏನು ಹೇಳಬಲ್ಲಳು? ಕ್ಷಣ ಯೋಚಿಸಿ ಅವಳೆಂದಳು: "ಘಸವ್ಯೂದಿಂದ ಎಷ್ಟುದೂರ ಹೋದೇನೋ ಅಷ್ಟು ನನಗೆ ನಿರಾಪದ, ಕಲ್ಯಾಣ ಕರ. ಇದೇ ನನ್ನಿಷ್ಟ. ಇಲ್ಲಿಯ ವಿಷಾಕ್ತ ವಾತಾವರಣ ನನಗೆ ಅತಿಶಯ ಅಸಹ್ಯವಾಗಿದೆ. ಎಲ್ಲಿಯಾದರೂ ರೈಲ್‌ದಾರಿಯ ಪಕ್ಕದಲ್ಲಿ ನನ್ನನ್ನಿಳಿಸಿರಿ."

ಏರೋಸ್ಮಿಥ್ ದಾರಿ ಮುರುವಿನಲ್ಲಿ ಗಾಡಿಯನ್ನು ತಿರುಗಿಸಿ ಇನ್ನೊಂದು ಹಾದಿಯಲ್ಲಿ ಮುಂಬರಿದ.

"ಈಗ ನೀವೆಲ್ಲಿ ಹೋಗುವಿರಿ?" ಬಾರಬಾರಾ ಕೇಳಿದಳು.

"ಲಂಡನಿಗೆ."

ಏರೋಸ್ಮಿಥ್ ನ್ಯೂಟನ್ ಏಬರ್ ಎಂಬಲ್ಲಿ ಗಾಡಿಯನ್ನು ಪ್ಲೀಮೌಥ್-ಎಕ್ಸಿಟರ್ ರೋಡಿನಲ್ಲಿ ಬಿಟ್ಟ. ಆಮೇಲೆ ಪಕ್ಕನೆ ಹಿಂದಿರುಗಿ ಬಾರಬಾರಾಗೆ ಹೇಳಿದ: "ನೀವಿನ್ನು ಮೈಚಳಿ ಬಿಟ್ಟು ಡ್ರೈವರನ ಬದಿಯ ಆಸನದಲ್ಲಿ ಬಂದು ಕುಳಿತುಕೊಳ್ಳಬಹುದು, ಯಾವ ಭಯವೂ ಇಲ್ಲ. ನಿಮ್ಮ ಪಲಾಯನದ ಸುದ್ದಿ ಅವರಿಗೆ ತಿಳಿಯಲು ವಿಲಂಬವಾಗುವುದು. ಆಮೇಲೆ ಅವರು ಕಾರಿನಲ್ಲಿ ನಿಮ್ಮ ಶೋಧನೆಗೆ ಹೊರಡುವರು. ಆದರೆ ನಾವು ಬಹಳ ದೂರ ಬಂದುಬಿಟ್ಟಿದ್ದೇವೆ. ನಿರ್ಭಯವಾಗಿ ನನ್ನ ಹತ್ತಿರ ಕುಳಿತುಕೊಳ್ಳಿರಿ,—ಒಂದಿಷ್ಟು ಮಾತನಾಡುವಾ."

ಬಾರಬಾರಾ ಎದ್ದು ಹೋಗಿ ಏರೋಸ್ಮಿಥ್‌ನ ಮಗ್ಗುಲಲ್ಲಿ ಕುಳಿತಳು. ಅದೇ ಹೊತ್ತಿಗೆ ಇದಿರುಗಡೆಯಿಂದ ಒಂದು ಮೋಟಾರು ಬಂದಿತು. ಅದನ್ನು ಕಂಡೊಡನೆ ಅವಳ ಮುಖ ಒಣಗಿತು. ತತ್‌ಕ್ಷಣವೇ ಅವಳು ಮೋರೆಯನ್ನು ಎದೆಯಲ್ಲಿರಿಸಿ ರಗ್ಗಿನಿಂದ ಮೈಮುಚ್ಚಿಕೊಂಡು ನಿಶ್ಚಲಳಾಗಿ ಕುಳಿತಳು.

ಮರುಕ್ಷಣದಲ್ಲಿ ಆ ಮೋಟರು ಅವರ ಕಾರಿನ ಪಕ್ಕದಲ್ಲಿ ಬಂದುನಿಂತಿತು. ಆಗ ಏರೋಸ್ಮಿಥ್ ಒಂದು ಕೈಯಲ್ಲಿ ಕಾಫಿಯ ಗ್ಲಾಸು ಹಿಡಿದುಕೊಂಡು, ಇನ್ನೊಂದು ಕೈಯಿಂದ ಸ್ಯಾಂಡ್‌ವಿಚ್ಚಿನ ತುಂಡನ್ನು ಬಾಯಲ್ಲಿಟ್ಟುಕೊಂಡು ಮೆಲ್ಲುತ್ತಿದ್ದ. ತಿಂಡಿ ತೀರ್ಥ ತೀರಿಸುವುದಕ್ಕಾಗಿ ಅವನು ಗಾಡಿಯನ್ನು ತರುಬಿದ್ದ. ಪಕ್ಕದಲ್ಲಿ ಬಂದು ನಿಂತ ಗಾಡಿಯ ಚಾಲಕನು ಏರೋಸ್ಮಿಥ್‌ನ ಮುಖದ ಕಡೆ ನೋಡಿದ. ಏರೋಸ್ಮಿಥ್ ಅವನ ಮೋರೆ ನೋಡಿ ಜಿಗುಪ್ಸೆಯಿಂದ

ಮುಖ ತಿರುವಿದ. ಮನುಷ್ಯರ ಮೋರೆ ಇಷ್ಟೊಂದು ಅಸಡ್ಡಾಳವಿರಬಹುದೆಂದು ಅವನು ತಿಳಿದಿರಲಿಲ್ಲ.

ಆಗಂತುಕ ಮೋಟರ್ ಚಾಲಕನು ಏರೋಸ್ಮಿಥ್‌ನನ್ನು ಓರೆಗಣ್ಣಿಂದ ನಿಟ್ಟಿಸಿದ. ಈ ಯುವಕನನ್ನು ಬುದ್ಧಿ ಕೌಶಲದಿಂದಾಗಲಿ ಬಲದಿಂದಾಗಲಿ ಸೋಲಿಸುವುದು ಸಹಜವಲ್ಲವೆಂದು ಅವನಿಗೆನಿಸಿತು. ಅವನು ತನ್ನ ಕಾರಿನ ಪಕ್ಕದಲ್ಲಿ ಗಾಡಿ ನಿಲ್ಲಿಸಿದುದನ್ನು ಕಂಡು ಏರೋಸ್ಮಿಥ್ ಸ್ಯಾಂಡ್‌ವಿಚ್‌ನ್ನು ಮೆಲುಕುತ್ತ ಮೆಲುಕುತ್ತ ಕುತೂಹಲದಿಂದ ಅವನನ್ನು ಕೇಳಿದ: "ನಮಸ್ಕಾರ! ಏನು ಸಮಾಚಾರ ಮಹಾಶಯರೆ? ಇಲ್ಲೇಕೆ ಗಾಡಿ ತರುಬಿದಿರಿ? ಪೆಟ್ರೋಲ್ ತೀರಿದೆಯೆ, ಅಥವಾ ಇನ್ನೇನಾದರೂ ದುರ್ಘಟನೆ ಘಟಿಸಿದೆಯೆ?"

"ಇಲ್ಲ. ಪೆಟ್ರೋಲ್ ಮುಗಿದಿಲ್ಲ. ಬೇಕಾದಷ್ಟಿದೆ." ಅವನೆಂದ.

"ಹಾಗಾದರೆ ನನ್ನ ಹತ್ತಿರ ನಿನ್ನದೇನು ಕೆಲಸ?"

"ನೀವು ಬರುವಾಗ ದಾರಿಯಲ್ಲಿ ಒಬ್ಬ ಹೆಣ್ಣುಮಗಳನ್ನು ಕಂಡಿರೇನು?"

ಏರೋಸ್ಮಿಥ್ ವಿಸ್ಮಯವನ್ನು ನಟಿಸುತ್ತ ಉತ್ತರವಿತ್ತ, "ಹೆಣ್ಣು ಮಗಳನ್ನೇ? ಹೆಣ್ಣುಮಕ್ಕಳನ್ನು ಒಬ್ಬಳನ್ನೇ ಏಕೆ ಅನೇಕರನ್ನು ನೋಡಿದ್ದೇನೆ. ಆದರೆ ನೀವು ಯಾರ ಬಗ್ಗೆ ಕೇಳುತ್ತೀರೋ ಹೇಗೆ ಗೊತ್ತಾಗಬೇಕು ನನಗೆ?"

ಆ ಡ್ರೈವರ್ ಏರೋಸ್ಮಿಥ್‌ನ ಮಾತಿನಲ್ಲಿ ಹಾಸ್ಯದ ಆಭಾಸವನ್ನು ಕಂಡು ಒಮ್ಮೆಲೆ ಅತ್ಯಂತ ಗಂಭೀರನಾದನು. ಮಾನಸಿಕ ಉತ್ತೇಜನೆಯಿಂದ ಅವನ ಮುಖ ಕೆಂಪಾಯಿತು. ವಿಕೃತ ಮುಖಭಂಗಿಯಲ್ಲಿ ಕೆಂಗಣ್ಣಿನಿಂದ ಏರೋಸ್ಮಿಥ್‌ನ ಮೊಗವನ್ನು ನೋಡಿದ. ಅವನ ಸ್ವರವೂ ವಿಕೃತವಾಗಿತ್ತು—ಅವನೆಂದ: "ನಾನು ಕೇಳಿದ ಆ ಹೆಂಗುಸು ಚಿಕ್ಕ ವಯಸ್ಸಿನವಳು, ಕಣ್ಣು-ಮೂಗಿಲೆ ಚೆನ್ನಾಗಿದ್ದಳು, ತೆಳ್ಳಗೆ ಸ್ವಲ್ಪ ಉದ್ದನೆಯ ಆಳು — ಈ ಲಕ್ಷಣದವಳು ನಿಮಗೆ ದಾರಿಯಲ್ಲಿ ಕಾಣಲಿಲ್ಲವೆ? ಅವಳು ಒಬ್ಬಳೇ ನಡೆಯುತ್ತ ಹೊರಟಿದ್ದಳು. ದಣಿದು ಕಾಲು ಸೋತು ಕಾರಿನಲ್ಲಿ ಕರೆದೊಯ್ಯುವಂತೆ ಕೇಳಿದ್ದರೂ ಕೇಳಿರಬಹುದಾಗಿದೆ ಯಾವ ಹೆಂಗುಸೂ ನಿಮ್ಮ ಕಾರನ್ನು ತರುಬಿ ಹಾಗೆ ಕೇಳಿಕೊಳ್ಳಲಿಲ್ಲವೆ?"

"ಇಲ್ಲ. ಅಂಥವರು ಯಾರೂ ಕಾರನ್ನು ತರುಬಲಿಲ್ಲ, ಹತ್ತಿಸಿಕೊಳ್ಳುವಂತೆ ಕೇಳಲಿಲ್ಲ."

ಕಾಫಿಯ ಸೀಸೆಯಿಂದ ಏರೋಸ್ಮಿಥ್ ಇನ್ನಷ್ಟು ಕಾಫಿಯನ್ನು ಸುರುವಿ ಕೊಳ್ಳಲಾರಂಭಿಸಿದ. ಆ ಸಮಯದಲ್ಲಿ ಆಗಂತುಕನು ತನ್ನ ಗಾಡಿಯನ್ನು ಸ್ವಲ್ಪ ಹಿಂದೆ ಸರಿಸಿ ಏರೋಸ್ಮಿಥ್‌ನ ಗಾಡಿಗೆ ತೀರ ಹೊಂದಿಸಿ ತಂದು ಒಳಗಡೆ ಬಗ್ಗಿ ನೋಡಿದ—ಸರಕ್ಕನೆ ಕೈಚಾಚಿ ಬಾರಬಾರಾನ ರಗ್ಗನ್ನು ಸರ್ರನೆ ಎಳೆದ. ಅವಳ ಮುಖದ ಮೇಲಿಂದ ಸ್ವಲ್ಪ ಜಾರಿತು. ಆ ಮುಖವನ್ನು ನೋಡಿ ಆ ಡ್ರಾಯ್ವರನ ಮುಖಕಾಂತಿ ಭೀಷಣ ಭಾವವನ್ನು ತಳೆಯಿತು; ಅವನ ಕಣ್ಣು ಗಳಲ್ಲಿ ಉತ್ಸಾಹ ಸೂಸಿತು. "ಹೀಗೇನು? ನೀವು ಯಾವ ಹೆಂಗುಸನ್ನೂ ನೋಡಲಿಲ್ಲ, ಅಲ್ಲವೆ?" ಎಂದು ಅವನು ತುಂಟ ಚೇಷ್ಟೆಯಿಂದ ನುಡಿದು ಬಾರ ಬಾರಾನ ಕೈಯನ್ನು ಬಿಗಿಯಾಗಿ ಹಿಡಿದ. ಅವಳನ್ನು ತನ್ನ ಗಾಡಿಯಲ್ಲಿ ಎತ್ತಿ ಹಾಕಿಕೊಳ್ಳಲು ಪ್ರಯತ್ನಿಸಿದ. ಅವಳು ಭಯಭೀತಳಾಗಿ ವಿರುದ್ಧ ಬದಿಗೆ ದೇಹ ವನ್ನೊರಗಿಸಿ ಕೈ ಬಿಡಿಸಿಕೊಳ್ಳಲು ಪ್ರಯತ್ನಿಸತೊಡಗಿದಳು. ಚೀರಿಕೊಂಡು ಏರೋಸ್ಮಿಥ್‌ನ ನೆರವನ್ನು ಕೋರಿದಳು.

ಇನ್ನೊಂದು ನಿಮಿಷ ತಡವಾಗಿದ್ದರೆ, ಆ ದುಷ್ಟ ಮೋಟರ್ ಡ್ರೈವರನು ಬಾರಬಾರಾಳನ್ನು ತನ್ನ ಕಾರಿನಲ್ಲಿ ಎತ್ತಿ ಹಾಕಿಕೊಳ್ಳುತ್ತಿದ್ದನು. ಅವಳೆಷ್ಟು ಹೋರಾಡಿದ್ದರೂ ಅವನ ಕೈಯಿಂದ ಮುಕ್ತಳಾಗುವುದು ಸಾಧ್ಯವಿರಲಿಲ್ಲ. ಅವ ಳೊಮ್ಮೆ ಅವನ ಗಾಡಿಯಲ್ಲಿ ಬಿದ್ದುಬಿಟ್ಟಿದ್ದರೆ, ಏರೋಸ್ಮಿಥ್‌ನಿಂದ ವಿಶ್ವಪ್ರಯತ್ನ ಮಾಡಿಯೂ ಅವಳನ್ನು ತಿರುಗಿ ಪಡೆಯಲಾಗುತ್ತಿರಲಿಲ್ಲ. ಆದರೆ ಏರೋಸ್ಮಿಥ್ ಪ್ರಸಂಗಾವಧಾನದಿಂದ, ಆ ಹಗೆಯ ಆಕ್ರಮಣವನ್ನು ವ್ಯರ್ಥಗೊಳಿಸುವುದಕ್ಕಾಗಿ ತತ್‌ಕ್ಷಣದಲ್ಲಿಯೇ ಕರ್ತವ್ಯವನ್ನು ನಿರ್ಧರಿಸಿದ. ಕಾಫಿಯ ಬಾಟ್ಲಿಯನ್ನು ಲೋಡಿಸಂತೆ ಹಿಡಿದು ಡ್ರೈವರನ ಹಣೆಗೆ ಬಲವಾಗಿ ಹೊಡೆದ. ಆ ಆಘಾತ ದಿಂದ ಅವನ ಹಣೆ ಒಡೆಯಲಿಲ್ಲವಾದರೂ ತನ್ನ ಕಾರಿನಲ್ಲಿ ಅಚೇತನನಾಗಿ ಬಿದ್ದು ಬಿಟ್ಟ. ಒಮ್ಮೆಲೆ ಅವನ ಹಿಡಿತ ತಪ್ಪುತ್ತಲೇ ಬಾರಬಾರಾಗೆ ಜೋಲಿ ಹಿಡಿಯು ವುದಾಗಲಿಲ್ಲ. ಅವಳು ಏರೋಸ್ಮಿಥ್‌ನ ಪಕ್ಕದಲ್ಲಿ ಧಡಾರನೆ ಬಿದ್ದು ಮೈ- ಮರೆದಳು.

ಏರೋಸ್ಮಿಥ್ ಬಾರಬಾರಾನ ಕಡೆಗೆ ಗಮನ ಕೊಡದೆ ಹಗೆಯ ಗಾಡಿ ಯಲ್ಲಿ ಸುಗ್ಗಿ ಅವನ ನಿಶ್ಚೇಷ್ಟ ದೇಹವನ್ನು ನೋಡಿದ. ಅವನ ಕೈಯಲ್ಲಿ ಪಿಸ್ತೂಲಿತ್ತು. ಅದನ್ನು ಕಿತ್ತುಕೊಂಡು ತನ್ನ ಜೇಬಿನಲ್ಲಿಟ್ಟುಕೊಂಡು ಮರಳಿ

ಬಂದು ತನ್ನ ಪೀಠದಲ್ಲಿ ಕುಳಿತವನೇ ಅತಿ ವೇಗದಿಂದ ಗಾಡಿಯನ್ನೋಡಿಸಿದ ಆದರೆ ಅವನ ಮನಸು ಅತಿಶಯವಾಗಿ ದಣಿದು ಹೋಯಿತು. ಅವನ ಆನಂದ ಉತ್ಸಾಹಗಳು ಉಡುಗಿದವು. ಈ ಆಕ್ರಮಣಕಾರಿ ಯಾವ ಶ್ರೇಣಿಯ ಮನುಷ್ಯನೆಂಬುದು ಅವನಿಗೆ ತಿಳಿಯದ ವಿಷಯವಾಗಿರಲಿಲ್ಲ. ಆ ಮನುಷ್ಯ ಎಚ್ಚತ್ತೊಡನೆಯೇ ಮತ್ತೆ ತಮ್ಮನ್ನು ಬೆನ್ನಟ್ಟಿ ಬಾರಬಾರಾಳನ್ನು ಅಪಹರಿಸಲು ಹೆಣಗದೆ ಬಿಡುವುದಿಲ್ಲವೆಂಬುದು ಏರೋಸ್ಮಿಥ್‌ನಿಗೆ ಗೊತ್ತು.

ಬಾರಬಾರಾ ಬವಳಿ ತಿಳಿದು ಎದ್ದು ಕುಳಿತಳು. "ಪೂರ್ಣ ವೇಗದಿಂದ ಹೊಡೆಯಿರಿ ಗಾಡಿ. ನೆಕ್ಲಿಜನ ಹತ್ತಿರ ಪಿಸ್ತೂಲು ಮತ್ತೊಂದಿದ್ದರೂ ಇರಬಹುದು." ಎಂದು ನುಡಿದಳು.

ಆಗ ಕಾರು ಪೂರ್ಣ ವೇಗದಿಂದಲೇ ಧಾವಿಸುತ್ತಿತ್ತು. ನಕಲಿಜ್ ಇನ್ನೈದು ನಿಮಿಷಗಳಲ್ಲಿಯೇ ಎಚ್ಚರುಗೊಂಡು ದ್ರುತ ವೇಗದಿಂದ ತಮ್ಮನ್ನು ಅನುಸರಿಸುವನೆಂಬುದನ್ನು ಏರೋಸ್ಮಿಥ್ ಊಹಿಸಿಯೇ ಇದ್ದ. ಬಾರಬಾರಾಳನ್ನು ಯಾವುದೊಂದು ಸುರಕ್ಷಿತ ಸ್ಥಳಕ್ಕೆ ತಲುಪಿಸದೆ ದಾರಿಯಲ್ಲಿ ಇನ್ನಾರನ್ನೂ ವಿರೋಧಿಸಬಾರದೆಂದು ಅವನು ನಿರ್ಧರಿಸಿದ.

ಹೋಗಹೋಗುತ್ತ ಏರೋಸ್ಮಿಥ್ ಹಿಂದೆ ತಿರುಗಿ ನೋಡಿದ. ಬಹು ದೂರದಲ್ಲಿ ಒಂದು ಮೋಟರ್ ಕಾರಿನ ಮುಖದೀಪ ಅವನಿಗೆ ಕಾಣಿಸಿತು. ಆದರೆ ಅದು ಒಂದೇ ಕಡೆ ಸ್ಥಿರವಾಗಿತ್ತು. ಗಾಡಿ ಇನ್ನೂ ನಿಂತಿದೆ, ಬರುತ್ತಿಲ್ಲ ಎಂದು ಅವನಿಗೆ ಸಮಾಧಾನವಾಯಿತು. ಹಗೆಯ ಗಾಡಿ ಇನ್ನು ಕೆಲ ನಿಮಿಷ ಅಚಲವಾಗಿದ್ದರೆ ತಾವು ಪ್ರತಿನಿಮಿಷಕ್ಕೂ ಒಂದು ಮೈಲು ಮುಂದುವರಿದಿರುವೆವೆಂದು ಅವನು ಎಣಿಕೆ ಹಾಕಿದ. ಮುಂದಿನ ಕತ್ತರಿ ದಾರಿಯಲ್ಲಿ ತಾನು ಯಾವುದೊಂದು ದಾರಿಯಲ್ಲಿ ಹೊರಳಿ ಹೋಗಿಬಿಟ್ಟರೆ, ಅನುಸರಿಸಿ ಬಂದ ವೈರಿಗೆ ಅಲ್ಲಿಂದ ಮುಂದೆ ಎತ್ತ ಹೋಗಬೇಕೆಂಬುದು ತಿಳಿಯದೆ ಅವನು ಗೊಂದಲದಲ್ಲಿ ಬೀಳುವನೆಂದು ಏರೋಸ್ಮಿಥ್ ಯೋಚಿಸಿದ.

ನೆನಸಿಕೊಂಡ ಕೂಟು ಬಂದಿತು. ಯಾವ ಕಡೆ ಹೋಗುವುದು ಒಳ್ಳೆಯದೆಂದು ಅವನು ವಿಚಾರ ಮಾಡಿದ. ಒಂದು ದಾರಿ ಅಲ್ಲಿಂದ ನೇರವಾಗಿ ಲಂಡನಿನ ಕಡೆ ಹೋಗಿತ್ತು. ಅವನು ಆ ಮಾರ್ಗವನ್ನು ಬಿಟ್ಟು ಇನ್ನೊಂದು

ದಾರಿಯನ್ನು ಹಿಡಿದ. ಅದು ಸ್ವಲ್ಪ ಮುಂದೆ ಹೋಗಿ ಬೇರೊಂದು ಮಾರ್ಗಕ್ಕೆ ಕೂಡಿತ್ತು. ಅದು ಉಟೆಂಬಲ್ಡನಿನ ರಸ್ತೆ.

ಏರೋಸ್ಮಿಥ್ ಸುಮಾರು ಅರ್ಧ ಗಂಟೆ ಗಾಡಿ ಓಡಿಸಿದ. ಇಷ್ಟುಹೊತ್ತೂ ಅವನು ತನ್ನ ಪಕ್ಕದಲ್ಲಿದ್ದ ಬಾರಬಾರಾನೊಡನೆ ಒಂದು ಮಾತೂ ಆಡಲಿಲ್ಲ. ಅವಳೂ ಗಭೀರವಾದ ಯೋಚನೆಯಲ್ಲಿ ಮುಳುಗಿದ್ದಳು. ಗಾಡಿ ಯಾವ ದಾರಿಯಲ್ಲಿ ಹೋಗುತ್ತಿದೆ ಎಂಬ ಕಡೆ ಅವಳ ಲಕ್ಷ್ಯವಿರಲಿಲ್ಲ. ಯಾವ ಕಡೆಗೂ ನೋಡದೆ ಅವಳು ತನ್ನ ದೌರ್ಭಾಗ್ಯವನ್ನು ಕುರಿತು ವಿಚಾರ ನಡೆಸಿದ್ದಳು. ಅವಳೂ ಅವನನ್ನು ಮಾತನಾಡಿಸಲಿಲ್ಲ.

ಮತ್ತೆ ಕೆಲ ಮೈಲು ಸಾಗಿದ ಬಳಿಕ ಏರೋಸ್ಮಿಥ್ ಬಾರಬಾರಾಗೆ "ನೀವು ನನ್ನ ಆಸನದಲ್ಲಿ ಕುಳಿತು ಚಕ್ರ ಹಿಡಿಯಿರಿ." ಎಂದ.

ಅವನ ಮಾತನ್ನು ಕೇಳಿ ಬಾರಬಾರಾನ ಕಣ್ಣುಗಳಲ್ಲಿ ಭಯ ಒಡಮೂಡಿತು; ಮೋರೆ ಒಣಗಿತು. ಅವಳು ಗಾಬರಿಯಿಂದ ಹಿಂದಿರುಗಿ ನೋಡಿದಳು. ಹಗೆ ತಮ್ಮನ್ನು ಹಿಂಬಾಲಿಸಿ ಸಮೀಪಕ್ಕೆ ಬಂದಿರಬಹುದು. ಅದಕ್ಕಾಗಿ ಏರೋಸ್ಮಿಥ್ ಕಾರಿನ ಸಾರಥ್ಯವನ್ನು ತನಗೊಪ್ಪಿಸಿ ಅವನನ್ನು ಎದುರಿಸುವ ವಿಚಾರ ಮಾಡಿದ್ದಾನೆ ಎಂದು ಅವಳು ಬಗೆದಿದ್ದಳು. ಆದರೆ ಹಿಂದುಗಡೆ ಯಾವ ಶತ್ರುವಿನ ಕಾರಿನ ಸುಳಿವು ಕುರುಹೂ ಅವಳಿಗೆ ಕಾಣಲಿಲ್ಲ. ಬಹು ದೂರದಲ್ಲಿಯೂ ದೀಪದ ಬೆಳಕು ಕಣ್ಣಿಗೆ ಬೀಳಲಿಲ್ಲ. ಆಗ ಅವಳಿಗೆ ಸ್ವಲ್ಪ ಧೈರ್ಯಬಂದಿತು. ಅವಳ ಓಷ್ಠದಲ್ಲಿ ದೃಢತೆಯ ಚಿಹ್ನ ತೋರಿತು. ಕಣ್ಣುಗಳಲ್ಲಿನಾ ವಿಹ್ವಲ ಭಾವವು ಮಾಯವಾಯಿತು. ಅವಳು ಯಾವ ಮಾತನ್ನೂ ಆಡದೆ ಏರೋಸ್ಮಿಥ್‌ನ ಆಸನದಲ್ಲಿ ಕುಳಿತುಕೊಂಡು ತೈಲ ಶಕಟದ ಚಾಲನ ಚಕ್ರವನ್ನು ಕೈಕೊಂಡಳು.

ವೈರಿಯ ಕೈಯಿಂದ ವಶಪಡಿಸಿಕೊಂಡಿದ್ದ ಪಿಸ್ತೂಲನ್ನೇ ಕೈಯಲ್ಲಿ ಹಿಡಿದುಕೊಂಡು ಏರೋಸ್ಮಿಥ್ ಗಾಡಿಯಲ್ಲಿ ತಿರುಗಿ ಕುಳಿತ. ಕಾರಿನ ಕೊಲ್ಲಾರಿ ಇಳಿಸಿದುದರಿಂದ ಅದು ಹಿಂಬದಿಯಲ್ಲಿ ಮಡಿಕೆಯಾಗಿ ಬಿದ್ದಿತ್ತು. ಅದರ ಹಿಂದೆ ಅವಿತುಕೊಂಡು ಅವನು ಹಗೆಯ ಗಾಡಿಯ ಆಗಮನವನ್ನು ಪ್ರತೀಕ್ಷಿಸತೊಡಗಿದ. ಸ್ವಲ್ಪ ಸಮಯದಲ್ಲಿ ಒಂದು ಕಾರಿನ ಮುಖದೀಪ ದೃಗ್ಗೋಚರವಾಯಿತು. ಅದು ಪೂರ್ಣ ವೇಗದಿಂದ ಬರುತ್ತಲಿತ್ತು. ತಮ್ಮಿಂದ ಅದು ಎಪ್ಪತ್ತು

ಎಂಬತ್ತು ಯಾರ್ಡು ಅಂತರದಲ್ಲಿರಬಹುದೆಂದು ಅವನು ಅಂದಾಜು ಕಟ್ಟಿದ. ದೀಪದ ಹೊರತು ಗಾಡಿಯ ಯಾವ ಅಂಶವೂ ಕಾಣುತ್ತಿರಲಿಲ್ಲ; ಅಪರಾತ್ರಿಯ ಕತ್ತಲೆಯಲ್ಲಿ ಕಾರು ಮಸಿ ಚಿಹ್ನದಂತೆ ಭಾಸವಾಗುತ್ತಿತ್ತು.

ಹಠಾತ್ ಬಂಗ್ ಎಂದು ಶಬ್ದ ಮಾಡುತ್ತ ಒಂದು ಪಿಸ್ತೂಲಿನ ಗುಂಡು ಏರೋಸ್ಮಿಥ್‌ನ ಪಕ್ಕದಲ್ಲಿ ಸವಾರಿಯ ಪರದೆಯನ್ನು ಹರಿದುಕೊಂಡು, ಬಾರ ಬಾರಾನ ಕಿವಿಯ ಬದಿಯಲ್ಲಿ ಹಾಯ್ದು ಎದುರಿನ ಕಾಜಿನ ಫಲಕಕ್ಕೆ ಬಡಿದು, ಅದನ್ನು ಚೂರು ಚೂರು ಮಾಡಿತು. ಆದರೆ ಬಾರಬಾರಾ ಮಾತ್ರ ಈ ಪ್ರಾಣ ಸಂಕಟದ ಪ್ರಸಂಗದಲ್ಲಿಯೂ ವಿಚಲಿತಳಾಗದೆ ಗಾಡಿ ನಡೆಸುತ್ತಿದ್ದಳು. ಅದು ಅತ್ತಿತ್ತ ಸ್ವಲ್ಪವೂ ಹೊಯ್ದಾಡದೆ ನೆಟ್ಟಗೆ ಸಾಗಿತ್ತು.

ಮರುಕ್ಷಣದಲ್ಲಿ ಬಾರಬಾರಾನ ಪ್ರಾಣ ಮತ್ತೆ ಕುತ್ತಿಗೀಡಾಗುವುದೆಂದು ಏರೋಸ್ಮಿಥ್ ತಿಳಿದುಕೊಂಡ. ಕೂಡಲೆ ಅವನೊಂದು ದೊಡ್ಡ ಸೂಟ್‌ಕೇಸನ್ನು ಕೊಲ್ಲಾರಿಗೆ ಆನಿಸಿಟ್ಟ. ಆ ಕೊಲ್ಲಾರಿ ಮಡಿಕೆಯ ಒಂದು ಕೊನೆಯಲ್ಲಿ ದಾಳಿ ಗಾರನ ಮೋಟರಿನ ಮೇಲೇ ಕಣ್ಣಿಟ್ಟು ಪಿಸ್ತೂಲುಹಸ್ತನಾಗಿ ಸುಯೋಗಕ್ಕಾಗಿ ಕಾದು ಕುಳಿತ. ಅಷ್ಟರಲ್ಲಿಯೇ ಹಗೆಯ ಕಾರಿನಿಂದ ಪುನಃ ಹೊಗೆ ಬುಗ್ಗಿಂ ದಿತು. ಗುಂಡು ಬಂದು ಏರೋಸ್ಮಿಥ್‌ನ ಗಾಡಿಯ ಕೊಲ್ಲಾರಿಯನ್ನು ಭೇದಿ ಸಿತು. ಆದರೆ ಸೂಟ್ ಕೇಸಿನ ತಡೆಯೊಡ್ಡಿದ್ದರಿಂದ ಅದು ಮುಂದುವರಿಯಲು ಶಕ್ತವಾಗಲಿಲ್ಲ. ಸೂಟು ಕೇಸು ಮಾತ್ರ ಹೊರಳಿ ಬಿತ್ತು. ಅದನ್ನಲ್ಲಿ ಇಟ್ಟಿ ರದಿದ್ದರೆ ಈ ಗುಂಡು ಖಂಡಿತವಾಗಿಯೂ ಬಾರಬಾರಾನ ತಲೆಯನ್ನೊಡೆಯು ತ್ತಿತ್ತು. ಚಾಲನ ಚಕ್ರದ ಮೇಲೆ ಅವಳ ಹೆಣ ಉರುಳುತ್ತಿತ್ತು; ಈ ದುರ್ಘ ಟನೆ ಏರೋಸ್ಮಿಥ್‌ನ ಪ್ರಸಂಗಾವಧಾನದಿಂದ ತಪ್ಪಿತು. ಆದರೆ ಅದು ಅವಳಿಗೆ ಗೊತ್ತು ಕೂಡ ಆಗಲಿಲ್ಲ.

ಏರೋಸ್ಮಿಥ್ ಇನ್ನೂ ಸುಸಂಧಿಯನ್ನು ಕಾಯ್ದುಕೊಂಡಿದ್ದ. ಒಂದು ಓಡುತ್ತಿರುವ ಗಾಡಿಯೊಳಗಿಂದ ಇನ್ನೊಂದು ಓಡುತ್ತಿರುವ ಗಾಡಿಯೊಳಗಿನ ವ್ಯಕ್ತಿಗೆ ಗುಂಡೆಸೆಯುವ ವೈರಿಯ ಈ ಗುರಿಗಾರಿಕೆ ಹೊಗಳತಕ್ಕದ್ದೇ. ಅವನ್ನ ವನು ಒಪ್ಪಿ ತಲೆದೂಗಿದ. ಇನ್ನು ಆ ಶತ್ರುವಿಗೆ ತನ್ನ ಕೈಚಳಕವನ್ನು ತೋರಿ ಸಬೇಕೆಂದು ಅವನ ಮನಸು ತವಕಗೊಂಡಿತು. ಅವನು ಕತ್ತಲೆಯಲ್ಲಿಯೇ ಗುರಿಯಿಟ್ಟು ಪುನಃಪುನಃ ಮೂರು ಸಾರಿ ಗೋಳಿಬಾರು ಮಾಡಿದ. ಆಮೇಲೆ

ಬಾರಬಾರಾನನ್ನು ಕುರಿತು,

"ಸ್ವಲ್ಪ ನಿದಾನವಾಗಿ ನಡೆಸಿರಿ" ಎಂದು ಹೇಳಿದ.

ಅವನ ಮಾತು ಮುಗಿಯುವಷ್ಟರಲ್ಲಿಯೇ ಹಿಂದಿನ ಗಾಡಿಯಿಂದ ಬಾಂಬು ಸಿಡಿದಂತೆ ಮಹಾ ಶಬ್ದವಾಯಿತು; ಅದರ ನೆತ್ತಿಯ ಎರಡೂ ದೀಪಗಳು ನಂದಿದವು. ಗಾಡಿ ದಾರಿ ಪಕ್ಕದಲ್ಲಿ ಧುಮ್ಮಿಕ್ಕಿತು; ಝುಪಂಗ್ ಎಂದು ನೀರಿನ ಶಬ್ದವಾಯಿತು. ಗಾಡಿಯ ಗಾಲಿಗಳು ಕೆಸರನ್ನು ಕಡೆಯತೊಡಗಿದವು.

ಪಿಸ್ತೂಲನ್ನು ಜೇಬಿಗೆ ಸೇರಿಸುತ್ತ ಏರೋಸ್ಮಿಥ್ ನುಡಿದ; "ಇದೇ ಸೇರಿಗೆ ಸವ್ವಾಸೇರು ಎಂದರೆ! ಮತ್ತೇನಾಗದಿದ್ದರೂ ಎರಡು ಹೊಸ ಟಾಯರಗಳು ಒಡೆದು ಹೋದವು. ಇದೇ ನಮಗೆ ಯಥೇಷ್ಟ ಲಾಭ."

ಬಾರಬಾರಾ ವಿವರ್ಣ ಮುಖದಿಂದ ಅವನ ಮೋರೆ ನೋಡಿದಳು. ಅವಳ ಕಣ್ಣುಗಳು ಮಾತ್ರ ಸಂತೋಷದಿಂದ ಮಿನುಗುತ್ತಿದ್ದವು. "ಅತ್ಯದ್ಭುತ!" ಎಂಬ ಹರ್ಷೋದ್ಗಾರ ಅವಳ ಬಾಯಿಂದ ಹೊಮ್ಮಿತು. ಏರೋಸ್ಮಿಥ್ ಗಾಡಿಯಿಂದಿಳಿದುದನ್ನು ಕಂಡು, "ಎಲ್ಲಿ ಹೊರಟಿರಿ?" ಎಂದು ಅವಳು ಪ್ರಶ್ನಿಸಿದಳು.

"ಬದುಕಿದ್ದರೆ ಕಟ್ಟಿ ತರುವೆ; ಸತ್ತಿದ್ದರೆ ಕಣ್ತುಂಬ ನೋಡಿ ಬರುವೆ." ಗಂಭೀರ ಸ್ವರದಲ್ಲಿ ಅವನು ಉತ್ತರವಿತ್ತ.

ಆ ತಗ್ಗಿನ ಬಳಿ ಹೋಗಿ ಏರೋಸ್ಮಿಥ್ ಬ್ಯಾಟರಿ ಹಚ್ಚಿ ಗಾಡಿಯ ಅವಸ್ಥೆಯನ್ನು ನೋಡಿದ. ಅದು ಆ ಕೆಸರಿನಿಂದ ಎದ್ದು ಬಂದು ತಮ್ಮನ್ನು ಹಿಂಬಾಲಿಸುವ ಸ್ಥಿತಿಯಲ್ಲಿರಲಿಲ್ಲ. ಅದರ ಅಚ್ಚು ಕೂಡ ಕೆಸರಲ್ಲಿ ಹೂಳಿದ್ದವು. ಹಿಂದಿನ ಗಾಲಿಗಳು ಕೆಸರಿನಲ್ಲಿ ಮುಚ್ಚಿ ಹೋಗಿದ್ದವು. ಮುಂದಿನ ಗಾಲಿಗಳು ಟೈಯರೊಡೆದು ನಿಷ್ಪ್ರಯೋಜಕವಾಗಿದ್ದವು. ಸಮ್ಮುಖದ ಕಾಜಿನ ಹಾಡನ್ನಂತೂ ಹೇಳುವುದೇ ಬೇಡ.—'ಗಾಡಿಯ ಅವಸ್ಥೆಯಂತೂ ಮನೋಹರ. ಆದರೆ ಷಾಲಕನೆಲ್ಲಿ? ಗಾಡಿಯ ಬುಡದಲ್ಲಿ ಬಿದ್ದು ರಾಡಿ ಕುಡಿಯುತ್ತಿದ್ದಾನೆಯೆ? ಅದು ಸಂಭವನೀಯವಲ್ಲ. ಗಾಡಿಯಿಂದ ಹೊರಮಗ್ಗಲಿಗೇ ಪುಟಿದು ಬೀಳಬೇಕು.' ಅಸ್ಫುಟ ಸ್ವರದಲ್ಲಿ ಅವನೆಂದುಕೊಂಡ.

ತಗ್ಗಿನಿಂದ ತುಸು ದೂರದಲ್ಲಿ ಬೇಲಿಯಿತ್ತು. ಏರೋಸ್ಮಿಥ್ ಏನೋ ಯೋಚಿಸಿಕೊಂಡು ಅದರ ಮೇಲೆ ಬ್ಯಾಟರಿಯ ಬೆಳಕು ಚೆಲ್ಲಿದ. ಒಂದೆರಡು

ಗಿಡಗಳ ಕೆಲವು ತುದಿ ಟೊಂಗೆಗಳು ಮುರಿದಿದ್ದವು, ಕೆಲವು ಬಾಗಿದ್ದವು. 'ತಗ್ಗಿನ ನೆರೆಹೊರೆಯಲ್ಲಂತೂ ಡ್ರೈವರನ ಕುರುಹೇ ಇಲ್ಲ: ಬಹುಶಃ ಅವನು ಗಾಡಿಯಿಂದ ಪುಟಿದು ಬೇಲಿಯ ಮೇಲಿಂದ ಆಚೆಗೆ ಬಿದ್ದಿರಬೇಕು' ಎಂದು ಅವನು ಊಹಿಸಿದ.

ಬೇಲಿಯ ಆಚೆಗೆ ಹೋಗಿ ನೋಡುವ ಕುತೂಹಲಕ್ಕೆ ಏರೋಸ್ಮಿಥ್ ವಶನಾಗಲಿಲ್ಲ. ಬೇರೊಂದು ಭಯ ಅವನ ಮನದಲ್ಲಿ ಮೂಡಿತು.—'ಅವನು ಗಾಡಿಯಿಂದ ಪುಟಿದೇನೋ ಬಿದ್ದಿದ್ದಾನೆ, ನಿಜ. ಆದರೆ ಸಾಂಘಾತಿಕವಾಗಿಯೇ ಪೆಟ್ಟು ಬಿದ್ದಿದೆಯೆಂದು ತಿಳಿದುಕೊಳ್ಳುವಂತಿಲ್ಲ. ಸಾಮಾನ್ಯ ಆಘಾತವಾಗಿದ್ದರೆ ತನ್ನ ಗಾಡಿ ಇನ್ನು ಕೆಲಸಕ್ಕೆ ಬಾರದ್ದೆಂಬುದನ್ನು ಮನಗಂಡು, ನನ್ನ ಗಾಡಿಯನ್ನು ಹಸ್ತಗತ ಮಾಡಿಕೊಳ್ಳುವ ಮನೀಷೆ ಅವನಿಗೆ ಉಂಟಾಗಿರಲಿಕ್ಕಿಲ್ಲ ತಾನೆ? ನಾನು ಬಾಂಬಾರಾ ಒಬ್ಬಳನ್ನೇ ಗಾಡಿಯಲ್ಲಿ ಬಿಟ್ಟು ಇಷ್ಟು ದೂರ ಬಂದುಬಿಟ್ಟಿದ್ದೇನೆ. ಈ ಸಂಯೋಗದಲ್ಲಿಯೇ ಅವನು ಆಕ್ರಮಣ ಮಾಡಿದರೆ? ಎಂದು ಏರೋಸ್ಮಿಥ್‌ನಿಗೆ ಚಿಂತೆಯಾಯಿತು. ಅವನು ಉದ್ವಿಗ್ನ ಮನಸಿನಿಂದ ತನ್ನ ಗಾಡಿಯ ಕಡೆ ಸಾಗಿದ.

ಏರೋಸ್ಮಿಥ್ ಸಾಧ್ಯವಿದ್ದಷ್ಟೂ ತೀವ್ರ ಗತಿಯಿಂದ ನಡೆದಿದ್ದ ನಿಜ. ಆದರೆ ತನ್ನ ಗಾಡಿ ಸುಮಾರು ಐವತ್ತು ಗಜ ದೂರವಿರುವಾಗಲೇ ಹೆಂಗುಸಿನ ಭಯ-ವಿಹ್ವಲ ಆರ್ತಸ್ವರವನ್ನು ಕೇಳಿ ಅವನು ದಿಗಿಲುಗೊಂಡು ಓಡತೊಡಗಿದ. ಗಾಡಿ ಸ್ವಲ್ಪ ಅಂತರದಲ್ಲಿರುವಾಗ ಅವನು ಸದ್ದಾಗದಂತೆ ಮುಂದುವರಿದ. ಈಗ ಸ್ವಲ್ಪ ಜೋಕೆ ತಪ್ಪಿದರೆ ಪರಿಣಾಮ ವಿಪರೀತವಾಗುವುದೆಂದು ಹಗೆಗೆ ತನ್ನ ಸುಳಿವು ಹತ್ತದಂತೆ ಜಾಗರೂಕತೆಯಿಂದ ಸಾಗಿದ್ದ.

ಬಾರಬಾರಾನ ಆರ್ತನಾದ, ಧಿಕ್ಕಾರದ ಮಾತು, ಗುದುಮುರಿಗೆಯ ಶಬ್ದಗಳನ್ನುಕೇಳಿ ಆ ನರಾಧಮನ ಕೈಯಿಂದಪಾರಾಗಲು ಹೋರಾಡುತ್ತಿರುವಳೆಂದು ಏರೋಸ್ಮಿಥ್ ತಿಳಿದುಕೊಂಡ. ಇನ್ನು ಸ್ವಲ್ಪ ಮುಂದುವರಿದಾಗ, ಆ ಪುಂಡನು ಕಾರಿನ ಪಕ್ಕದಿಂದ ಒಳಹೊಕ್ಕು ಚಾಲಕನ ಆಸನವನ್ನು ಹಿಡಿದುಕೊಳ್ಳಲು ಪ್ರಯತ್ನಿಸದೆ, ಹಿಂದಿನಿಂದ ನುಗ್ಗಿ ಆರೋಹಿಯ ಆಸನದಲ್ಲಿ ಕುಳಿತು, ಎರಡೂ ಕೈಗಳಿಂದ ಬಾರಬಾರಾನನ್ನು ಹಿಡಿದು ಈಚೆಗೆ ಎಳೆಯಲು ಪ್ರಯತ್ನಿಸುತ್ತಿರುವುದನ್ನು ಕಂಡ. ಅವನು ಕಾರನ್ನು ತಲಪುವ ಹೊತ್ತಿಗೆ ನಕ್ಲೆಜ್ ಅವಳನ್ನು

ರಭಸದಿಂದೆಳೆದು ತನ್ನ ಬದಿಯಲ್ಲಿ ಕುಳ್ಳಿರಿಸಿದ. ಆಮೇಲೆ ಒಂದು ಕೈಯಿಂದ ಅವಳ ಕತ್ತನ್ನು ಒತ್ತಿ ಹಿಡಿದು, ಇನ್ನೊಂದು ಕೈಯಿಂದ ತಲೆಗೆ ಗುದ್ದಲುಜ್ಜು ಗಿಸಿದ,

ಈ ಸ್ಥಿತಿಯಲ್ಲಿ ಏರೋಸ್ಮಿಥ್ ಅವನನ್ನು ಸಹಜವಾಗಿ ಗುಂಡಿಕ್ಕಿ ಕೊಲ್ಲ ಬಹುದಿತ್ತು. ಆದರೆ ಹಗೆ ಬಾರಬಾರಾನ ಕತ್ತನ್ನು ಒತ್ತಿ ಹಿಡಿದಿದ್ದುದರಿಂದ ಬೇರೆ ಬಗೆಯಿಂದ ಶಾಸ್ತಿ ಮಾಡುವುದೇ ವಿಹಿತವೆಂದು ಬಗೆದು, ತತ್‌ಕ್ಷಣವೇ ಅವನು ನಕ್ಲಿಜನ ಹೆಡತಲೆಗೆ ಪ್ರಚಂಡವಾದ ಮುಷ್ಟಿ ಪ್ರಹಾರವನ್ನಿತ್ತು ಪೂರ್ಣ ಶಕ್ತಿಯಿಂದ ಹೊರಕ್ಕೆ ನೂಕಿದ. ಆಕಸ್ಮಾತ್ ಘಟಿಸಿದ ಈ ಆಘಾತವನ್ನು ನಿತ್ತರಿಸಿಕೊಳ್ಳಲಾರದೆ ನಕ್ಲಿಜ್ ಕಾರಿನ ಬಾಗಿಲ ಮೂಲಕ ರಸ್ತೆಗೆ ಉರುಳಿಬಿದ್ದ. ತಲೆಗೆ ಕಲ್ಲಿನ ಪೆಟ್ಟು ತಗಲಿ ಅವನಿಗೆ ಮೂರ್ಛೆ ಬಂದಿತು.

ಏರೋಸ್ಮಿಥ್ ಬೀದಿಯ ಕಡೆಗೇ ನೋಡುತ್ತ ನಿಂತ. ಬಿದ್ದ ನಕ್ಲಿಜ್ ಏಳುವಂತೆ ಕಾಣಲಿಲ್ಲ. ಅವನ ಆರ್ತನಾದವೂ ಕೇಳಲಿಲ್ಲ. ಹತ್ತಿರ ಹೋಗಿ ಬಗ್ಗಿ ನೋಡಿದ. ಅವನು ನಿಶ್ಚೇತನನಾಗಿದ್ದ; ಸತ್ತ ಹಾಗೆ ಕೈಕಾಲು ಚಾಚಿ ಚೆಲ್ಲಿಕೊಂಡಿದ್ದವು.

ಇತ್ತ ಬಾರಬಾರಾನ ಅವಸ್ಥೆಯೂ ಶೋಚನೀಯವಾಗಿತ್ತು. ನಕ್ಲಿಜನ ಕಠೋರ ಹಿಡಿತದಿಂದ ಅವಳಿಗೆ ಉಸಿರು ಕಟ್ಟಲಾರಂಭಿಸಿತ್ತು. ಆ ಆಕ್ರಮಣ ದಿಂದಲೇ ಅವಳು ಎಚ್ಚರದಪ್ಪಿ ಬಿದ್ದಿದ್ದಳು. ಏರೋಸ್ಮಿಥ್ ಜೇಬಿನಿಂದ ಬಾಟ್ಲಿ ಯನ್ನು ತೆಗೆದು ಅವಳ ಬಾಯೊಳಗೆ ಸ್ವಲ್ಪಸ್ವಲ್ಪವಾಗಿ ಬ್ರಾಂಡಿಯನ್ನು ಹಾಕಿದ. ಎರಡು ಮೂರು ನಿಮಿಷಗಳಲ್ಲಿ ಅವಳ ಶರೀರದಲ್ಲಿ ಚೇತನೆಯ ಸಂಚಾರವಾ ಯಿತು. ಅವಳು ಮೆಲ್ಲನೆ ಕಣ್ದೆರೆದು ಸುತ್ತಲೂ ಸಭಯವಾಗಿ ನೋಡಿ, "ನಕ್ಲಿಜ್ ? ಅವನೆಲ್ಲಿದ್ದಾನೆ ? ಅವನಿಗೇನಾಯಿತು ?" ಎಂದಳು.

"ನಿಮ್ಮ ಭೀತಿಯ ಕಾರಣ ದೂರವಾಗಿದೆ. ಅವನ ವಿಷಯ ಯೋಚಿಸಿ ನೀವು ವಿಹ್ವಲರಾಗಬೇಡಿರಿ." ಗಂಭೀರ ಸ್ವರದಲ್ಲಿ ಏರೋಸ್ಮಿಥ್ ಹೇಳಿದ.

ಆದರೂ ಅವಳು "ಅವನೆಲ್ಲಿ ?" ಎಂದು ಕೇಳಿದಳು.

—"ಅವ ಎಲ್ಲಿ ?—ನೋಡುವಿರೇನು ? ಅವನ ಗತಿ ಏನಾಗಿದೆಯೆಂಬು ದನ್ನು ಈಗಲೇ ಕಾಣುವಿರಂತೆ." ಎಂದು ಏರೋಸ್ಮಿಥ್ ಕೆಳಗಿಳಿದು ನಕ್ಲಿಜ್

ಬಿದ್ದಿದ್ದ ಕಡೆ ಬ್ಯಾಟರಿಯ ಪ್ರಕಾಶವನ್ನು ಚೆಲ್ಲಿದ. ಆಶ್ಚರ್ಯ! ಆಶ್ಚರ್ಯ ಸೂಚಕ ಅಸ್ಫುಟ ಶಬ್ದವೊಂದು ಏರೋಸ್ಮಿಥ್‌ನ ಬಾಯಿಂದ ಹೊರಬಿದ್ದಿತು. ನಕ್ಲಿಜ್ ಅಲ್ಲಿರಲಿಲ್ಲ!

"ನನ್ನ ಆಘಾತದಿಂದ ನಕ್ಲಿಜ್ ಕಾರಿನಿಂದ ಕೆಳಗೆ ಬಿದ್ದು ಮೂರ್ಛೆ ಹೊಂದಿದ್ದ. ಅವನು ಅಲ್ಲಿಯೇ ಬಿದ್ದುಕೊಂಡಿದ್ದಾನೆಂದು ತಿಳಿದಿದ್ದೆ. ನಾನು ನಿಮ್ಮ ಶುಶ್ರೂಷೆಯಲ್ಲಿ ಮಗ್ನನಾಗಿದ್ದಾಗ ಆ ಧೂರ್ತ ಎದ್ದು ಓಡಿಹೋಗಿ ದ್ದಾನೆ. ಎಂಥ ಪಶ್ಚಾತ್ತಾಪದ ವಿಷಯ! ಗುದ್ದಿ ಕೆಡವದೆ ಅವನನ್ನು ಗುಂಡಿಕ್ಕಿ ಕೊಂದಿದ್ದರೇ ನೆಟ್ಟಗಿತ್ತು." ಏರೋಸ್ಮಿಥ್ ನುಡಿದ.

"ನಾನಾದರೂ ಆ ರೀತಿ ಭಯದಿಂದ ಮೂರ್ಛಿತಳಾದದ್ದು ಉಚಿತವಾಗ ಲಿಲ್ಲ. ನನ್ನ ಇಂಥ ಅಳ್ಳೆದೆಗಾಗಿ ನಾಚಿಕೆಯಾಗುತ್ತದೆ." ಬಾರಬಾರಾ ನುಡಿ ದಳು.

ಏರೋಸ್ಮಿಥ್ ತೀಕ್ಷ್ಣ ದೃಷ್ಟಿಯಿಂದ ಅವಳ ಮೋರೆ ನೋಡಿದ. "ಇಲ್ಲ ಕುಮಾರಿ, ನಿಮ್ಮ ಬಗ್ಗೆ ನೀವು ತಪ್ಪು ಹೇಳುತ್ತಿದ್ದೀರಿ. ಆ ನರಪಶುಗಳ ಅಡ್ಡೆಯಿಂದ ಪಲಾಯನ ಮಾಡುವ ಸಮಯದಲ್ಲಿ ತುಂಬಾ ಸ್ಥೈರ್ಯ ಧೈರ್ಯ ತೋರಿದ್ದೀರಿ. ಆಗಲೇ ಶತ್ರು ನಿಮ್ಮನ್ನು ಕೊಲ್ಲುವ ಉದ್ದೇಶದಿಂದ ನಮ್ಮ ಕಾರಿನ ಹಿಂದುಗಡೆಯಿಂದ ಗುಂಡು ಹೊಡೆದಾಗಲೂ ಪ್ರಾಣಭಯದಿಂದ ನೀವು ವಿಚಲಿತರಾಗಲಿಲ್ಲ. ಒಳ್ಳೇ ದೃಢತೆಯಿಂದ ನಿಮ್ಮ ಕರ್ತವ್ಯವನ್ನು ಸಾಗಿಸಿದಿರಿ. ನಿಮ್ಮ ಈ ವೀರತ್ವವನ್ನು ನಾನು ಕೊಂಡಾಡದಿರಲಾರೆ. ಆದರೆ ನನಗೆ ಒಂದು ವಿಷಯ ತಿಳಿಯಲಿಲ್ಲ—ಆ ಮರಾತ್ಮ ನಿಮಗೆ ಗುಂಡಿನ ಬೆದರಿಕೆ ಹಾಕದೆ ಕತ್ತು ಹಿಸುಕಿ ಕೊಲ್ಲಲು ಉದ್ಯುಕ್ತನಾದದ್ದು ಏಕೆ?"

—"ಅವನು ನನಗೆ ಗುಂಡಿಕ್ಕುವೆನೆಂದು ಹೆದರಿಸಿದ್ದ. ಪಿಸ್ತೂಲಿನ ಕೊಳ ವೆಯನ್ನು ನನ್ನೆದೆಗೆ ಒತ್ತಿ ಹಿಡಿದು, ಚಾಲಕನ ಆಸನವನ್ನು ಬಿಟ್ಟು ಕೊಡದಿದ್ದರೆ ಈ ಕ್ಷಣ ಗುಂಡಿಕ್ಕುವೆನೆಂದು ಹೇಳಿದ."

—"ಮುಂದೇನಾಯ್ತು?"

—"ಮುಂದೇ? ಅದಕ್ಕೆ ನಾನು 'ನಿನ್ನಿಷ್ಟದಂತೆ ಮಾಡಬಹುದು' ಎಂದು ಹೇಳಿದೆ. ಆದರೆ ಅವನು ನನಗೆ ಗುಂಡಿಕ್ಕದೆ ಕತ್ತು ಹಿಡಿದು ಈಚೆಗೆ ಎಳೆದು ತಂದ."

ಕೆಲ ನಿಮಿಷಗಳ ತರುವಾಯ ಚಾಲಕನ ಆಸನದ ಕೆಳಗೆ ಕಾಲು ನೀಡಿದಾಗ ಅವನ ಕಾಲಿಗೆ ಪಿಸ್ತೂಲು ತಗಲಿತು. ನಕ್ಲಿಜನ ಕೈಯಿಂದ ಜಾರಿಬಿದ್ದಿತ್ತದು. ಏರೋಸ್ಮಿಥ್ ಅದನ್ನು ಕೈಗೆ ತೆಗೆದುಕೊಂಡು ಪರೀಕ್ಷಿಸಿದ. ಅದು ಬರಿದಾಗಿತ್ತು. ಗುಂಡು ಹಾರಿಸುತ್ತ ಹಾರಿಸುತ್ತ ಅಜ್ಞಾತ ಶತ್ರುವನ್ನು ಅನುಸರಿಸಿದಾಗಲೇ ಅದರಲ್ಲಿಯ ಕಾಡತೂಸುಗಳು ಮುಗಿದಿದ್ದವಾದುದರಿಂದ ಗುಂಡಿಕ್ಕುವುದು ಬರೀ ಮಾತಿನಲ್ಲಿಯೇ ಉಳಿಯಿತೆಂದು ಏರೋಸ್ಮಿಥ್ ಊಹಿಸಿದ.

ಅವರು ಲಂಡನನ್ನು ಸೇರಿದಾಗ ಸುಮಾರು ಹನ್ನೆರಡು ಗಂಟೆಯ ರಾತ್ರಿ. ಅಲ್ಲಿ ಹೋದ ಮೇಲೆ ಏರೋಸ್ಮಿಥ್ ಬಾರಬಾರಾಗೆ, "ನಿಮ್ಮನ್ನು ನಮ್ಮ ಮನೆಗೇ ಕರೆದೊಯ್ಯಬೇಕೆಂದು ನನಗೆ ಬಹಳ ಇಚ್ಛೆಯಿತ್ತು; ಅಲ್ಲಿ ನಮ್ಮ ತಂಗಿಯೊಡನೆ ನೀವು ಇರಬಹುದಾಗಿತ್ತು. ಆದರೆ ಅವಳು ಇಂದು ಮನೆಯೊಳಗಿಲ್ಲ. ಚಿಕ್ಕಮ್ಮನ ಮನೆಗೆ ಹೋಗಿದ್ದಾಳೆ. ಅಲ್ಲದೆ ಮುಖ್ಯವಾಗಿ, ನಕ್ಲಿಜ್ ನನ್ನ ಕಾರಿನ ಸಂಖ್ಯೆ ನೋಡಿಕೊಂಡಿದ್ದಾನೆ. ಕಾರನ್ನು ನೋಡಿ ಅವನು ನಮ್ಮ ಮನೆಯನ್ನು ಗೊತ್ತು ಮಾಡಿಕೊಂಡರೆ, ಮತ್ತೆ ನಿಮ್ಮ ಮೇಲೆ ದಾಳಿ ಮಾಡಬಹುದು. ಅವರು ನಿಮ್ಮನ್ನು ಬಂಧಿಸಲು ಬಹಳ ಉತ್ಸುಕರಾಗಿರುವಂತೆ ಕಾಣುತ್ತದೆ."

—"ಹಾಗಾದರೆ ನನ್ನನ್ನು ಎಲ್ಲಿಗೆ ಕರಕೊಂಡು ಹೋಗುವಿರಿ? ಈ ಹೊರೆಯನ್ನು ಎಲ್ಲಿ ಇಳಿಸಬೇಕೆನ್ನುವಿರಿ?"

—"ಹೆಮ್‌ಸ್ಟೆಡ್ಡಿನಲ್ಲಿ ನಮ್ಮ ಕಕ್ಕ ಇರುತ್ತಾರೆ, ಅವರ ಮನೆಗೆ. ಅವರ ಹೆಂಡತಿ ಮಿಸೆಸ್ ಬ್ರೆಂಟ್ ನಿಮ್ಮನ್ನು ತಾಯಿಯಂತೆ ನೋಡಿಕೊಳ್ಳುತ್ತಾರೆ. ಅಲ್ಲದೆ ಅಲ್ಲಿ ಒಬ್ಬ ಪೋಲೀಸನೂ ಇರುತ್ತಾನೆ ಕಾವಲಿಗೆ."

## ೬

ಏರೋಸ್ಮಿಥ್ ಬಾರಬಾರಾನನ್ನು ಕಕ್ಕನ ಮನೆಯಲ್ಲಿರಿಸಿ ತಿರುಗಿ ಹೊರಟಾಗ ರಾತ್ರಿ ಸುಮಾರು ೪ ಗಂಟೆಯಾಗಿತ್ತು. ಅವಳಿಗೊದಗಿದ ವಿಪತ್ತನ್ನೂ ತಾನು ಮಾಡಿದ ನೆರವನ್ನೂ ಸಂಕ್ಷೇಪದಲ್ಲಿ ವಿವರಿಸುತ್ತಿರುವಾಗಲೇ ಅವಳು

ಅವನ ಕಕ್ಕಿಯೊಡನೆ ಒಳಮನೆ ಸೇರಿದ್ದಳು. ಏರೋಸ್ಮಿಥ್ ಹೊರಡುವಾಗ, "ಇವಳ ಅವಸ್ಥೆ ತಿಳಿಯಿತಷ್ಟೇ ಕಕ್ಕ? ನಾಳೆ ಮುಂಜಾನೆ ಇವಳನ್ನು ಸ್ಕಾಟ್ಲಂಡ ಯಾರ್ಡಿನ ಅಪರಾಧ ಶೋಧನ ವಿಭಾಗದ ಮುಖ್ಯಸ್ಥರಾದ ಮಿ. ಪ್ಯಾರೆಟ್ಟರ ಕಡೆ ಕರೆದೊಯ್ಯುವೆ. ಇಂಥ ನಿರ್ಯಾತನೆಯ ಕಾರಣವನ್ನು ಶೋಧಿಸುವದ ಗತ್ಯ. ಈ ರಹಸ್ಯವನ್ನು ಭೇದಿಸುವ ಆಗ್ರಹ ನನಗುಂಟಾಗಿದೆ." ಎಂದು ಮಿ. ಪಿಟರ್ ರಕ್ಲಿಫರಿಗೆ ತಿಳಿಸಿ ಬೀಳ್ಕೊಂಡ.

ಕಳ್ಳರ ಮನೆಯಿಂದ ಅವನು ನೇರವಾಗಿ ಮನೆಗೆ ಹೋಗಲಿಲ್ಲ. ನ್ಯೂ ಆಕ್ಸಫರ್ಡ್ ಬೀದಿಯಿಂದ ಸೋಹೊಸ್ಕ್ವೇರಿಗೆ ಹೋಗಿ ಮುಂದೆ ಹತ್ತು ನಿಮಿಷ ಗಳಲ್ಲಿ ಗ್ರೀಕ್ ಸ್ಟ್ರೀಟಿನ ಹತ್ತಿರದ ಒಂದು ಸಂದಿಯನ್ನು ಪ್ರವೇಶಿಸಿದ. ಅಲ್ಲಿ ಒಂದು ಹಳೆಯ ಮನೆಗೆ ಹೋಗಿ ಬಾಗಿಲನ್ನು ಬಡಿದ. ಆ ಮನೆಯೊಳಗೆ ಒಬ್ಬ ಕಳ್ಳ ಇರುತ್ತಿದ್ದ. ಹೆಸರು ಸ್ಯಪರ್. ಒಂದು ಬ್ಯಾಂಕಿನಲ್ಲಿ ನಾಲ್ವತ್ತು ಪೌಂಡು ಬೆಲೆ ಬಾಳುವ ಚಿನ್ನವನ್ನು ಕೌಶಲದಿಂದ ಅಪಹರಿಸಿದ್ದಕ್ಕಾಗಿ ಅವನಿಗೆ ಏಳು ವರುಷಗಳ ಕಾರಾವಾಸದ ಶಿಕ್ಷೆಯಾಗಿತ್ತು. ಆದರೆ ಅವನು ಕದ್ದ ಬಂಗಾರ ವನ್ನು ಮಾತ್ರ ಪೋಲಿಸರ ಕೈಗೆ ಹತ್ತಗೊಡಲಿಲ್ಲ. ಶಿಕ್ಷೆ ಅನುಭವಿಸಿ ಬಿಡುಗಡೆ ಹೊಂದಿದ ಬಳಿಕ ಈ ಮನೆಯಲ್ಲಿ ಇರುತ್ತಿದ್ದ.

ಸ್ಯಪರ್ ಗಿಡ್ಡ ಆಳು, ದೃಢಾಂಗ; ವಯಸ್ಸು ಐವತ್ತರ ಮನೆ ತಲುಪಿದೆ. ಅವನು ರಾತ್ರಿ ನಾಲ್ಕಕ್ಕೇ ಅಡಿಗೆ ಮಾಡಿಕೊಳ್ಳುತ್ತಿದ್ದ. ಬಾಗಿಲ ಸದ್ದನ್ನು ಕೇಳಿ ಎದ್ದು ಹೋಗಿ ಕದ ತೆಗೆದ. ಆ ಹೊತ್ತಿನಲ್ಲಿ ಏರೋಸ್ಮಿಥ್ ಮನೆಯೊಳಗೆ ಬಂದುದನ್ನು ನೋಡಿ ಅವನೆದುರಿಗೆ ನಿಂತುಬಿಟ್ಟ.

"ಏಕೆ, ಸುಮ್ಮನೆ ನಿಂತೆ ಸ್ಯಪರ್! ನಿನ್ನ ಅಡಿಗೆ ಸೀಸು ನಡೆಸು. ನಿನಗೆ ಅಡ್ಡಿ ಮಾಡಬೇಕೆಂದು ನಾನು ಬಂದಿಲ್ಲ." ಏರೋಸ್ಮಿಥ್ ಹೇಳಿದ.

—"ನನಗೆ ಅಡ್ಡಿ ಮಾಡುವುದು ನಿಮಗೆ ಸಾಧ್ಯವೆ? ಇಲ್ಲ. ಆ ಶಕ್ತಿ ನಿಮಗಿಲ್ಲ, ಮಿಸ್ಟರ್! ನಿಮ್ಮಂಥ ಕಾರ್ಯನಿರತರು ನನ್ನಂಥ ಕಾರ್ಯಹೀನನ ಕಡೆಗೆ ಏಕೆ ಬಂದರು ಅಂತ!"

—"ನಾನು ಕಾರ್ಯನಿರತನಲ್ಲ ಎಂಬುದು ನಿನಗೇನು ಗೊತ್ತಿಲ್ಲವೆ ಸ್ಯಪರ್? ನಿನ್ನ ಊಟದಲ್ಲಿ ಪಾಲುಗಾರನಾಗಲೂ ನಾನು ಬಂದಿಲ್ಲ. ನಿನ್ನ ಕೆಲಕೆಲವು ಮಿತ್ರರ ವಿಷಯ ತಿಳಿದುಕೊಳ್ಳಲು ಬಂದಿದ್ದೇನೆ."

"ನನ್ನ ಮಿತ್ರರೇ? ಇಲ್ಲ. ಈಗ ನನಗೆ ಯಾರೂ ಗೆಳೆಯರಿಲ್ಲ. ಗೆಳೆಯರ ಸಂಗತಿಯಲ್ಲಿ ಬಿದ್ದೇ ಸಾಕಷ್ಟು ಅನುಭವಿಸಿದ್ದೇನೆ. ಅರಸರ ಆತಿಥ್ಯವನ್ನು ಅನುಭವಿಸಿ ಬಂದ ಮೇಲೆ ಅವರ ಎಲ್ಲ ಸಂಬಂಧ ಹರಿದುಕೊಂಡು ಬಿಟ್ಟಿದ್ದೇನೆ. ಈಗ ಯಾರ ಗೊತ್ತುಗುರಿಯನ್ನು ನಾನರಿಯೆ."

—"ಇದ್ದೀತು. ಆದರೆ ನಕ್ಲಿಜ್ ಸಿಕ್ಯಾಗೋದಿಂದ ಬಂದು ಎಲ್ಲಿ ಏನು ಮಾಡುತ್ತಿದ್ದಾನೆ ಎಂಬುದು ನಿನಗೆ ನಿಶ್ಚಯವಾಗಿ ಗೊತ್ತಿರಬೇಕು."

—"ಅವನ ಬಗ್ಗೆ ನನಗೆ ಏನೊಂದೂ ಗೊತ್ತಿಲ್ಲ ಮಿ. ಎರೋಸ್ಮಿಥ್."

ನಕ್ಲಿಜನ ಬಗ್ಗೆ ಸ್ಯಪರನಿಂದ ಯಾವ ವಿಷಯವನ್ನೂ ಹೊರಡಿಸಲಾಗಲಿಲ್ಲ. ಘಸವ್ಯಾ ಕಟ್ಟಡದಲ್ಲಿಯ ಪ್ರಯೋಗಶಾಲೆಯಲ್ಲಿಯ ಪರಿಶೋಧನೆಯಿಂದ ಲಂಡನಿನಲ್ಲಿಯ ಚೋರ ಸಂಸ್ಥೆಯೊಡನೆ ಆ ಜನರ ಘನಿಷ್ಠ ಸಂಬಂಧವಿರುವುದೆಂದು ಏರೋಸ್ಮಿಥ್‌ನಿಗೆ ಕಂಡುಬಂದಿತ್ತು. ಚೋರ-ತಸ್ಕರರಿಗೆ ಪರಸ್ಪರ ವಿಷಯ ತಿಳಿದಿರುತ್ತದೆ. ಆದುದರಿಂದ ಸ್ಯಪರನಿಂದ ನಕ್ಲಿಜನ ಸಮಾಚಾರ ಗೊತ್ತಾಗುವುದೆಂಬ ಆಸೆಯಿಂದ ಅವನು ಇಲ್ಲಿಗೆ ಬಂದಿದ್ದ. ಸ್ಯಪರ್ ಬಹು ಕಾಲದಿಂದಲೂ ಎರೋಸ್ಮಿಥ್‌ನನ್ನು ಬಲ್ಲ. ಅವನು ವಿಪನ್ನರ ಬಂಧುವಾದುದರಿಂದ ಅವನ ಬಗ್ಗೆ ಆದರ ವಿಶ್ವಾಸಗಳೂ ಅವನಿಗಿದ್ದವು. ಆದರೆ ನಕ್ಲಿಜನ ಬಗ್ಗೆ ಏರೋಸ್ಮಿಥ್‌ನ ಮುಂದೆ ಯಾವ ಮಾತನ್ನೂ ಹೇಳಲಿಲ್ಲ.

ಬಂದ ದಾರಿಗೆ ಸುಂಕವಿಲ್ಲದೆ ಎರೋಸ್ಮಿಥ್ ತನ್ನ ಮನೆಗೆ ಹೊರಟ. ಅವನ ಕಾರು ಗಿಲ್‌ಫೋರ್ಡ ಬೀದಿಯಿಂದ ಡಬಿ ಬೀದಿಯನ್ನು ಪ್ರವೇಶಿಸುತ್ತಿದ್ದಾಗ ಸಮೀಪದಲ್ಲಿಯೇ ಒಂದು ದೀಪಸ್ತಂಭದ ಅಡಿಯಲ್ಲಿ ಯಾರೋ ನಿಂತಿರುವುದನ್ನು ಕಂಡ. ಕೂಡಲೆ ಎರೋಸ್ಮಿಥ್ ಗಾಡಿಯನ್ನು ತರುಬಿದ. ಆದರೆ ಪಕ್ಕನೆ ತಾನೇಕೆ ಗಾಡಿ ನಿಲ್ಲಿಸಿದೆನೆಂಬುದು ಅವನಿಗೇ ತಿಳಿಯಲಿಲ್ಲ. ಆ ಮನುಷ್ಯ ಆಚೆಗೆ ಮುಖ ಮಾಡಿ ನಿಂತುದರಿಂದ ಆ ಕಾರನ್ನು ಅವನು ನೋಡಲಿಲ್ಲ. ಅವನ ಮೋರೆಯಾದರೂ ಏರೋಸ್ಮಿಥ್‌ನಿಗೆ ಕಾಣಲಿಲ್ಲ. ಆದರೆ ಅವನ ಆಕಾರ—ಪ್ರಕಾರಗಳನ್ನು ನೋಡಿಯೇ ಈ ಮನುಷ್ಯ ತನಗೆ ಪೂರ್ಣ ಪರಿಚಿತನೇನೂ ಅಲ್ಲ ಎಂದೆನಿಸಿತು. ಎನೋ ದುರುದ್ದೇಶದಿಂದಲೇ ಅವನು ಅಲ್ಲಿ—ತಮ್ಮ ಮನೆಯ ಸಮೀಪದಲ್ಲಿ—ನಿಂತಿರಬೇಕೆಂದು ಸಂದೇಹವೂ ಬಂದಿತು.

ಆ ಪಥಿಕನ ದುರುದ್ದೇಶ ಸ್ವಲ್ಪ ಮಟ್ಟಿಗೆ ಗೊತ್ತಾದಂತೆ ಏರೋಸ್ಮಿಥ್‌ನಿಗೆ ಘಕ್ಕನೆ ಎನಿಸಿತು. ಕೂಡಲೆ ಅವನು ಕಾರನ್ನು ದ್ರುತವೇಗದಿಂದ ಮುಂದುವರಿಸಿದ. ಅದರ ಸಪ್ಪಳವನ್ನು ಕೇಳಿ ಪಥಿಕನು ಸರಕ್ಕನೆ ತಿರುಗಿ ನಿಂತ. ಮತ್ತು ತತ್‌ಕ್ಷಣದಲ್ಲಿಯೇ ಅವನು ಜೋರಾಗಿ ಕೈ ಬೀಸಿದುದು ಏರೋಸ್ಮಿಥ್‌ನಿಗೆ ಕಂಡಿತು. ಅದೇ ಹೊತ್ತಿಗೆ ಒಂದು ಮನೆಯ ಬಾಗಿಲು ಕಿಡಿಕಿಗಳ ಕಾಜುಗಳು ಖಣ್‌ಖಣ್ ಝುಣ್‌ಝುಣ್ ಎಂದು ಒಡೆದು ಬಿದ್ದವು. ಪಥಿಕನೂ ಮೆಕ್ಕೆನ್ ಬರ್ಗ ಕೂಟದತ್ತ ಭರದಿಂದ ಓಡಿದನು. ಏರೋಸ್ಮಿಥ್ ಕಾರಿನ ವೇಗವನ್ನು ಪೂರ್ಣಕ್ಕೆ ಏರಿಸಿದ. ಮನೆಯ ಹತ್ತಿರ ಬಂದಾಗ ಅವನಿಗೆ ಅವನ ವಿಪತ್ತು ತಿಳಿದುಬಂದಿತು. ಮನೆಯ ಒಂದು ಭಾಗ ಬಿದ್ದುಬಿಟ್ಟಿತ್ತು. ಕೆಲ ಭಾಗಗಳಲ್ಲಿ ಇಟ್ಟಿಗೆ ಕಟ್ಟಿಗೆಗಳು ಇನ್ನೂ ಬೀಳುತ್ತಲಿದ್ದವು. ಧೂಳು ಗಗನಮಂಡಲವನ್ನು ವ್ಯಾಪಿಸಿತ್ತು.

ಏರೋಸ್ಮಿಥ್ ಕಾರನ್ನು ತರುಬಿ ಕೆಳಗೆ ಜಿಗಿದ. ಧೂಳು ಬಿದ್ದ ಕಣ್ಣುಗಳನ್ನು ಉಜ್ಜಿಕೊಳ್ಳುತ್ತ ಮನೆಯ ಬಾಗಿಲಿಗೆ ಹೋದ. ಅವನು ಒಳಗೆ ಪ್ರವೇಶಿಸಲಿರುವುದನ್ನು ಕಂಡು ಗಸ್ತಿಯವನು ಒಳಗೆ ಹೋಗಬೇಡಿರೆಂದು ಕೂಗಿದ. ಏರೋಸ್ಮಿಥ್ ಅದಕ್ಕೆ ಕಿವಿಗೊಡಲಿಲ್ಲ. ಇದಿರಿನ ಕೋಣೆಯ ಬಾಗಿಲನ್ನು ಅತಿಕ್ರಮಿಸಿದ. ಬಾಗಿಲು ಮೊದಲೇ ಮುರಿದು ಬಿದ್ದಿತ್ತು; ಕೋಣೆಯೂ ಉಧ್ವಸ್ತಪ್ರಾಯವಾಗಿತ್ತು. ಪ್ರಬಲ ಭೂಕಂಪಕ್ಕೆ ಈಡಾದಂತೆ ಆಗಿತ್ತು ಆ ಮನೆಯ ಸ್ಥಿತಿ.

ಮಹಡಿಯ ಮೇಲೆ ಕೋಣೆಗಳಲ್ಲಿ ಕೆಲ ಜನ ಪರಿಚಾರಿಕೆಯರು ಮಲಗಿದ್ದರು. ಅವರೆಲ್ಲ ಗಡಬಡಿಸಿ ಎದ್ದು ನಿರಾಪದ ಸ್ಥಾನದಲ್ಲಿ ಆಶ್ರಯ ಪಡೆಯುವುದಕ್ಕಾಗಿ ಸುತ್ತುಕಡೆ ಅಂಡಲೆಯುತ್ತಿದ್ದರು. ದೊಡ್ಡ ದನಿಯಿಂದ ಕೂಗಿಕೊಳ್ಳುತ್ತಿದ್ದರು. ಏರೋಸ್ಮಿಥ್ ಲಗುಬಗೆಯಿಂದ ಅಟ್ಟವನ್ನೇರತೊಡಗಿದ. ಅವನ ಹಿಂದೆ ಒಬ್ಬ ಪೋಲೀಸನೂ ಹೋದ. ಮೆಟ್ಟಲಿನ ಒಂದು ಬದಿಯಲ್ಲಿ ಮಹಡಿಯ ಕೆಲಭಾಗ ಬಿದ್ದಿರುವುದನ್ನು ಕಂಡು,

"ಅಟ್ಟದ ಈ ಭಾಗದಲ್ಲಿ ಯಾರಾದರೂ ಮಲಗಿದ್ದರೇ ?" ಎಂದು ಪೋಲಿಸ್ ಕೇಳಿದ.

"ಇಲ್ಲ. ಬಿದ್ದಿರುವ ಕೋಣೆ ನನ್ನ ಮಲಗುವ ಕೋಣೆ. ಅದರ ಪಕ್ಕದ್ದು ನನ್ನ ತಂಗಿಯದು. ಸುದೈವದಿಂದ ಅವಳು ಈ ದಿನ ಮನೆಯೊಳಗಿದ್ದಿಲ್ಲ."

ಏರೋಸ್ಮಿಥ್ ಅಟ್ಟದ ಮೇಲಿನ ಇತರ ಕೋಣೆಗಳನ್ನು ನೋಡಿದ. ಅವು ಸುರಕ್ಷಿತವಾಗಿಯೇ ಇದ್ದವು. ಅಲ್ಲಿ ಪರಿಚಾರಿಕೆಯರು ಜೀವದಂಜಿಕೆಯಿಂದ ದಿಕ್ಕೆಟ್ಟು ತಿರುಗುತ್ತಿದ್ದರು. ಅವರಿಗೆ ಮೆಟ್ಟಲಿಳಿದು ಹೋಗುವುದಕ್ಕೂ ಧೈರ್ಯ ವಿಲ್ಲ. ಉಳಿದ ಕೋಣೆಗಳೂ ಬೀಳುವವೆಂಬ ಭಯದಿಂದ ಅಲ್ಲಿರುವುದಕ್ಕೂ ಧೈರ್ಯವಿಲ್ಲ. ಅವರೆಲ್ಲ ರಾತ್ರಿ ವೇಷದಲ್ಲಿದ್ದರು. ಏರೋಸ್ಮಿಥ್ ಅವರಿಗೆ ಧೈರ್ಯ ಕೊಡುತ್ತ, "ನೀವು ನಿಮ್ಮ ನಿಮ್ಮ ಕೋಣೆಗೆ ಹೋಗಿ ಪೋಷಾಕು ಮಾಡಿಕೊಳ್ಳಿರಿ. ನಿಮ್ಮನ್ನು ಯಾವುದೊಂದು ಹೋಟಿಲಿಗೆ ಕಳಿಸಿಕೊಡುತ್ತೇನೆ. ಎಂದರೆ ನಿಮಗೆ ನಿಶ್ಚಿಂತೆಯಾಗುವುದು." ಎಂದು ಹೇಳಿದ.

ಆಷ್ಟೊತ್ತಿಗೆ ಗಸ್ತಿಯವನು ಅಲ್ಲಿಗೆ ಬಂದು, "ಅದ್ಭುತ ಘಟನೆ ಮಹಾ ಶಯರೆ! ಯಾರೋ ಬಾಂಬು ಒಗೆದು ಸರ್ವನಾಶ ಮಾಡಿದ್ದಾರೆ. ಆದರೆ ಇದು ಯಾರ ಕೆಲಸವೆಂದು ಅನುಮಾನ ಮಾಡಬಲ್ಲಿರೇನು ? ಇದಕ್ಕೆ ಯಾರು ಬಾಧ್ಯ ರೆಂದು ಹೇಳಬಹುದೇನು ?" ಎಂದು ಕೇಳಿದ.

ಏರೋಸ್ಮಿಥ್ ಹೇಳಿದ: "ನೀನು ನನ್ನೊಡನೆ ನನ್ನ ಓದುವ ಕೋಣೆಗೆ ನಡೆ. ಮೊದಲು ನಾನು ಸುಪರಿಂಟೆಂಡೆಂಟ್ ಪ್ಯಾರೆಟ್ಟರಿಗೆ ಫೋನ್ ಮಾಡ ಬೇಕು."

ಸ್ಕಾಟ್ಲೆಂಡ್ ಯಾರ್ಡಿನ ಹೆಸರು ಪಡೆದ ತುಬ್ಬುಗಾರರಾದ ಪ್ಯಾರೆಟ್ಟರು ತಮ್ಮ ಕೋಣೆಯಲ್ಲಿ ಮಲಗಿ ನಿದ್ದೆಹೋಗಿದ್ದರು. ಟೆಲಿಫೋನಿನ ಘಂಟಾನಾದ ದಿಂದ ಎಚ್ಚತ್ತು ಎದ್ದುಬಂದು ಏರೋಸ್ಮಿಥ್‌ನಿಗೆ ಓಗೊಟ್ಟರು. ಜರುಗಿದ ವಿಷ ಯವನ್ನು ಸಂಕ್ಷೇಪದಲ್ಲಿ ಕೇಳಿಕೊಂಡು ಅವರೆಂದರು: "ಯಾರೋ ಬಾಂಬು ಹಾಕಿ ಈ ಕೆಲಸ ಮಾಡಿದ್ದಾರೆಯೆ ? ಇದೊಂದು ಹೊಸ ಬಗೆಯೆಂದೇ ತೋರುತ್ತಿದೆ. ನಿಮ್ಮ ಮನೆಗೆ ಬಾಂಬು ಹಾಕುವುದಕ್ಕೆ ಅಂಥ ದ್ವೇಷಿಗಳಾ ದರೂ ನಿಮಗೆ ಯಾರಿದ್ದಾರೆ ? ಎಂಥ ದುರ್ಘಟನೆ ನಡೆದಿದೆಯೆಂದು ನಾನು ಪ್ರತ್ಯಕ್ಷ ಬಂದು ನೋಡಬೇಕೆನ್ನುತ್ತೇನೆ. ನಿಮ್ಮನ್ನು ಆದಷ್ಟು ಬೇಗನೆ ಕಾಣು ತ್ತೇನೆ."

ಮುಂದೆ ಅರ್ಧ ಗಂಟೆಯೊಳಗೇ ಪ್ಯಾರೆಟ್ಟರು ಬಂದು ಏರೋಸ್ಮಿಥ್‌ನ ದೊಡ್ಡದೊಂದು ಕುರ್ಚಿಯಲ್ಲಿ ದೇಹಭಾರವನ್ನಿಟ್ಟರು. ಅವರ ಬಾಯಿಯಲ್ಲಿ ಕರಿಚಿಲುಮೆ ಹೊಗೆಯುಗುಳುತ್ತಿತ್ತು. ಅವರ ಕಣ್ಣುಗಳು ಅರೆಮುಚ್ಚಿದ್ದವು. ಏರೋಸ್ಮಿಥ್ ಹೇಳುವ ಮಾತುಗಳು ಅವರ ಕಿವಿಯೊಳಗೆ ಪ್ರವೇಶಿಸುತ್ತಿರುವಂತೆ ತೋರುತ್ತಿರಲಿಲ್ಲ. ಆದರೆ ಎಲ್ಲವನ್ನೂ ಒಳ್ಳೇ ಮನಸಗೊಟ್ಟು ಕೇಳುತ್ತಿದ್ದರವರು. ತಾನು ಮನೆಗೆ ಬಂದ ಮೇಲೆ ಕಂಡುದನ್ನೆಲ್ಲ ಏರೋಸ್ಮಿಥ್ ವಿವರಿಸಿದ; ತನಗೆ ಯಾರ ಮೇಲೆ ಸಂದೇಹವೆಂಬುದನ್ನು ಮಾತ್ರ ಹೇಳಲಿಲ್ಲ. ಆದರೆ ಬಾರಬಾರಾನ ವಿಷಯವನ್ನು ಎಲ್ಲವನ್ನೂ ಅವರಿಗೆ ಅರುಹಿದ.

ಆಮೇಲೆ ವಿಧ್ವಸ್ತಪ್ರಾಯವಾದ ಮನೆಯ ಎಲ್ಲ ಭಾಗಗಳನ್ನು ಪರೀಕ್ಷಿಸಿ ಪ್ಯಾರೆಟ್ ಏರೋಸ್ಮಿಥ್‌ನಿಗೆ "ಈ ದುರ್ಘಟನೆಯೊದಗಿದ ಮೇಲೆ ಇನ್ನು ಯಾವುದಾದರೂ ನಿರಾಪದ ಸ್ಥಾನದಲ್ಲಿ ವಾಸಿಸಬೇಕೆಂದು ನಿಮಗೆನಿಸುವುದಿಲ್ಲವೇ?—ಇದರ ಕಾರಣವನ್ನು ಗೊತ್ತುಹಚ್ಚುವದಕ್ಕಾಗಿ ನೀವು ಯಥಾಸಾಧ್ಯವಾಗಿ ಪ್ರಯತ್ನಿಸುತ್ತಿರುವಿರಿ ಎಂದೇ ನನ್ನ ನಂಬುಗೆ." ಎಂದರು.

ಬಾರಬಾರಾನನ್ನು ಸುರಕ್ಷಿತ ಸ್ಥಳದಲ್ಲಿ ಇರಿಸಿದ ಮೇಲೆ ವ್ಯಸ್ತನಾಗಬೇಕಾದ ಅಗತ್ಯವಿಲ್ಲವೆಂದು ಏರೋಸ್ಮಿಥ್‌ನಿಗೆ ಎನಿಸಿತ್ತು. ಆದರೂ ನಿಷ್ಕ್ರಿಯನಾಗಿ ಇರುವುದನ್ನು ಅವನ ಮನಸು ಒಪ್ಪುತ್ತಿರಲಿಲ್ಲ. "ಏನು ಮಾಡಬೇಕೋ ನನಗೆ ತಿಳಿಯದಾಗಿದೆ. ನಾನು ಮನೆಯಲ್ಲಿಲ್ಲದ್ದರಿಂದ ಬದುಕಿಕೊಂಡೆ. ಇದೇ ಪರಮ ಭಾಗ್ಯವೆಂದು ನನಗೆನಿಸುತ್ತಿದೆ. ನನ್ನ ಮಲಗುವ ಕೋಣೆ ಬಿದ್ದಿದೆ. ಈ ರಾತ್ರಿ ನಾನಲ್ಲಿ ಮಲಗಿದ್ದರೆ ನನ್ನ ನಿದ್ರೆ ಅಖಂಡ ನಿದ್ರೆಯೇ ಆಗುತ್ತಿತ್ತು." ಎಂದ.

"ಆದರೆ ನಕ್ಲಿಜನನ್ನು ಬಂಧಿಸುವುದು ಸಾಧ್ಯವಾದರೆ, ಅವನಿಂದ ಎಲ್ಲವನ್ನೂ ಹೊರಹೊರಡಿಸಲು ಪ್ರಯತ್ನಿಸುವೆ." ಪ್ಯಾರೆಟ್ ಅಂದರು.

ಈ ಪ್ರಸಂಗವನ್ನು ಕುರಿತು ಯಾವ ಮಾತನ್ನೂ ಆಡದೆ ಏರೋಸ್ಮಿಥ್ ಬೇರೆ ಮಾತನ್ನು ತೆಗೆದ; "ನೀವು ಆ ದಿನ ಒಂದು ಅಪರಾಧ ಶೋಧನೆಯ ಬಗ್ಗೆ ಹೇಳುತ್ತಿದ್ದಿರಲ್ಲ, ಅದೇನಾಯಿತು? ಯಾವನೊ ಒಬ್ಬ ಕೃತ್ರಿಮ ಸುವರ್ಣದ ಗಟ್ಟಿಯನ್ನು ಕಳಿಸಿ ಆಢ್ಯತೆಯಿಂದ ಬರೆದಿದ್ದ—ಕ್ಷುದ್ರ ಧಾತುವಿನಿಂದ ಚೊಕ್ಕ ಬಂಗಾರವನ್ನು ತಯಾರಿಸಿ ಪೇಟೆಯನ್ನು ಧೂಳಡರಿಸಿ ಬಿಡುತ್ತೇನೆ, ಜಗತ್ತಿನಲ್ಲಿ

ಹೊನ್ನಿಗೂ ಮಣ್ಣಿಗೂ ವ್ಯತ್ಯಾಸವಿಲ್ಲದಂತೆ ಮಾಡುತ್ತೇನೆ. ಜಗತ್ತಿನ ಆರ್ಥಿಕ ಇತಿಹಾಸದಲ್ಲಿ ಯುಗಾಂತರವನ್ನೇ ತೆರೆಯುತ್ತೇನೆ ಇತ್ಯಾದಿ. ಈ ಮಾತನ್ನು ಪ್ರಮಾಣಿಸಿ ಕೊಡುವುದಕ್ಕಾಗಿ ಅವನು ಮಾಡಿದ ಸೂಚನೆಯಂತೆ ಏನಾದರೂ ಕೆಲಸ ಆಗಿದೆಯೆ ?"

ಪ್ಯಾರೆಟ್ ಗಂಭೀರ ಸ್ವರದಲ್ಲಿ ಉತ್ತರವಿತ್ತರು: "ಅವನ ಆ ಬಗೆಯ ಸ್ಪರ್ಧೆಯನ್ನು ದುರ್ಲಕ್ಷಿಸುವುದುಂಟೆ ? ಗ್ರೇಟ್ ಬ್ರಿಟನ್ ಮತ್ತು ಡೊಮಿನಿಯನ್ಸ್ ಬ್ಯಾಂಕಿನ ಅಧ್ಯಕ್ಷರಾದ ಸರ್ ಕ್ಲೇಮೆಂಟ್ ಫ್ರೈನರು ಅವನ ಪತ್ರದ ಸೂಚನೆಯಂತೆ ನಿರ್ದಿಷ್ಟ ಸ್ಥಳದಲ್ಲಿ ಹಿತ್ತಾಳೆಯ ಹಳೆಯ ನಸ್ಯದ ಡಬ್ಬಿಯನ್ನು ಇಟ್ಟಿದ್ದರು. ಅದನ್ನು ತಕ್ಕೊಳ್ಳುವುದಕ್ಕಾಗಿ ಒಬ್ಬನು ಏರೋಪ್ಲೇನಿನಿಂದ ಅಲ್ಲಿಗೆ ಬರಲು ನಾವು ಆತನನ್ನು ಹಿಡಿಯಲು ಪ್ರಯತ್ನಿಸಿದೆವು. ಆದರೆ ಅವನನ್ನು ಹಿಡಿಯುವ ಆಸೆಯಿಂದ ಸ್ವಲ್ಪ ದೂರದಲ್ಲಿ ಅಡಗಿ ಕುಳಿತುಕೊಳ್ಳಬೇಕಾಗಿತ್ತು. ಏಕೆಂದರೆ ನಾವು ಹತ್ತಿರ ಇದ್ದಿದ್ದರೆ ಅವನು ಆ ಸ್ಥಳದಲ್ಲಿ ಇಳಿಯುವ ಸಂಭವವಿರಲಿಲ್ಲ. ನಾವು ತುಂಬಾ ಜಾಗರೂಕರಾಗಿದ್ದುದರಿಂದ ಅವನು ನಮ್ಮನ್ನು ನೋಡಲಿಲ್ಲ. ಅವನು ನಿಶ್ಚಿಂತ ಮನಸ್ಸಿನಿಂದ ಏರೋಪ್ಲೇನಿನೊಡನೆ ನಿರ್ದಿಷ್ಟ ಸ್ಥಾನದಲ್ಲಿ ಇಳಿದೊಡನೆಯೇ ಅವನನ್ನು ಹಿಡಿಯುವ ಏರ್ಪಾಡು ಮಾಡಿದ್ದೆವು. ಆದರೆ ಆ ಮನುಷ್ಯ ಎಂಥ ಧೂರ್ತನೆಂಬುದು ಗೊತ್ತಿರಲಿಲ್ಲ. ಅವನ ಮುಖಕ್ಕೆ ಗ್ಯಾಸಿನ ಮೊಗವಾಡವಿತ್ತು. ಅವನ ಏರೋಪ್ಲೇನು ನೆಲ ಮುಟ್ಟುತ್ತಲೇ ನಾವು ಅವನನ್ನು ಹಿಡಿಯಲು ಉದ್ಯೋಗಿಸಿದೆವು. ಆದರೆ ಅವನು ಬಾಂಬು ಹಾಕಿ, ಅದರ ಗ್ಯಾಸಿನಿಂದ ನಮ್ಮ ಕಣ್ಣುಗಳಲ್ಲಿ ನೀರು ಬಂದು ಏನೂ ಕಾಣದಂತೆ ಮಾಡಿದನು. ಅರ್ಧ ಗಂಟೆಯ ವರೆಗೂ ನಾವು ಕಣ್ಣು ಉಜ್ಜಿಕೊಂಡದ್ದೇ ಉಜ್ಜಿಕೊಂಡದ್ದು. ನಮ್ಮ ದೃಷ್ಟಿಶಕ್ತಿ ತಿರುಗಿ ಬಂದಾಗ, ನಮ್ಮ ನೆತ್ತಿಯ ಮೇಲೆ ಅವನ ಏರೋಪ್ಲೇನು ಭರ್ರ್ಗುಡುತ್ತಿದ್ದಿತು. ಆಮೇಲೆ ನೋಡುನೋಡುತ್ತಿರುವಂತೆ ಅದು ಅದೃಶ್ಯವಾಯಿತು."

"ಸರಿ. ನಿಮಗೆ ಚೆನ್ನಾಗಿ ಕೈತೋರಿಸಿದ ಹಾಗಾದರೆ. ಅವನ ವಿಕ್ರಮ ಪ್ರಶಂಸನೀಯವೆಂದು ಒಪ್ಪಿಕೊಳ್ಳಲೇ ಬೇಕು. ಆದರೆ ಸರ್ ಕ್ಲೇಮೆಂಟರ ಹಿತ್ತಾಳೆಯ ಡಬ್ಬಿ ಹೊಳೆಗೆ ಹಾಕಿದಂತಾಯಿತೆ ?" ಏರೋಸ್ಮಿಥ್ ಕೇಳಿದ.

ಪ್ಯಾರಟ್ ಮತ್ತೆ ಗಂಭೀರ ಸ್ವರದಲ್ಲಿಯೇ ಹೇಳಿದರು: "ಹೊಳೆಗೆ ಹಾಕಿ

ದಂತೆ ಏಕೆ ? ಅವನ ಮಾತು ಅಸತ್ಯ, ಹುರುಳಿಲ್ಲದ ಜಂಬ ಎಂದು ಹೇಳುವ ಹಾಗೆಯೇ ಇಲ್ಲ. ಕ್ಲೇಮೆಂಟರಿಗೆ ಮೂರು ದಿನಗಳ ತರುವಾಯ ನಸ್ಯದಡಬ್ಬಿ ತಿರುಗಿ ದೊರೆಯಿತು. ಅದರಲ್ಲಿ ಹಿತ್ತಾಳೆಯಿರಲಿಲ್ಲ. ಇಪ್ಪತ್ತೆರಡು ಕ್ಯಾರೆಟ್ಟಿನ ಶುದ್ಧ ಸುವರ್ಣದ ಡಬ್ಬಿಯಾಗಿ ಮಾರ್ಪಟ್ಟಿತ್ತು. ನೀವು ಕೇಳಿಲ್ಲವೇನು, ಇಂಗ್ಲಂಡಿನ ಪ್ರತಿಯೊಂದು ಬ್ಯಾಂಕಿಗೂ ಇಂಥದೊಂದು ಚಿನ್ನದ ಗಟ್ಟಿಯನ್ನು ಪತ್ರದೊಂದಿಗೆ ಕಳಿಸಿದ್ದಾನೆ. ಕೆಲ ದಿನಗಳ ಹಿಂದೆ ಒಬ್ಬ ಪೋಲಿಸ ನಮ್ಮ ಕಚೇರಿಗೆ ತಂದೊಪ್ಪಿಸಿದ್ದನಲ್ಲ—ಅಂಥದೇ ಪತ್ರ."

ಏರೋಸ್ಮಿಥ್ ಸ್ತಂಭಿತನಾಗಿ ಕುಳಿತುಬಿಟ್ಟಿದ್ದ. ತಾನು ಸಂದೇಹ ಪಟ್ಟಿದ್ದು ಹೀಗೆ ಸತ್ಯವಾಗಿ ಪರಿಣಮಿಸೀತೆಂದು ಅವನು ಕನಸಿನಲ್ಲಿಯೂ ಭಾವಿ ಸಿರಲಿಲ್ಲ. ಅವನು ಹತಾಶಭಾವದಿಂದ ಪ್ಯಾರೆಟರ ಮುಖದ ಕಡೆ ನೋಡಿದ. ಅವರೂ ದುಶ್ಚಿಂತೆಯಿಂದ ಅಧೀರರಾಗಿರುವಂತೆ ಕಂಡರು. ಕೊನೆಗೆ ಅವರೆಂದರು: "ನೋಡಿರಿ ಏರೋಸ್ಮಿಥ್; ಬ್ರಿಟಿಶ್ ರಾಜ್ಯದಲ್ಲಿ ಎಷ್ಟು ಬ್ಯಾಂಕುಗಳು, ಎಷ್ಟು ಸಾವುಕಾರಿ ಸಂಸ್ಥೆಗಳು ಇವೆಯೋ ಅವೆಲ್ಲವುಗಳ ಸಹಕಾರದಿಂದ ಈ ಸರ್ವ ನಾಶವನ್ನು ತಪ್ಪಿಸುವುದಕ್ಕಾಗಿ ಸರಕಾರವು ಪರಮಾವಧಿ ಪ್ರಯತ್ನ ಮಾಡಲು ಟೊಂಕ ಕಟ್ಟಿದೆ; ಅದಕ್ಕಾಗಿ ಸರ್ವ ಶಕ್ತಿಯನ್ನು ಉಪಯೋಗಿಸಲು ನಿರ್ಧ ರಿಸಿದೆ. " ಎಂದು ನುಡಿದು ಅವರು ಸುಮ್ಮನಾದರು. ಸ್ವಲ್ಪ ಹೊತ್ತು ಯೋಚಿಸಿ ಮತ್ತೆಂದರು: "ಹಾಂ, ನರ್ಕ್ಲಿಜನ ಸಂಬಂಧದಲ್ಲಿ ಏನಾದರೂ ಸ್ವಲ್ಪ ಮಾಡಬೇಕು. ಮಿಸ್ ಪೆಲ್ಟನಳನ್ನು ಕರೆದುಕೊಂಡು ಎರಡು ಗಂಟೆಗೆ ಸ್ಕಾಟ್ಲಂಡ್ ಯಾರ್ಡಿಗೆ ಬನ್ನಿರಿ. ಅಲ್ಲಿ ನಾನು ಪೋಲಿಸ್ ಕಮಿಶನರರನ್ನು ಕಾಣುತ್ತೇನೆ. "

## ೭

ಉಳಿದ ಇರುಳಿನ ವಿಶ್ರಾಂತಿಯಿಂದ, ಮರುದಿನ ಬೆಳಗಿನ ಸ್ನಾನದಿಂದ ಬಾರಬಾರಾಗೆ ಸ್ವಲ್ಪ ಆರಾಮವೆನಿಸಿತು. ಕಳೆದ ರಾತ್ರಿಯಲ್ಲಿ ಪಟ್ಟ ಕಷ್ಟ ತೊಂದರೆಗಳ ಅನುಭವದ ಚಿನಗಳು ಅವಳ ಮೊಗದಲ್ಲಿ ಉಳಿದಿರಲಿಲ್ಲ. ಏರೋ

ಸ್ಮಿಥ್ ಅವಳನ್ನು ಚೀಫ್ ಕಮಿಶನರರ ಕಚೇರಿಯಲ್ಲಿ ಸುಪರಿಂಟೆಂಡೆಂಟರಿಗೆ ಭೆಟ್ಟಿ ಮಾಡಿಸಿದ.

ಆಗ ಪ್ಯಾರೆಟ್ ಅವಳಿಗೆ ಹೇಳಿದರು: "ನಿನ್ನೆ ರಾತ್ರಿಯ ಎಲ್ಲ ಘಟನೆಗಳ ವಿಷಯವನ್ನು ಸರ್ ರೆಡ್‌ವ್ಹರ್ಸರಿಗೆ ಬಿಚ್ಚಿ ಹೇಳಿರಿ. ಮಿ. ಎರೋಸ್ಮಿಥ್‌ರ ಮನೆಯನ್ನು ಬಾಂಬಿನಿಂದ ಧ್ವಂಸ ಮಾಡಿದ್ದಾರೆ; ಇದರ ಕಾರಣವೇನೆಂಬುದನ್ನು–ನಿಮಗೆ ಗೊತ್ತಿದ್ದುದನ್ನು ಅಥವಾ ಸಂದೇಹವೆನಿಸಿದುದನ್ನು–ಹೇಳಲಿಕ್ಕೂ ಸಂಕೋಚ ಪಡಲಾಗದು.?

ಅವರ ಮಾತನ್ನು ಕೇಳಿ ಬಾರಬಾರಾನ ಮುಖ ಮ್ಲಾನವಾಯಿತು; ಭಯದಿಂದ ಮೈಗೂದಲು ನೆಟ್ಟಗಾದವು. ಎರೋಸ್ಮಿಥ್‌ನ ಮೋರೆಯ ಕಡೆಗೆ ನೋಡುತ್ತ ಅವಳೆಂದಳು: "ನಿಮ್ಮ ಮನೆಯನ್ನು ಬಾಂಬಿನಿಂದ ಹಾರಿಸಲಾಗಿದೆಯೆ ? ನಾನು ನಿಮ್ಮ ಕಾರಿನಲ್ಲಿ ಆಶ್ರಯ ಪಡೆದ ಕ್ಷಣದಿಂದಲೂ ನಿಮ್ಮಮೇಲೆ ವಿಪತ್ಪರಂಪರೆಗಳು ಬರಲಾರಂಭಿಸಿವೆ. ನಿಮ್ಮೆಲ್ಲರ ಕಷ್ಟಗಳಿಗೂ ಕಾರಣ ನಾನೇ."

—"ಆದರೆ ನಿಮಗೆ ಆಶ್ರಯವನ್ನು ಕೊಟ್ಟುದರಿಂದ ನನಗೆ ಯಾವ ಅನುತಾಪದ ಕಾರಣವೂ ಘಟಿಸಿಲ್ಲ." ಎಂದ ಎರೋಸ್ಮಿಥ್.

ಚೀಫ್ ಕಮಿಶ್ನರರ ಹತ್ತಿರ ಬಾರಬಾರಾ ತನ್ನ ಕಥೆಯನ್ನೆಲ್ಲ ಹೇಳಿದಳು. ಅವರು ಎಲ್ಲವನ್ನೂ ಪೂರಾ ಮನಸುಗೊಟ್ಟು ಕೇಳಿಕೊಂಡು ಮತ್ತೆ ಕೆಲವು ಪ್ರಶ್ನೆಗಳನ್ನು ಕೇಳಿದರು. ಅವಳ ಉತ್ತರಗಳನ್ನು ತಿಳಿದುಕೊಂಡ ಮೇಲೆ "ಮಿ. ಮೆಲ್ಡ್ರಮರನ್ನು ಕೂಡಲೆ ಸೆರೆ ಹಿಡಿಯುವುದಕ್ಕೆ ಅಪ್ಪಣೆ ಕೊಡುತ್ತೇನೆ" ಎಂದು ನುಡಿದು, ಬಳಿಕ ಬಾರಬಾರಾನ ಮೊಗದ ಕಡೆ ನೋಡುತ್ತ ಸಹಾನುಭೂತಿಯಿಂದ ಅವರೆಂದರು: "ಮಿಸ್ ಫೆಲ್‌ಸ್ಟನ್, ನೀವು ಸಹಿಸಿದ ಯಾತನೆ, ಪಟ್ಟ ಕಷ್ಟಗಳನ್ನು ಕೇಳಿ ನನಗೆ ಬಹಳ ದುಃಖವಾಗುತ್ತದೆ. ನಿಮ್ಮನ್ನು ಆ ರೀತಿ ಫಸ್‌ವ್ಯೂದಲ್ಲಿ ಬಂಧಿಸಿಟ್ಟದ್ದು, ನಿಮ್ಮೊಡನೆ ಆ ಜನ ಆ ರೀತಿ ವರ್ತಿಸಿದ್ದು ಶಾಸನ ವಿರುದ್ಧ. ಇದರ ಆದ್ಯೋಪಾಂತ ಎಲ್ಲ ವಿಷಯಗಳನ್ನು ನಾನು ಶೋಧಿಸುತ್ತೇನೆ. ಇಂದೇ ನಕ್ಲಿಜ್, ಸುಲ್ಜ್, ಕಾನ್ ಪ್ರಭೃತಿಗಳನ್ನು ಬಂಧಿಸಲು ಆಜ್ಞೆ ಹೊರಡಿಸುತ್ತೇನೆ."

—"ಆ ಎಲ್ಲ ಕಳ್ಳರು ನಮ್ಮ ತಂದೆಯನ್ನು ಅಂಕೆಯಲ್ಲಿಟ್ಟುಕೊಂಡು ತಮ್ಮಿಚ್ಛೆಯಂತೆ ನಡೆಸಿಕೊಳ್ಳುತ್ತಿದ್ದಾರೆ. ಅವರ ಕೈಯೊಳಗಿಂದ ಆತನನ್ನು ನೀವು ಮುಕ್ತ ಮಾಡುವ ವರೆಗೆ ನನ್ನ ಮನಸಿಗೆ ನೆಮ್ಮದಿಯಿಲ್ಲ." ಎಂದಳು ಬಾರಬಾರಾ.

ಸುಪರಿಂಟೆಂಡೆಂಟ್ ಪ್ಯಾರೆಟ್ ಎಂದರು, "ನಾನೀಗ ಮಿ. ಎರೋಸ್ಮಿಥ್‌ರನ್ನು ಕರೆದುಕೊಂಡು ಹೊರಡುತ್ತೇನೆ. ಮೊದಲು ಫಸ್‌ವ್ಯಾಕ್ಕೆ ಹೋಗಿ ನೋಡುತ್ತೇನೆ—ಅಲ್ಲಿ ಹೊಸ ಸಂಗತಿ ಏನಾದರೂ ಸಿಕ್ಕುತ್ತವೋ ಹೇಗೋ. ಸಾರ್ಜಂಟ್ ಪ್ರಿಂಗಲರನ್ನು ಮೂರು ಜನ ಅನುಚರರೊಂದಿಗೆ ಇಂದು ಬೆಳಗಿನಲ್ಲೇ ಕಳಿಸಿದ್ದೇನೆ ಅಲ್ಲಿಗೆ. ನಕ್ಲಿಜ್‌ನನ್ನು ಹಿಡಿಯುವುದಕ್ಕಾಗಿ ಪ್ರತಿಯೊಂದು ಠಾಣ್ಯಕ್ಕೂ ಆದೇಶ ಕೊಟ್ಟಿದ್ದೇನೆ."

ಬಾರಬಾರಾ ಎರೋಸ್ಮಿಥ್‌ನಿಗೆಂದಳು, "ನಾನು ನಿಮ್ಮನ್ನು ಕಾಯುತ್ತಿರುತ್ತೇನೆ, ಹೊರಗೆ ಆಣೆಕಟ್ಟಿನ ಮೇಲೆ. ಈ ಕೆಲ ದಿನ ಸೆರೆಯಲ್ಲಿದ್ದು ನನ್ನ ಮನಸು ಬಹಳ ವಿರಸವಾಗಿದೆ, ಬಯಲು ಹವೆಯ ಸುಖವನ್ನು ಬಯಸುತ್ತದೆ."

ಅವರೆಲ್ಲರು ಪ್ಯಾರೆಟರ ಆಫೀಸಿಗೆ ಹೋದರು. ಹೊಸ ಸುದ್ದಿ ಯಾವುದೂ ಅಲ್ಲಿರಲಿಲ್ಲ. ಪ್ಯಾರೆಟ್ ಆಫೀಸಿನ ಕಿಡಿಕಿಯ ಬಳಿ ನಿಂತು ಹೊರಗೆ ಆಣೆಕಟ್ಟಿನ ಕಡೆ ನೋಟ ಬೀರಿದರು. ಆಮೇಲೆ "ನಕ್ಲಿಜನ ಪತ್ತೆಯಿಲ್ಲ!" ಎಂದು ಕ್ಷುಬ್ಧ ಸ್ವರದಿಂದ ಉದ್ಗರಿಸಿದರು. ಸಹಸಾ ಆಣೆಕಟ್ಟಿನ ಆ ತುದಿಯಲ್ಲಿ ನದೀತೀರದ ಸಣ್ಣ ಕಲ್ಲುಗೋಡೆಯ ಮೇಲೆ ಯಾರೋ ಕುಳಿತಿರುವುದು ಅವರ ಕಣ್ಣಿಗೆ ಬಿದ್ದಿತು. ಅವನ ಕುಳಿತ ಭಂಗಿ ನೋಡಿದರೆ ಯಾರದೋ ನಿರೀಕ್ಷಣೆಯಲ್ಲಿರುವಂತಿತ್ತು. ಆ ಸಂಶಯದಿಂದಲೇ ಪ್ಯಾರೆಟ್ ಎಂದರು, "ಆ ಮನುಷ್ಯ ಅಲ್ಲಿ ಕೂತು ಏನು ಮಾಡುತ್ತಾನೆ? ನಿರುದ್ಯೋಗಿಯಾಗಿ ತಿರುಗುವವನಂತೆ ಕಾಣುತ್ತಾನೆ. ಅವನ ಉದ್ದೇಶವೇನೋ ತಿಳಿದುಕೊಳ್ಳುವುದು ಅಗತ್ಯ."

ಒಬ್ಬ ಡಿಟೆಕ್ಟಿವ್ ಪೋಲಿಸನನ್ನು—ಅವನ ಹೆಸರು ಯಂಗ್—ಕರೆಕಳುಹಿ, ಅವನು ಒಂದು ಮುಜುರೆ ಮಾಡಿ ನಿಂತುಕೊಳ್ಳಲು ಪ್ಯಾರೆಟ್ ಹೇಳಿದರು: "ಆ ಮನುಷ್ಯ ನದೀ ದಂಡೆಯ ಮೇಲೆ ಎತಕ್ಕೆ ಕೂತಿದ್ದಾನೆ, ತಿಳಿದುಕೊಂಡು ಬಾ. ಅವನನ್ನು ನೋಡಿದರೆ ಮೊದಲೆಲ್ಲಿಯೋ ನೋಡಿದ ಹಾಗೆ

ಎನಿಸುತ್ತದೆ; ಸರಿಯಾಗಿ ಗುರುತು ಹತ್ತಲೊಲ್ಲದು. ಏನಾದರೂ ಹಂಚಿಕೆ ಯಿಂದ ಅವನನ್ನು ನೀನು ಇಲ್ಲಿಗೆ ಕರೆದುಕೊಂಡು ಬಂದರೆ, ನಾನವನ ಮನಸಿ ನೊಳಗಿದ್ದದ್ದನ್ನು ಹೊರಗೆಡಹುತ್ತೇನೆ."

ಯಂಗ್ ಕೂಡಲೇ ಆ ಕೆಲಸಕ್ಕೆ ಹೊರಟುಹೋದ. ಮೆಲ್ಲಮೆಲ್ಲನೆ ನಡೆ ಯುತ್ತ ಆ ಮನುಷ್ಯನ ಹತ್ತರ ಹೋಗಿ ಅವನ ಭಾವಭಂಗಿಯನ್ನು ನಿರೀಕ್ಷಿಸ ತೊಡಗಿದ. ಕಿಟ್ ಏರೋಸ್ಮಿಥ್ ಆ ಮನುಷ್ಯನ ಬಳಿ ಯಂಗ್ ನಿಂತಿರುವು ದನ್ನು ಕಂಡು ಕುತೂಹಲದಿಂದ ಅವರ ಕಡೆಗೇ ನೋಡತೊಡಗಿದ. ಯಂಗನು ಸಂಕಟಕ್ಕೆ ಈಡಾಗುವನೆಂಬ ಭಯದಿಂದ ಅವನು ವಿಚಲಿತನಾದ; ಆದರೂ ಆ ಬಗೆಯ ಭಯಕ್ಕೆ ಕಾರಣವೇನೆಂಬುದು ಅವನಿಗೇ ತಿಳಿಯದು. ಒಂದೆರಡು ನಿಮಿಷಗಳಲ್ಲಿ ಬಾರ್ಬಾರಾ ಸ್ಕಾಟ್ಲೆಂಡ್ ಯಾರ್ಡಿನಿಂದ ಹೊರಟು ನಿದಾನವಾಗಿ ಆಣೆಕಟ್ಟಿನ ಕಡೆಗೆ ಸಾಗಿದಳು. ಅದರ ಮೇಲೆ ನಿಂತುಕೊಂಡು ಹೊಳೆಯ ಮೇಲಿಂದ ಬೀಸುವ ಗಾಳಿಯನ್ನು ಸೇವಿಸಲು ಅವಳ ಮನಸ್ಸು ಇಷ್ಟಪಟ್ಟಿರ ಬಹುದು. ಏರೋಸ್ಮಿಥ್ ಆಕಡೆಗೆ ನೋಡಿ, ಮರುನಿಮಿಷದಲ್ಲಿ ಭಯದಿಂದ ಒಮ್ಮೆಲೆ ಕೂಗಿಕೊಂಡವನೇ ಸ್ಕಾಟ್ಲೆಂಡ್ ಯಾರ್ಡಿನಿಂದ ಹೊರಬಿದ್ದು ಆಣೆ ಕಟ್ಟಿನ ಕಡೆ ಧಾವಿಸಿದ.

ಇಷ್ಟರಲ್ಲಿ ಯಂಗ್ ಆ ಮನುಷ್ಯನೊಂದಿಗೆ ಪರಿಚಯ ಬೆಳೆಸಲಾರಂಭಿ ಸಿದ್ದ. ನಾಲ್ಕೈದು ಮಾತು ಕತೆ ನಡೆದ ಬಳಿಕ ಯಂಗ್ ಏನೋ ವಿಚಾರ ಮಾಡಿಕೊಂಡು ಅವನ ಕಡೆ ಕೈನೀಡಿದ; ಮತ್ತು ಅವನ ಕೈಯನ್ನು ಹಿಡಿದು ಅವನನ್ನು ಗೋಡೆಯಿಂದ ಕೆಳಗಿಳಿಸಲು ಪ್ರಯತ್ನಿಸಿದ. ಆಗ ಪ್ಯಾರೆಟ್ ಏರೋಸ್ಮಿಥ್‌ನ ಕಡೆಗೆ ನೋಡುತ್ತ ಅವನ ವಿಚಿತ್ರ ವರ್ತನೆಗೆ ಕಾರಣವೇನೆಂದು ಚಿಂತಿಸುತ್ತಿದ್ದರು. ಅದು ತಿಳಿಯದೆ ಅತ್ಯಂತ ವಿಸ್ಮಿತರಾಗಿದ್ದರು.

ಯಂಗನ ಪ್ರಯತ್ನ ಫಲಿಸಲಿಲ್ಲ. ಆ ಮನುಷ್ಯ ಕೈಹಿಡಿದು ಸೆಳೆದದ್ದು ನಿಜ; ಆದರೆ ಆ ಕೈ ಒಂದಿಂಚೂ ಕದಲಲಿಲ್ಲ; ಆ ದೇಹ ಅಲುಗಲಿಲ್ಲ. ಪೋಲಿ ಸನು ಅವನ ಕೈಯನ್ನು ಬಲವಾಗಿ ಆಕರ್ಷಿಸಿದ. ಆಗ ಆ ಮನುಷ್ಯನ ಎಡಗೈ ಮುಂದೆ ಬಂದಿತು. ಅವನು ಯಂಗನನ್ನು ಕತ್ತು ಹಿಡಿದು ಮೇಲಕ್ಕೆತ್ತಿ, ಲೀಲಾಮಾತ್ರದಿಂದ ಇನ್ನೊಂದು ಕೈಯನ್ನು ಬಿಡಿಸಿಕೊಂಡು, ನಿಮಿಷಮಾತ್ರ ದಲ್ಲಿ ಅವನನ್ನು ಹೊಳೆಯೊಳಗೆ ಒಗೆದುಬಿಟ್ಟ.

ಅಣೆಕಟ್ಟಿನ ಮೇಲಿಂದ ಈ ರೋಮಾಂಚಕಾರಿ ದೃಶ್ಯವನ್ನು ನೋಡುತ್ತಿದ್ದ ಬಾರಬಾರಾ ಭಯದಿಂದ ಚೀರಿದಳು. ಆದರೆ ಅಲ್ಲಿಯೇ ನದೀ ಗರ್ಭದಿಂದ ಪೋಲಿಸನನ್ನು ಉದ್ಧರಿಸುವ ಉಪಾಯವನ್ನು ನಿಶ್ಚಯಿಸುವುದಕ್ಕಾಗಿ ದಂಡೆಯ ಕಡೆಗೆ ಓಡಿದಳು. ಅಣೆಯ ಮೇಲೆ ಹಲವಾರು ಮಂದಿ ಓಡಾಡುತ್ತಿದ್ದರು. ಯಂಗ್ ನದಿಯಲ್ಲಿ ಒಗೆಯಲ್ಪಟ್ಟುದನ್ನು ನೋಡಿ ಅವರು ಸ್ತಂಭಿತರಾಗಿ ನಿಂತು ಬಿಟ್ಟರು.

ಬಾರಬಾರಾ ನದಿಯ ಕಡೆ ಬರುತ್ತಿರುವುದನ್ನು ಕಂಡು ಆ ಮನುಷ್ಯ ತತ್‌ಕ್ಷಣವೇ ಗೋಡೆ ಬಿಟ್ಟಿಳಿದು ಬಂದ. ಎರಡೇ ನೆಗೆತಗಳಲ್ಲಿ ಅವಳನ್ನು ಸಮೀಪಿಸಿ, ಎರಡೂ ಕೈಗಳಿಂದ ಅವಳ ಎರಡೂ ಭುಜಗಳನ್ನು ಗಟ್ಟಿಯಾಗಿ ಹಿಡಿದ. ಅವನ ಆಕ್ರಮಣದಿಂದ ಬಿಡುಗಡೆ ಹೊಂದಲು ಬಾರಬಾರಾ ಬಹಳ ಸೆಣಸಿದಳು; ಜಯ ದೊರೆಯಲಿಲ್ಲ. ಪುಂಡನು ಅವಳನ್ನು ಹಾಗೆಯೇ ಅಣೆ ಕಟ್ಟಿನ ಇನ್ನೊಂದು ಬದಿಗೆ ಎಳೆದುಕೊಂಡು ನಡೆದ.

ಅಣೆಯ ಹತ್ತಿರ ಟ್ರಾಮ್‌ಲೈನಿನ ಪಕ್ಕದಲ್ಲಿ ಒಂದು ದೊಡ್ಡ ಮೋಟರ್ ಕಾರಿತ್ತು. ಬಾರಬಾರಾನನ್ನು ಅದರಲ್ಲಿ ಹಾಕಿಕೊಂಡು ಪಲಾಯನ ಮಾಡು ವುದು ಆ ಪುಂಡನ ಉದ್ದೇಶವಾಗಿತ್ತು. ಗಾಡಿಯಲ್ಲಿ ಅದರ ಚಾಲಕ ತನ್ನ ಆಸನದಲ್ಲಿ ಕುಳಿತಿದ್ದ. ಪುಂಡನು ಅವಳನ್ನು ಗಾಡಿಯ ಹತ್ತಿರ ಒಯ್ಯುತ್ತಲೂ ಅವನು ಬಾಗಿಲು ತೆರೆದು ಎತ್ತಿ ಒಳಗೆ ಹಾಕಿಕೊಂಡು ಗಾಡಿಯನ್ನು ಬಿಟ್ಟ. ಕೂಡಲೇ ಪುಂಡ ಓಡುವ ಗಾಡಿಯನ್ನು ಜಿಗಿದು ಹತ್ತಿ ಕುಳಿತ. ಗಾಡಿ ಪರ ಮಾವಧಿ ವೇಗದಿಂದ ಹೊರಟಿತು. ಬಾರಬಾರಾ ಕೂಗಿಕೊಳ್ಳಲು ಹವಣಿಸಿ ದಳು. ಅದನ್ನರಿತು ಅವನು ಒಂದು ಕೈಯಿಂದ ಅವಳ ಕತ್ತನ್ನು, ಇನ್ನೊಂದು ಕೈಯಿಂದ ಅವಳ ಬಾಯನ್ನು ಒತ್ತಿ ಹಿಡಿದು, "ಹಾಂ, ಗೊತ್ತಿರಲಿ! ಕೂಗಿಕೊಂ ಡೆಯೆಂದರೆ ಕತ್ತು ಹಿಸುಕಿ ನಿನ್ನನ್ನು ಮುಗಿಸಿ ಬಿಡುತ್ತೇನೆ! ನನ್ನ ಕಣ್ಣಲ್ಲಿ ಮಣ್ಣು ಹಾಕಿ ಓಡಿ ಹೋಗುವೆನೆಂದು ತಿಳಿದಿದ್ದೆಯಲ್ಲವೆ? ಬಾಯಿ ಮುಚ್ಚಿ ಕೊಂಡು ಕೂತಿರು." ಎಂದು ಕರ್ಕಶ ಸ್ವರದಿಂದ ಗದರಿಸಿದ.

ಧ್ವನಿಯನ್ನು ಕೇಳಿ ಬಾರಬಾರಾನ ಮೈಮೇಲೆ ಮುಳ್ಳು ಬಂದವು. ಅದು ಅವಳ ಸುಪರಿಚಿತ ಧ್ವನಿ. ತಾನು ಪುನಃ ಹೀಗೆ ಶತ್ರುಗಳ ಬಲೆಯಲ್ಲಿ ಬೀಳುವೆ ನೆಂದು ಸ್ವಪ್ನದಲ್ಲಿಯೂ ಬಗೆದಿರಲಿಲ್ಲ ಆಕೆ.

ಬಾರಬಾರಾಗೆ ಸಂಕಟ ಒದಗುವುದೆಂದು ಕಿಟ್ ಏರೋಸ್ಮಿಥ್ ಮೊದಲೇ ಶಂಕಿಸಿದ್ದ. ಎಂತಲೇ ಅವನು ಸ್ಕಾಟ್ಲೆಂಡ್ ಯಾರ್ಡಿನಿಂದ ಹಾಗೆ ಕೂಗಿಕೊಂಡು ಓಡಿದ್ದು. ಅವನು ಅಣೆಕಟ್ಟಿನ ಮೇಲೆ ಬರುವ ಹೊತ್ತಿಗೇ ಕಾರು ಬಾರಬಾರಾಳನ್ನು ಹಾಕಿಕೊಂಡು ಮಿಂಚಿನ ವೇಗದಿಂದ ಅದೃಶ್ಯವಾಯಿತು.

ಅಷ್ಟರೊಳಗೆ ನದೀ ತೀರದ ಗೋಡೆಯ ಮೇಲಿಂದ ಎಸೆದ ಲಾಯಿಫ್ ಬೆಲ್ಟಿನ ಸಹಾಯದಿಂದ ಡಿಟೆಕ್ಟಿವ್ ಪೋಲಿಸ್ ಯಂಗ್ ಮೇಲೆ ಬಂದ. ಕಣ್ಣು ಮೂಗಿನೊಳಗೆ ನೀರು ಹೊಕ್ಕು ಅವನು ಕುತ್ತುಸುರು ಬಿಡುತ್ತಿದ್ದ. ಅವನಕಡೆಗೆ ಗಮನ ಕೊಡದೆ ಏರೋಸ್ಮಿಥ್ ಪ್ಯಾರೆಟರ ಚಾವಡಿಯತ್ತ ಓಡಿದ.

" ಸರ್ವ ನಾಶವಾಯಿತು ! " ಏರೋಸ್ಮಿಥ್ ಪ್ಯಾರೆಟರಿಗೆ ತೇಕುತ್ತ ಹೇಳಿದ. " ನಕ್ಲಿಜ್ ಬಾರಬಾರಾಳನ್ನು ಹಿಡಿದುಕೊಂಡು ಹೋಗಿದ್ದಾನೆ. ಶೀಘ್ರವೇ ಅವಳ ಬಿಡುಗಡೆಯ ವ್ಯವಸ್ಥೆ ಮಾಡಿರಿ. ಉಃ, ಎಂಥ ಭಯಂಕರ ಕಾಂಡ ! ಆದರೆ ತಾವೇ 'ನಕ್ಲಿಜನ ಪತ್ತೆ ಇಲ್ಲ' ಎಂದು ಕ್ಷೋಭವನ್ನು ಪ್ರಕಟಿಸುತ್ತಿದ್ದಿರಿ. ಎಂಥ ದುರ್ಭಾಗ್ಯ ಬಾರಬಾರಾಳದು !"

ಕಿಟಕಿಯಲ್ಲಿ ನಿಂತು ಪ್ಯಾರೆಟ್ ಎಲ್ಲವನ್ನೂ ನೋಡಿದ್ದರು. ಆ ಪುಂಡ ಯಂಗನನ್ನು ಹೊಳೆಯಲ್ಲಿ ಎತ್ತಿ ಒಗೆದು, ಬಾರಬಾರಾಳನ್ನು ಎಳೆದುಕೊಂಡು ಹೋಗಿ ಮೋಟಾರಿನಲ್ಲಿ ಹಾಕಿಕೊಂಡು ಪಲಾಯನ ಮಾಡಿದಾಗಲೇ ಅವರು, ಟೆಲಿಫೋನ ಮೂಲಕ ಆ ಕಾರನ್ನು ತಡೆಯುವಂತೆ ಆದೇಶವಿತ್ತಿದ್ದರು. ಏರೋಸ್ಮಿಥ್ ಬಂದು ಹೇಳಿದ ಮೇಲೆ ಆ ಆದೇಶವನ್ನು ಮತ್ತೊಮ್ಮೆ ಪ್ರಚುರ ಪಡಿಸಿ, ಏನಾದರೂ ಎಲ್ಲಿಂದಲಾದರೂ ಉತ್ತರ ಬರುವುದೆಂಬ ಆಸೆಯಿಂದ ರಿಸೀವರನ್ನು ಕಿವಿಗಿಟ್ಟುಕೊಂಡೇ ಕುಳಿತರು. ಆದರೆ ಕೆಲಹೊತ್ತಿನ ಮೇಲೆ ಅವರು ಕೇಳಿದ ಉತ್ತರ ಆಶಾಪ್ರದವಾಗಿರಲಿಲ್ಲ.

"ಆ ಕಾರು ಶ್ವೇತಭವನ ಅಥವಾ ಜಾರ್ಜ್ ಸ್ಟ್ರೀಟ್ ಇವೆರಡರೊಳಗೆ ಒಂದು ದಾರಿಯಲ್ಲಿ ಹೋಗಿರಬೇಕು. ಆದರೆ ಇಂಥ ದಾರಿಯಲ್ಲೇ ಹೋಗಿದೆ ಎಂದು ಖಂಡಿತ ತಿಳಿಯುವುದು ಸಾಧ್ಯವಿಲ್ಲ. ವಿಶೇಷವಾಗಿ, ಮಿಲ್ ಬ್ಯಾಂಕಿನ ಬಳಿ ನಾಲ್ಕೂ ಕಡೆಯಿಂದ ಹಲವಾರು ಬೀದಿಗಳು ಕೂಡಿರುವಲ್ಲಿಂದ ಯಾವುದಾದರೂ ಮೋಟಾರು ಹೊ;ಯಿತೆಂದರೆ ಅದನ್ನು ಅನುಸರಿಸುವುದು ಸಹಜವಲ್ಲ. ಅದನ್ನು ಹುಡುಕುವುದಂತೂ ಇನ್ನೂ ಕಠಿನ." ಪ್ಯಾರೆಟರೆಂದರು.

ಅವರ ಮಾತನ್ನು ಕೇಳಿ ಏರೋಸ್ಮಿಥ್ ಅತ್ಯಂತ ವ್ಯಗ್ರನಾದ; ಉತ್ಕಂಠಿತ ನಾದ. ಆದರೆ ನಿರಾಶನಾಗಲಿಲ್ಲ. "ಹಾಗಿದ್ದರೂ ಕೂಡ ನಾವು ಯಾವುದೊಂದು ಮಾರ್ಗವನ್ನು ಅವಲಂಬಿಸಲೇ ಬೇಕು. ಆಸೆ ತೊರೆದು ಸುಮ್ಮನೆ ಕುಳ್ಳಿರಲಾಗದು. ಈ ಪ್ರಸಂಗದಲ್ಲಿ ನಾನೇನು ಮಾಡಬೇಕು ? ಈ ವಿಷಯ ದಲ್ಲಿ ನನಗೆ ನಿಮ್ಮ ಸಲಹೆ ಬೇಕಾಗಿದೆ." ಎಂದ ಏರೋಸ್ಮಿಥ್.

ಆದರೆ ಪ್ಯಾರೆಟ್ ತುಸು ಹೊತ್ತು ಯಾವ ಮಾತನ್ನೂ ಆಡಲಿಲ್ಲ. ಸ್ತಬ್ಧ ರಾಗಿ ನಿಂತುಬಿಟ್ಟರು. ಅದನ್ನು ಕಂಡು ಏರೋಸ್ಮಿಥ್ ಇನ್ನಷ್ಟು ಚಂಚಲನಾದ. "ತಟ್ಟನೆ ಈ ಕ್ಷಣದಲ್ಲಿ ನಮ್ಮ ಕರ್ತವ್ಯ ಏನೆಂಬುದನ್ನು ತಿಳಿಯಬಯಸುತ್ತೇನೆ." ಅವನೆಂದ.

ಪ್ಯಾರೆಟ್ ಒಂದೆರಡು ನಿಮಿಷ ವಿಚಾರ ಮಾಡಿ, "ಹಾಂ, ಏನಾದರೂ ಮಾಡಲಿಕ್ಕಂತೂ ಬೇಕು. ಆದರೆ ಮಾಡಬೇಕಾದ ಕರ್ತವ್ಯ ಒಂದು ಮಾತ್ರ ಇದೆ—ಆ ಯುವತಿಯನ್ನು ಹುಡುಕಿ ಬಿಡಿಸುವುದು, ಅದೂ ವಿಲಂಬವಿಲ್ಲದೆ ಆಗ ಬೇಕು." ಎಂದರು.

"ನರ್ಕ್ಲಿಜ್ ನಮ್ಮೆಲ್ಲರ ಕಣ್ಮುಂದೆಯೆ ಅವಳನ್ನು ಕದ್ದುಕೊಂಡು ಹೋದ. ಕಳ್ಳ ಯಾವನೆಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ತಲೆ ಕೆಡಿಸಿಕೊಳ್ಳುವ ಅಗತ್ಯವಿಲ್ಲ. ಆದರೆ ನರ್ಕ್ಲಿಜ್ ಅವಳನ್ನು ಯಾವ ಉದ್ದೇಶದಿಂದ ಅಪಹರಿಸಿ ದ್ದಾನೆಂಬುದನ್ನು ತಿಳಿದುಕೊಳ್ಳುವುದು ಅವಶ್ಯ. ಅವನ ಉದ್ದೇಶದ ವಿಷಯ ದಲ್ಲಿ ನಿಮ್ಮ ಅಭಿಪ್ರಾಯವೇನು ?" ಎಂದು ಮತ್ತೆ ವಿಚಾರಿಸಿದ.

ಅದಕ್ಕೆ ಅವರು ಹೇಳಿದರು: "ಯಾರು ಏತಕ್ಕಾಗಿ ಯಾವ ಕೆಲಸ ಮಾಡು ವರೆಂಬುದನ್ನು ಊಹಿಸುವುದು ಇನ್ನೊಬ್ಬರಿಗೆ ಸಾಧ್ಯವಿಲ್ಲ. ಊಹಿಸಿದರೂ ಅದೇ ಸತ್ಯವೆಂದು ನಂಬಲಿಕ್ಕೂ ಆಗುವುದಿಲ್ಲ. ಒಬ್ಬರ ಮನಸಿನೊಳಗಿದ್ದ ದ್ದನ್ನು ಇನ್ನೊಬ್ಬರು ಹೇಗೆ ಹೇಳಬಲ್ಲರು?—ಯಾವ ಉದ್ದೇಶದಿಂದ ಅವರು ಬಾರಬಾರಾನನ್ನು ಹಿಡಿದಿಟ್ಟಿದ್ದರೋ ಅದಿನ್ನೂ ಪೂರಯಿಸದಿದ್ದುದರಿಂದ, ಓಡಿ ಹೋದ ಅವಳನ್ನು ಪುನಃ ಹಿಡಿಯಲು ಪ್ರಯತ್ನಿಸಿದರು; ಪ್ರಯತ್ನ ವಿಫಲವಾ ದರೂ ಅವರು ಉತ್ಸಾಹಗುಂದಿ ಸುಮ್ಮನೆ ಕುಳಿತುಕೊಳ್ಳದೆ ಅವಳನ್ನು ನೆರಳಿ ನಂತೆ ಅನುಸರಿಸಿದರು. ಸಂಧಿ ಸಾಧಿಸಿದೊಡನೆ ಪುನಃ ಅಪಹರಿಸಿದರು. ಆಕೆ

ಅವರ ಗುಪ್ತ ನಿವಾಸವನ್ನು ನೋಡಿದ್ದಳು. ಅಲ್ಲಿ ಅವಳು ತಿಳಿದುಕೊಂಡ ವಿಷಯಗಳನ್ನು ಯಾರಿಗಾದರೂ ಹೇಳಿಯಾಳು, ತಮ್ಮ ಕಾರ್ಯಕ್ಕೆ ವಿಘ್ನ ತಂದಾಳು ತಮ್ಮನ್ನು ಸಂಕಟದಲ್ಲಿ ನೂಕಿಯಾಳು ಎಂಬ ವಿಚಾರದಿಂದಲೇ ಅವರು ಅವಳನ್ನು ಹಿಡಿದೊಯ್ದಿದ್ದಾರೆ. ಅವಳ ಬಾಯಿ ಬಂದು ಮಾಡಬೇಕೆಂಬುದೇ ಅವರ ಉದ್ದೇಶವೆಂದು ನನ್ನ ನಂಬುಗೆ. ನೀವು ದಾರಿಯಲ್ಲಿ ನಕ್ಲಿಜನನ್ನು ಮೂರ್ಛೆಗೊಳಿಸಿ, ಅವನ ಮೋಟರನ್ನು ಕೆಡಿಸಿ, ಬಾರಬಾರಾನನ್ನು ಪಾರು ಮಾಡಿಕೊಂಡು ಬಂದರೂ ಅವನು ಮೂರ್ಛೆ ತಿಳಿದೊಡನೆ ಬೇರೊಂದು ಕಾರಿನಿಂದಲೋ ಅಥವಾ ಮತ್ತೆ ಹೇಗೋ ಲಂಡನಿಗೆ ಬಂದ. ಅವಳನ್ನು ನಿಮ್ಮ ಮನೆಯಲ್ಲಿಯೇ ಇರಿಸಿಕೊಂಡಿರುವಿರೆಂಬ ತಿಳಿವಳಿಕೆಯಿಂದ ನಿಮ್ಮ ಮನೆಯನ್ನು ಬಾಂಬಿನಿಂದ ಹಾರಿಸಿದ. ನೀವಿಬ್ಬರೂ ನಾಶಹೊಂದುವಿರಿ, ತಮ್ಮ ಗುಪ್ತ ವಿಷಯಗಳನ್ನು ಹೊರಗೆಡಹುವ ಬಾಯಿಗಳು ಚಿರಕಾಲ ಮುಚ್ಚುವವು ಎಂದು ಅವನು ಆಶಿಸಿದ್ದ. ಆದರೆ ನೀವು ಬದುಕಿರುವಿರಿ, ಸ್ಕಾಟ್ಲೆಂಡ್ ಯಾರ್ಡಿಗೆ ಬಂದಿರುವಿರಿ ಎಂಬುದು ಅವನಿಗೆ ತಿಳಿಯಿತು. ತಮ್ಮ ಗುಪ್ತ ಸಂಗತಿಗಳು ನಮಗೆ ತಿಳಿದದ್ದೂ ಅವನಿಗೆ ಗೊತ್ತಾಗಿದೆ. ಈಗ ಬಾಯಿ ಬಂದು ಮಾಡಿದರೂ ಪ್ರಯೋಜನವಿಲ್ಲವೆಂದು ತಿಳಿದ ಮೇಲೂ ಬಾರಬಾರಾನನ್ನು ಹೊಂಚು ಹಾಕಿ ಹಿಡಿದೊಯ್ದುದ್ದರಲ್ಲಿ ಪ್ರತಿಹಿಂಸೆಯು ಬೇರೆ ಉದ್ದೇಶವಿಲ್ಲವೆಂದೇ ನನಗೆ ತೋರುತ್ತದೆ. ಇನ್ನೂ ಹೆಚ್ಚಿನ ಕಾಟ ಕೊಡದಿರಲೆಂಬ ವಿಚಾರವೂ ಇರಬಹುದು. ಅವಳಿಗೆ ತಮ್ಮ ಬಗ್ಗೆ ಎಷ್ಟು ಮಟ್ಟಿಗೆ ಗೊತ್ತಾಗಿದೆಯೆಂಬುದನ್ನು ತಿಳಿದುಕೊಳ್ಳುವ ಆಗ್ರಹವಿದ್ದರೂ ಇದ್ದೀತು."

"ಅವನು ಅವಳನ್ನು ಪುನಃ ಘಸವ್ಯೂಕ್ಕೇ ಒಯ್ದಿರಬಹುದೇನು ?" ಏರೋ ಸ್ಮಿಥ್ ಪ್ರಶ್ನಿಸಿದ.

"ಹಾಗೆ ಮಾಡಿದರೆ, ಅದು ಅವನ ದಡ್ಡತನಕ್ಕೇ ಸಾಕ್ಷಿ. ಆಗಲೇ ನಾನು ಹೇಳಿದ್ದು ನಿಮಗೆ ನೆನಪಿದ್ದೀತು—ಕೆಲ ಪೋಲಿಸರೊಡನೆ ಪ್ರಿಂಗಲನನ್ನು ಆ ಮನೆಯನ್ನು ಮುತ್ತಲು ಕಳಿಸಿದ್ದೇನೆ. ಅದನ್ನವರು ಕಾಯುತ್ತಿದ್ದಾರೆ."

ಪ್ಯಾರೆಟ್ ಟೆಲಿಫೋನಿನಲ್ಲಿ ತಮ್ಮ ಸಂದೇಶವನ್ನು ಎಲ್ಲ ಕಡೆಗೂ ಸಾರಿದರು. ಒಂದು ಗಂಟೆಯ ಅವಧಿಯಲ್ಲಿ ಲಂಡನಿನ ತುಂಬ ಪೋಲಿಸರ ಶೋಧನ

ಕಾರ್ಯ ಆರಂಭವಾಯಿತು. ಚೋರ ತಸ್ಕರರ ಬೀಡುಗಳೆಲ್ಲ ಕಾವಲಿಗೆ ಒಳಗಾ ದವು, ಚತುರ್ದಿಕ್ಕುಗಳಲ್ಲಿಯೂ ಗುಪ್ತ ಪೋಲಿಸರು ಹರಿಬಿದ್ದರು.

## ೮

ಸಾರ್ಜಂಟ್ ಪ್ರಿಂಗಲ್ 'ಫಸ್‌ವ್ಯೂ' ಭವನದ ಕಾವಲಿನ ಭಾರವನ್ನು ವಹಿಸಿಕೊಂಡು ಸ್ಕಾಟ್ಲೆಂಡ್ ಯಾರ್ಡಿಗೆ ವರದಿ ಮಾಡಿದ.— 'ಇಲ್ಲಿಂದ ಯಾವ ಮೋಟರ ಗಾಡಿಯೂ ಹೊರಗೆ ಹೋಗಲಿಲ್ಲ. ಇಲ್ಲಿ ಯಾವ ಮನುಷ್ಯ ಪ್ರಾಣಿಯೂ ಅಡ್ಡಾಡುವುದನ್ನು ಕಾಣಲಿಲ್ಲ.' ಈ ಸುದ್ದಿಯನ್ನು ಕೇಳಿ ಎರೋ ಸ್ಮಿಥ್ ಅಧೀರನಾಗಿ ರಹಸ್ಯ ಭೇದಕ್ಕಾಗಿ ಯಥಾಸಾಧ್ಯ ಪ್ರಯತ್ನದಲ್ಲಿ ತೊಡ ಗಿದ. ಆಹಾರ ನಿದ್ರೆಗಳ ಕಡೆಗೂ ಅವನ ಲಕ್ಷ್ಯವಿರಲಿಲ್ಲ. ಅವನು ಮೊದಲಿ ನಿಂದಲೂ ಪ್ಯಾರೆಟರ ಮೇಲೆ ಭರವಸೆಯಿಟ್ಟಿದ್ದರೂ ಪ್ರಕೃತದಲ್ಲಿ ಅವರಿಂದ ಅವ ನಿಗೆ ಯಾವ ಸಹಾಯವೂ ಸಿಕ್ಕಲಿಲ್ಲ. ಇಷ್ಟೇ ಅಲ್ಲ. ಪ್ಯಾರೆಟ್ ಆಗ ಬೇರೊಂದು ಕಾರ್ಯದಲ್ಲಿ ಅತ್ಯಂತ ನಿಮಗ್ನರಾಗಿದ್ದರು. ಅದ್ಭುತ–ಅಸಾಧ್ಯ ಸಾಧನೆಯಿಂದ ಬುದ್ಧಿ ಪ್ರತಿಭೆಯಿಂದ ಸಾಮಾನ್ಯ ಧಾತುವಿನಿಂದ ಬಂಗಾರವನ್ನು ತಯಾರಿಸಿ ವರ್ತಮಾನ ಆರ್ಥಿಕ ರಚನೆಯ ಅಸ್ತಿವಾರವನ್ನೇ ಕೆಡಹಲು ಉದ್ಯು ಕ್ತನಾಗಿರುವ ಆ ಮನುಷ್ಯನನ್ನು ಸೆರೆಹಿಡಿದು, ಅವನ ಸಂಕಲ್ಪವನ್ನು ವ್ಯರ್ಥಗೊ ಳಿಸುವ ವಿಶ್ವಪ್ರಯತ್ನದಲ್ಲಿ ಅವರು ತೊಡಗಿದ್ದರು.

ಪೋಲಿಸ್ ಚೀಫ ಕಮಿಶ್ನರ್ ಕೃತ್ರಿಮ ಸ್ವರ್ಣ ನಿರ್ಮಾಣದ ಪ್ರಯತ್ನ ವನ್ನು ನಿಷ್ಫಲಗೊಳಿಸುವುದಕ್ಕಾಗಿ ಸಕಲ ಶಕ್ತಿಯನ್ನೂ ಪ್ರಯೋಗಿಸುತ್ತಲಿದ್ದರು ಪ್ಯಾರೆಟರು ತರ್ಕಚ್ಛಲದಿಂದ ಅವರಿಗೆ ಹೇಳಿದರು: "ಕೃತಕ ಸುವರ್ಣವನ್ನು ತಯಾರಿಸಿ ತಮ್ಮ ಕಠೋರ ಸಾಧನೆಯ ಸಿದ್ಧಿಯ ಪ್ರಮಾಣವೆಂದು ದೇಶ- ದೇಶಾಂತರಗಳಿಗೆ ಬಂಗಾರದ ಗಟ್ಟಿಗಳನ್ನು ಕಳಿಸುತ್ತಿರುವ ಮನುಷ್ಯನ ಕಾರ್ಯ ಪ್ರಚಾರಣಾ ಪೂರ್ಣವೆಂದು ನಮಗೆನ್ನಲಿಕ್ಕೆ ಬರುವುದಿಲ್ಲ. ಆದರೂ ಅವರ ಕಾರ್ಯದಿಂದ ಸಮಾಜಕ್ಕೇ ತುಂಬಾ ಅನಿಷ್ಟ ಒದಗುವುದೆಂಬುದನ್ನು ಅಲ್ಲಗಳೆ ಯುವಂತಿಲ್ಲ."

ಅದನ್ನು ಕೇಳಿ ಚೀಫ್ ಕಮಿಶ್ನರರು ಉತ್ತೇಜಿತ ಸ್ವರದಿಂದ ಮಾತನಾಡಿದರು: "ಬಂಗಾರದ ಬೆಲೆ ಸೀಸ-ಕಬ್ಬಿಣಗಳಂತೆ ಫಕ್ಕನೆ ಅಗ್ಗವಾಗಿ ಬಿಟ್ಟರೆ, ಜಗತ್ತಿನಲ್ಲಿಯ ವಿಪುಲ ಸುವರ್ಣ ಸಂಚಯದ ಗತಿ ಏನಾಗಬಹುದು? ಅದರ ಬೆಲೆ ಎಷ್ಟಾಗುವುದು? ಬಂಗಾರ ತಾಮ್ರಕ್ಕಿಂತ ಅತ್ತತ್ತ ಆಗಿಬಿಟ್ಟರೆ ಜನರಲ್ಲಿ ತೀವ್ರ ವಿಪ್ಲವದ ಕೋಲಾಹಲವೇಳುವುದು. ಜಗತ್ತಿನಲ್ಲೆಲ್ಲ ಪ್ರಜಾವಿದ್ರೋಹದ ಭೈರವ ಹುಂಕಾರದಿಂದ ಜಲ-ಸ್ಥಲ-ಆಕಾಶಗಳು ಗದಗಂಪಿಸುವವು. ಚಿನ್ನಕ್ಕೆ ಬೆಲೆಯೇ ಇಲ್ಲದಂತಾದರೆ ಎಲ್ಲ ಉದ್ಯೋಗ-ಉದ್ಯಮಗಳು ನಿಂತು ಹೋಗುವವು. ಕೃಷಿ, ಶಿಲ್ಪ, ವಾಣಿಜ್ಯಾದಿಗಳು ನಷ್ಟವಾಗಿ ಮಾನವಜಾತಿಯ ಪ್ರಗತಿ ಕುಂಠಿತವಾಗುವುದು."

ಅಂದಿನಿಂದ ಸ್ಕಾಟ್ಲೆಂಡ್ ಯಾರ್ಡು, ಹೋಮ್ ಆಫೀಸು ಮತ್ತು ಬ್ಯಾಂಕುಗಳ ಸಂಘ—ಮೂರೂ ಒಟ್ಟಾಗಿ ತಮ್ಮ ಶಕ್ತಿಸರ್ವಸ್ವಗಳನ್ನು ಮುಪ್ಪುರಿಗೊಳಿಸಿ ಜಗತ್ತಿನ ಆ ಮಹಾಶತ್ರುವನ್ನು ನಿಪಾತಗೊಳಿಸುವುದಕ್ಕಾಗಿ ಹೋರಾಟ ಹೂಡಿದವು. ನೈಜ ಸುವರ್ಣವನ್ನು ವಿಶ್ವದ ಸಾರ್ವಭೌಮ ಪಟ್ಟದಿಂದ ತಳ್ಳಿ, ತಾನು ನಿರ್ಮಿಸಿದ ಕೃತ್ರಿಮ ಸುವರ್ಣವನ್ನು ಅಲ್ಲಿ ಪ್ರತಿಷ್ಠೆ ಮಾಡುವುದಕ್ಕಾಗಿ ತನ್ನ ಅಸಾಧಾರಣ ಕರ್ತೃತ್ವವನ್ನು ಅತ್ಯಂತ ಸ್ಪರ್ಧೆಯಿಂದ ಘೋಷಿಸುತ್ತಿರುವ ಆ ಮನುಷ್ಯನ ಅಸಾಧ್ಯ ಸಾಧನದಲ್ಲಿ ಲೋಪದೋಷಗಳನ್ನು ಶೋಧಿಸಲಾರದೆ ಅವನನ್ನು ಜಗತ್ತಿನ–ಮಾನವ ಜಾತಿಯ ಶತ್ರುವೆಂದು ಬಗೆದು, ಸಾಮಾನ್ಯಕೊಲೆ ಸುಲಿಗೆಗಾರರಂತೆ ಕಠೋರವಾಗಿ ಶಿಕ್ಷಿಸಲು ಅತ್ಯಾತುರರಾದರು. ಅವನ ಕಠಿನ ಅನುಷ್ಠಾನದ ಸಿದ್ಧಿಯನ್ನು ವ್ಯರ್ಥಗೊಳಿಸುವುದಕ್ಕಾಗಿ ರಾಜದಂಡವು ಉದ್ಯತವಾಯಿತು.

ಆಮೇಲೆ ಪ್ಯಾರೆಟ್ ಏರೋಸ್ಮಿಥ್ ಭೆಟ್ಟಿಯಾದಾಗಲೆಲ್ಲ ಬಾರಬಾರಾನ ಬಿಡುಗಡೆಯ ವಿಷಯದಲ್ಲಿ ಯಾವ ಪರಾಮರ್ಶೆಯನ್ನೂ ಮಾಡದೆ, ಖೊಟಿ ಬಂಗಾರವನ್ನು ಮಾಡುವ ಉದ್ಯೋಗದಲ್ಲಿ ಸಾಫಲ್ಯವನ್ನು ಪಡೆದಿದ್ದ ಆ ಮನುಷ್ಯನ ಅನೇಕ ಸಂಗತಿಗಳನ್ನು ಅತ್ಯುತ್ಸಾಹದಿಂದ ಹೇಳುತ್ತಾ ಚರ್ಚಿಸುತ್ತಿದ್ದರು. ಬಾರಬಾರಾ ನಕ್ಲಿಜನಿಂದ ಪುನಃ ಬಂಧಿತಳಾದ ಮರುದಿನ ಪ್ಯಾರೆಟರ ದರ್ಶನವಾದಾಗ ಏರೋಸ್ಮಿಥ್‌ನನ್ನು ಅವರು ಕೇಳಿದರು: "ನೆನಪಿದೆಯೇ, ನೀವೊಂದು ದಿನ ಪೋಲಿಸ್ ಸ್ಟೇಶನ್ನಿನ ಒಬ್ಬ ಸಾರ್ಜಂಟನ—ಅವನ ಹೆಸರು ಲುಕಾಸ್—

ವಿಷಯವಾಗಿ ಹೇಳಿದ್ದಿಲ್ಲವೇ? ಅವನು ತನ್ನ ಕೈಕೆಳಗಿನ ಒಬ್ಬ ಪೋಲಿಸನಿಗೆ ಒಂದು ಬ್ಯಾಂಕಿನೆದುರು ಸಿಕ್ಕಿದ್ದೆಂದು ಹೇಳಿ ಒಂದು ಬಂಗಾರದ ಗಟ್ಟಿಯನ್ನು ತಂದುಕೊಟ್ಟಿದ್ದ."

"ಹೌದು, ನೆನಪಿದೆ." ಏರೋಸ್ಮಿಥ್ ಹೇಳಿದ. ಆದರೆ ಅವನ ಮನಸಿನಲ್ಲಿ ಬೇರೆ ವಿಚಾರ ನಡೆದಿತ್ತು.

"ಅವನು ಹೋಗಿದ್ದಾನೆ." ಪ್ಯಾರೆಟ್ ಎಂದರು.

"ಹೋಗಿದ್ದಾನೆ? ಹಾಗೆಂದರೆ?"

"ಎಂದರೆ ಅಂತರ್ಧಾನ."

"ಎಂದರೆ ಅವನು ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಾನೆಯೆ?"

"ತಪ್ಪಿಸಿಕೊಂಡು ಬಿಟ್ಟಿದ್ದಾನೆ ಅಂತೂ. ಇಂದು ಮುಂಜಾನೆ ೯ಗಂಟೆಗೆ ಅವನು ಕೆಲಸಕ್ಕೆ ಬರಬೇಕಾದದ್ದು; ಆದರೆ ಹನ್ನೊಂದೂವರೆಗೆ ಟೆಲಿಫೋನಿನಿಂದ ತಿಳಿದು ಬಂತು.—ಅವನಿನ್ನೂ ಬಂದೇ ಇಲ್ಲವೆಂದು. ಅವನ ಮನೆ ಎಲ್ಲೆಂಬುದನ್ನು ವಿಚಾರಿಸಲಾಗಿ ತಿಳಿದುಬಂದ ಸಂಗತಿಯಿಂದ ದಂಗಾಗಿ ಬಿಟ್ಟೆ—ಅವನ ಮನೆ ಈಗ ಎಲ್ಲಿರಬಹುದು ಸ್ವಲ್ಪ ಊಹಿಸಿ ಹೇಳಿರಿ ನೋಡುವ."

ಏರೋಸ್ಮಿಥ್‌ನ ಮನಸ್ಸು ಬಾರಬಾರಾನ ಯೋಚನೆಗಳಿಂದಲೇ ತುಂಬಿ ಹೋಗಿತ್ತು. "ನಾನು ಊಹಿಸುವುದಕ್ಕಿಂತ ನೀವೇ ಹೇಳುವುದು ಬಲು ಸಹಜ." ಅನ್ಯಮನಸ್ಕ ಭಾವದಿಂದ ಅವನು ಉತ್ತರವಿತ್ತ.

"ಆಲ್ಬಾನಿಯಲ್ಲಿ."

ಏರೋಸ್ಮಿಥ್ ವಿಸ್ಮಯದಿಂದ ಪ್ಯಾರೆಟರ ಮೋರೆ ನೋಡಿದ.

ಪ್ಯಾರೆಟ್ ಹೇಳತೊಡಗಿದರು: "ಅವನ ಒಂದು ತಿಂಗಳ ಸಂಬಳವೇ ಒಂದು ವಾರದ ಮನೆಬಾಡಿಗೆಗೆ ಹೋಗುತ್ತದೆ. ಆದುದರಿಂದ ಅವನು ಜೀವನ ನಿರ್ವಾಹವನ್ನು ಹೇಗೆ ಮಾಡುತ್ತಿದ್ದಾನೆಂದು ಅರಿತುಕೊಳ್ಳಲುನನ್ನ ಮನಸ್ಸು ಆತುರಪಟ್ಟಿತು. ಅರ್ಧಗಂಟೆಯ ಪರಿಶೀಲನೆಯ ಅನಂತರ, ಇನ್ನು ಕೆಲಕಾಲ ಅವನು ನೋಕರಿ ಮಾಡದಿದ್ದರೂ ನಡೆಯುತ್ತದೆ ಎಂದು ತಿಳಿಯಿತು. ಆ ಬಂಗಾರದ ಗಟ್ಟಿಯಲ್ಲಿ ಅರ್ಧವನ್ನು ಅಪಹರಿಸಿ ಅವನು ದೊಡ್ಡ ಮನುಷ್ಯನಾಗಿ ಬಿಟ್ಟಿದ್ದಾನೆ. ಆಮೇಲೆ ಕಾನ್ಸ್ಟೆಬಲ್ ಹಜೆಸನ ಬಗ್ಗೆ ವಿಚಾರಣೆಮಾಡಿದೆ—

ಕೃತಕ ಬಂಗಾರದ ಡಬ್ಬಿಯ ಪಾರ್ಸಲನ್ನು ತಂದುಕೊಟ್ಟವನು ಅವನೇ....
ಫರಾರಿ ಎಂದು ತಿಳಿದು ಬಂದಿತು."

"ಇದರರ್ಥ ಏನು?"

"ಅವನು ಸಂಕಟದಲ್ಲಿ ಸಿಕ್ಕಿರಬೇಕೆಂದು ತೋರುತ್ತದೆ."

ಬಾರಬಾರಾನ ಸಂಬಂಧವಾಗಿ ಏನೇನೋ ವಿಚಾರ ಪರಾಮರ್ಶೆ ಮಾಡಬೇಕೆಂದು ಏರೋಸ್ಮಿಥ್ ಬಂದಿದ್ದ. ಪ್ಯಾರೆಟ್ ಆ ಮಾತನ್ನು ಎತ್ತುವುದಕ್ಕೇ ಆಸ್ಪದ ಕೊಡಲಿಲ್ಲ. ಅವನು ಮನಸಿಗೆ ತುಂಬಾ ಬೇಜಾರು ಮಾಡಿಕೊಂಡು ಅವರ ಕಚೇರಿಯಿಂದ ಹೊರಟುಬಂದ.

ಒಂದೆರಡು ದಿನಗಳ ತರುವಾಯ ಏರೋಸ್ಮಿಥ್ ಆಕ್ಸಫರ್ಡ್ ಸ್ಟ್ರೀಟಿನಲ್ಲಿ ಹೋಗುತ್ತಿದ್ದಾಗ ಕಂಡ ಒಂದು ದೃಶ್ಯ ಅವನಿಗೆ ಅದಮ್ಯ ಆಶ್ಚರ್ಯವನ್ನುಂಟು ಮಾಡಿತು. ಬಾರಬಾರಾನನ್ನು ಹುಡುಕುವುದಕ್ಕಾಗಿ ಬಹಳ ಕಡೆ ತಿರುಗಾಡಿದ್ದ. ಅವನ ದೇಹ ಅವಸನ್ನವಾಗಿತ್ತು, ಕಣ್ಣುಗಳು ನಿದ್ದೆಯಿಂದ ಮುಚ್ಚಿಕೊಳ್ಳುತ್ತಿದ್ದವು. ಈ ಅವಸ್ಥೆಯಲ್ಲಿ ಅವನು ಆಕ್ಸಫರ್ಡ್ ಸ್ಟ್ರೀಟಿಗೆ ಬಂದಾಗ ಪ್ರಭಾತ ಸಮಯ. ಆದರೆ ಸೂರ್ಯೋದಯವಾಗುವ ವರೆಗೂ ಅವನು ಅವಳನ್ನು ಹುಡುಕುವ ಕೆಲಸ ಬಿಡಲಿಲ್ಲ. ಅವನು ಕಾರಿನಲ್ಲಿ ಹೊರಟಿದ್ದ. ಪಕ್ಕದ ಒಂದು ಓಣಿಯಿಂದ ಇನ್ನೊಂದು ಕಾರು ಬಂದು ಅವನ ಕಾರಿಗೆ ಡಿಕ್ಕಿ ಹೊಡೆಯುವುದರಲ್ಲಿತ್ತು. ಏರೋಸ್ಮಿಥ್ ತಟ್ಟನೆ ನೀಟಾಗಿ ಕುಳಿತು ಬ್ರೇಕ್ಸು ಜಗ್ಗಿ ಗಾಡಿಯನ್ನು ನಿಲ್ಲಿಸಿದ. ಅವನ ನಿದ್ದೆ ಹಾರಿಹೋಯಿತು.

ಕ್ಷಣತರುವಾಯ ಏರೋಸ್ಮಿಥ್ ಕಾರಿನ ಹೊರಕ್ಕೆ ಮುಖಚಾಚಿ ಬೀದಿಯ ಕಡೆ ನೋಡಿದ. ಆಗ ಅವನ ನೋಟವನ್ನು ಸೆಳೆದದ್ದು ಸದರ್ನ್‌ದಿಂದ ನಾರ್ದರ್ನ್ ಬ್ಯಾಂಕಿನ ಶಾಖೆಯ ಕಟ್ಟಡ. ವಿಶಾಲವಾದ ಸೋಪಾನ ಶ್ರೇಣಿ ಬೀದಿಯಂಚಿನ ವರೆಗೂ ಹರಡಿಕೊಂಡಿತ್ತು. ಅದರ ಮೆಟ್ಟಿಲೊಂದರ ಮೇಲೆ ಕಳ್ಳ ಸ್ಯಪರ್ ಕಾಣಿಸಿದ. ಆಫೀಸಿನಿಂದ ಹೊರಬಿದ್ದು ಅವನು ಕೆಳಗಿಳಿದು ಬರುತ್ತಿದ್ದ.

ಬ್ಯಾಂಕುಗಳಲ್ಲಿ ಕಳವು ಮಾಡುವುದೇ ಮೊದಲು ಸ್ಯಪರನ ಜೀವನೋಪಾಯವಾಗಿತ್ತು. ಆದರೆ ದೀರ್ಘಾವಧಿಯ ಶಿಕ್ಷೆಯನ್ನು ಅನುಭವಿಸಿದ ಮೇಲೆ ಅವನು ಆ ದಾರಿ ಬಿಟ್ಟಿದ್ದ. ಬ್ಯಾಂಕಿನ ಹಣ ಅವನಿಗೆ ಈಗ ರುಚಿಸುತ್ತಿರಲಿಲ್ಲ.

ಈಚೆಯ ಕಾಲದಲ್ಲಿ ಅವನ ವೇಷಭೂಷಣದಲ್ಲಿ ಕೊಂಚವೂ ಪಾರಿಪಾಟ್ಯವಿರ ಲಿಲ್ಲ. ಆದರೆ ಈ ದಿನ, ಬ್ಯಾಂಕಿನ ಮೆಟ್ಟಿಲ ಮೇಲೆ ಕಂಡ ಸ್ಯಪರನ ಉಡಿಗೆ ತೊಡಿಗೆಗಳ ಠೀವಿ ಏರೋಸ್ಮಿಥ್‌ನನ್ನು ಬೆರಗುಗೊಳಿಸಿತು. ತನ್ನ ಕಣ್ಣೇ ಕೆಟ್ಟಿ ವೆಯೋ ಎನಿಸುವಷ್ಟು ಪರಿವರ್ತನೆ! ತಲೆಯ ಹ್ಯಾಟಿನಿಂದ ಕಾಲಿನ ಬೂಟಿನ ವರೆಗೆ ಎಲ್ಲವೂ ಹೊಸವು, ಬೆಲೆಯುಳ್ಳವು, ಒಳ್ಳೇ ಬೆಡಗಿನವು. ಬೆರಳಲ್ಲಿ ಪಚ್ಚೆ ಹರಳಿನ ಉಂಗುರ. ಹರಳು ಮಿನುಗುತ್ತಿತ್ತು. ಈ ಬಗೆಯ ಹರಳು ಖೊಟ್ಟಿ-ಬರೀ ಕಲ್ಲು, ಎಂದೇ ಏರೋಸ್ಮಿಥ್ ಭಾವಿಸಿದ. ಸದ್ಯ ಕ್ಷೌರಿತ ಮುಖ, ಆದರಲ್ಲಿ ಒಂಬತ್ತು ಇಂಚುದ್ದದ ಸಿಗಾರು.

ಏರೋಸ್ಮಿಥ್ ಗಾಡಿ ನಿಲ್ಲಿಸಿ, ಹೊರಗೆ ಮುಖ ಚಾಚಿ ಸ್ಯಪರ್‌ನನ್ನು ಕರೆದ. ಅವನು ಸ್ವಲ್ಪ ಕುಂಠಿತ ಭಾವದಿಂದಲೇ ಕಾರಿನ ಬಳಿ ಬಂದ. ಅಂಥ ಠೀವಿಯ ಉಡಿಗೆ ತೊಡಿಗೆಯಲ್ಲಿ ಏರೋಸ್ಮಿಥ್‌ನ ಎದುರಿಗೆ ಬರಲು ಅವನ ಮನಸು ಮುದುಡಿಕೊಳ್ಳುತ್ತಿತ್ತು. ಏಕೆಂದರೆ ಅವನ ತಳಬುಡ ಎಲ್ಲವೂ ಏರೋ ಸ್ಮಿಥ್‌ನಿಗೆ ಗೊತ್ತಿತ್ತು.

“ಇದೇನು ವಿಲಕ್ಷಣ! ಇಷ್ಟೇಕೆ ಉಡಿಗೆ ತೊಡಿಗೆಯ ಆಡಂಬರ? ಪೂರಾ ಪಲ್ಲಟವಾಗಿ ಬಿಟ್ಟಿದ್ದೀ. ಏನು ಉದ್ದೇಶ?” ಏರೋಸ್ಮಿಥ್ ಕೇಳಿದ.

ಸ್ಯಪರ್ ಅವನ ಮೋರೆಯ ಕಡೆ ನೋಡಿ ವಿನೀತಭಾವದಿಂದ ನುಡಿದ: “ನಮಸ್ಕಾರ, ಮಿ. ಏರೋಸ್ಮಿಥ್!”

“ಒಮ್ಮೆಲೆ ಎಲ್ಲಿಯೋ ದೊಡ್ಡ ಗಂಟು ಹತ್ತಿತೇನೋ ಕೈಗೆ ಅಲ್ಲವೆ?” ಏರೋಸ್ಮಿಥ್ ಮತ್ತೆ ಕೇಳಿದ.

ಸ್ಯಪರ್ ಹಲ್ಲು ಕಿರಿದು ನಗುವ ಭಂಗಿಯಲ್ಲಿ ಉತ್ತರವಿತ್ತ: “ನಿಮ್ಮ ಅನು ಮಾನ ಸುಳ್ಳಲ್ಲ ಮಿಸ್ಟರ್. ಆಗಾಗ ನಿಮಗೆ ನಮ್ಮ ಮುಪ್ಪಿನ ಕಕ್ಕನ ವಿಷಯ ಹೇಳುತ್ತಿದ್ದೆನಲ್ಲ—ಆ ಮುದುಕ—”

—“ನಿಮ್ಮ ಕಕ್ಕ ಯಾರು? ಎಲ್ಲಿ, ಅವನ ವಿಷಯ ನನ್ನ ಮುಂದೆ ಒಮ್ಮೆಯೂ ಹೇಳಿಲ್ಲವಲ್ಲ!” ಏರೋಸ್ಮಿಥ್ ಅಚ್ಚರಿಯಿಂದ ನುಡಿದ.

—“ನಿಮಗೆ ಹೇಳಿಲ್ಲವೆ? ಎಂಥ ಮರವು ನನ್ನದು! ನಾನು ಹೇಳಿದ್ದು ಮಾತ್ರ ಖಂಡಿತ—ಆದರೆ ನಿಮಗೆ ಹೇಳಿರದೆ ಮತ್ತೆ ಯಾರಿಗೋ ಹೇಳಿದಂತೆ

ಎನಿಸುತ್ತದೆ. ಇರಲಿ, ಅದರಲ್ಲೇನೂ ತಪ್ಪಿಲ್ಲ.—ನಮ್ಮ ಆ ಮುದಿ ಕಕ್ಕ ಮೊನ್ನೆ ಅಕಸ್ಮಾತ್ ತೀರಿಕೊಂಡರು."

—"ಓಹೋ, ಅವರ ಮರಣದ ಬಗ್ಗೆ ದುಃಖ ಸೂಚಿಸುವ ರೀತಿಯೋ ಇದು! ಮುದುಕ ಕಕ್ಕ ಸತ್ತಿದ್ದಾರೆ, ಅವರಿಗಾಗಿ ಒಳ್ಳೇ ಆಡಂಬರದಿಂದಲೇ ದುಃಖಪ್ರದರ್ಶನ ಮಾಡಬೇಕು ತಾನೆ! ನನಗೆ ಮೊದಲೇ ತಿಳಿಯಲಿಲ್ಲ; ನನ್ನದೇ ದಡ್ಡತನ."

—"ಅವರು ತಮ್ಮ ಸೊತ್ತನ್ನೆಲ್ಲ ನನಗೆ ಕೊಟ್ಟು ಹೋಗಿದ್ದಾರೆ. ಈ ವರೆಗೂ ತುಂಬಾ ಕಷ್ಟ ಅನುಭವಿಸಿದೆ,—ಕೋಟಿದ್ದರೆ ಬೂಟಿಲ್ಲ, ಬೂಟಿದ್ದರೆ ಕೋಟಿಲ್ಲ; ಎಷ್ಟೋ ದಿನ ಹೊಟ್ಟೆತುಂಬ ಊಟವೂ ಇಲ್ಲ. ಹೀಗೆಯೇ ನನ್ನ ದಿನ ಕಳೆದಿವೆ. ಇನ್ನು ಉಳಿದಷ್ಟು ದಿನಗಳನ್ನಾದರೂ ಚೆನ್ನಾಗಿ ಉಂಡು ಉಟ್ಟು ಸುಖವಾಗಿ ಕಳೆಯೋಣ ಎಂದು ಅಪೇಕ್ಷೆಯಾಯಿತು. ಕೂದಲಿಗೆ ಕಪ್ಪು ಹಚ್ಚುವ ವಯಸ್ಸು ಆಗಿದೆ ಅಲ್ಲವೆ?—ನಾನು ಆ ಮನೆಯನ್ನೂ ಬಿಡುವವ ನಿದ್ದೇನೆ. ಸೊಗಸಾಗಿ ಕಾಲ ಕಳೆಯುವುದಕ್ಕೆ ತಕ್ಕ ಒಂದು ಮನೆಯನ್ನು ನೋಡಿದ್ದೇನೆ. ಕಕ್ಕನ ಹಣವನ್ನು ವೆಚ್ಚ ಮಾಡಿಯೇ——"

"ನಿಮ್ಮ ಕಕ್ಕ ಎಲ್ಲಿರುತ್ತಿದ್ದರು?" ನಡುವೆಯೇ ಏರೋಸ್ಮಿಥ್ ಪ್ರಶ್ನಿಸಿದ.

ಏನೆಂದು ಉತ್ತರ ಕೊಡಬೇಕೆಂದು ಸ್ಯಪರನಿಗೆ ತಟ್ಟನೆ ತೋಚಲಿಲ್ಲ. ಕೆನ್ನೆಯನ್ನು ತಿಕ್ಕಿಕೊಳ್ಳುತ್ತ ಅವನೆಂದ: "ಆಂ ಊ, ಏನೆಂದಿರಿ? ಕಕ್ಕ ಎಲ್ಲಿದ್ದ ರೆಂದಿರಾ? ಹನ್‌ವ್ಯೂದಲ್ಲಿದ್ದರು."

"ಅವರ ಆಸ್ತಿ ಪಾಸ್ತಿ ಇರುವುದು ಎಲ್ಲವೂ ಅಲ್ಲಿಯೇನೆ? ನೀನು ಕೂಡ ಮುಂದೆ ಅಲ್ಲಿಯೇ ವಾಸಮಾಡಬೇಕಾದೀತೆಂದು ಕಾಣುತ್ತದೆ?"

"ನೋಡಬೇಕು. ಇನ್ನೂ ಏನನ್ನೂ ಗೊತ್ತು ಮಾಡಿಲ್ಲ."

ಆ ಧೂರ್ತ ಚೋರನ ಸುಳ್ಳು ಮಾತುಗಳನ್ನು ಇನ್ನು ಕೇಳುವುದಕ್ಕೆ ಏರೋಸ್ಮಿಥ್‌ನ ಮನಸಿಗೆ ಅಪ್ಪಣೆ ಕೊಟ್ಟು, ತನ್ನ ಹಾದಿ ತಾನು ಹಿಡಿದ. ಸ್ಯಪರನ ಈ ವೇಷ ಪರಿವರ್ತನೆಯ ಕಾರಣವನ್ನು ಕುರಿತು ಯೋಚಿಸುತ್ತ ಏರೋಸ್ಮಿಥ್ ತನ್ನ ಬೀಳ್ಮನೆಯನ್ನು ತಲುಪಿದ. ಅಲ್ಲಿ ಸ್ನಾನ ಮಾಡಿ ಬಟ್ಟೆ ಬದಲಿಸಿ ಅವನು ಮತ್ತೆ ಕಾರಿನಲ್ಲಿ ಹೊರಹೊರಟ. ಮೊದಲು ಸದರ್ನ್ ಆ್ಯಂಡ ನಾರ್ದರ್ನ್ ಬ್ಯಾಂಕಿಗೆ ಹೋಗಿ ಅದರ ವ್ಯವಸ್ಥಾಪಕರನ್ನು ಕಂಡ.

ವ್ಯವಸ್ಥಾಪಕ ಅತ್ಯಂತ ಕಾರ್ಯಶೀಲ ಮನುಷ್ಯ. ಮೊದಲು ಏರೋಸ್ಮಿಥ್‌ನಿಗೆ ಏಕಾಂತದಲ್ಲಿ ಭೆಟ್ಟಿಕೊಡಲು ಅವನೊಪ್ಪಲಿಲ್ಲ. ಆದರೆ ಅವನ ಹೆಸರುದೆಸೆ ಎಲ್ಲವೂ ತಿಳಿದ ಮೇಲೆ, ವಿಶೇಷವಾಗಿ ಒಂದು ಕಾಲದಲ್ಲಿ ಸ್ಕಾಟ್ಲೆಂಡ್ ಯಾರ್ಡಿ ನೊಡನೆ ಅವನ ಘನಿಷ್ಠ ಸಂಬಂಧವಿದ್ದಿತೆಂಬುದನ್ನು ಅರಿತ ಮೇಲೆ, ಏರೋ ಸ್ಮಿಥ್‌ನನ್ನು ತನ್ನ ಪ್ರತ್ಯೇಕ ಕೋಣೆಯಲ್ಲಿ ಕರೆದೊಯ್ದು ಎಲ್ಲವನ್ನೂ ಕೇಳಿ ಕೊಂಡ. ಏರೋಸ್ಮಿಥ್ ಸುಮಾರು ಇಪ್ಪತ್ತು ನಿಮಿಷ ವ್ಯವಸ್ಥಾಪಕನೊಡನೆ ಮಾತುಕತೆಯಾಡಿದ.

ಆಮೇಲೆ ಏರೋಸ್ಮಿಥ್ ಅಲ್ಲಿಂದ ಪುನಃ ಆಕ್ಸಫರ್ಡ್ ಬೀದಿಗೆ ತೆರಳಿದ. ಹಿಂದಕ್ಕೆ ಘಸ್‌ವ್ಯೂದ ಲೆಬೋರೇಟರಿಯಲ್ಲಿ ಹಲವು ತೆರದ ವೈಜ್ಞಾನಿಕ ಯಂತ್ರ ಗಳು, ಕಾಜಿನ ನಳಿಕೆಗಳು, ಧಾತುವಿಜ್ಞಾನ ಮೊದಲಾದ ಪುಸ್ತಕಗಳು ಇವ ನ್ನೆಲ್ಲ ನೋಡಿದಾಗ ಅವನ ಮನಸಿನಲ್ಲಿ ಹುಟ್ಟಿದ್ದ ಸಂದೇಹ, ಆ ತರುವಾಯದ ಶೋಧನೆಯಲ್ಲಿ ಕಂಡುಬಂದ ತಥ್ಯಾಂಶಗಳಿಂದ ದೃಢವಾಗುತ್ತ ಬಂದಿತ್ತು; ಅಸ್ಪಷ್ಟವಾದ ಅನುಮಾನ ಸ್ಪಷ್ಟರೂಪ ತಳೆಯುತ್ತ ಬಂದಿತ್ತು.

ಆಕ್ಸಫರ್ಡ್ ಸರ್ಕಸಿನ ಟ್ಯೂಬ್ ಸ್ಟೇಶನಿನಿಂದ ಏರೋಸ್ಮಿಥ್ ಟೆಲಿಫೋನಿ ನಲ್ಲಿ ಪ್ಯಾರೆಟ್‌ರನ್ನು ಕರೆದು ಮಾತನಾಡಿದ: "ಸ್ಯಪರನ ಚಲನವಲನಗಳ ಮೇಲೆ ಕಣ್ಣಿಡಲು ನಿಮ್ಮ ಮೂರು ಜನ ಚತುರ, ಬಹುದರ್ಶಿ, ಕರ್ಮಠ ಅನು ಚರರು ಬೇಕಾಗಿದ್ದಾರೆ. ನನ್ನ ಈ ಬಿನ್ನಹದ ಕಾರಣ ಆಮೇಲೆ ನಿಮಗೆ ಗೊತ್ತಾಗುವುದು. ಈಗ ಇಷ್ಟು ಮಾತ್ರ ಹೇಳುವೆ: "ಸದ್ಯ ನನ್ನ ಕೈಲಿದ್ದ ಕೆಲಸಗಳಲ್ಲಿ ಈ ಕೆಲಸ ಎಲ್ಲಕ್ಕೂ ಹೆಚ್ಚಿನ ಮಹತ್ವದ್ದು. ಸ್ಯಪರನೇ ನನ್ನ ಮುಖ್ಯ ಲಕ್ಷ್ಯ."

ಪ್ಯಾರೆಟ್ ತಮ್ಮ ನಂಬುಗೆಯ ಜನರ ಮಾತಿನ ಬಗ್ಗೆ ಹೆಚ್ಚಿನ ಚಿಕಿತ್ಸೆ ಮಾಡುತ್ತಿರಲಿಲ್ಲ. ಅವರು ಕೂಡಲೆ ಎರೋಸ್ಮಿಥ್‌ನ ಬಿನ್ನಹವನ್ನು ಒಪ್ಪಿಕೊಂ ಡರು. "ಈ ಕ್ಷಣವೇ ಸ್ಕಾಟ್ಲೆಂಡ್ ಯಾರ್ಡಿನ ಕರ್ಮಚಾರಿಗಳು ಸ್ಯಪರನನ್ನು ನೆಳಲಿನಂತೆ ಅನುಸರಿಸುವರು." ಎಂದವರು ಹೇಳಿದರು.

ಮೂರು ದಿನಗಳ ತರುವಾಯ ಎರೋಸ್ಮಿಥ್‌ನ ಶ್ರಮ ಹಣ್ಣಿಸಿತು. ಇಡೀ ದಿನ ಅಲೆದಲೆದು ದಣಿದು ಬಂದು ಅವನು ಮಲಗಿದ್ದ. ಪ್ಯಾರೆಟ್ ಫೋನು ಮಾಡಿ ಈಗಲೇ ಸ್ಕಾಟ್ಲೆಂಡ್ ಯಾರ್ಡಿಗೆ ಬರಬೇಕೆಂದು ಅವನಿಗೆ ತಿಳಿಸಿದರು.

ರಿಸೀವರನ್ನು ಕೆಳಗಿಟ್ಟವನೇ ಅವನು ಹೊರಟು ಬಿಟ್ಟ. ಹದಿನೈದು ನಿಮಿಷ ಗಳಲ್ಲಿಯೇ ಅವನು ಸ್ಕಾಟ್ಲೆಂಡ್ ಯಾರ್ಡನ್ನು ತಲುಪಿ ಪ್ಯಾರೆಟರ ಕಚೇರಿ ಕೋಣೆಯನ್ನು ಪ್ರವೇಶಿಸಿದ.

"ಸ್ಯಪರ್ ಎಲ್ಲಿಗೆ ಓಡಿ ಹೋಗಿದ್ದಾನೆ? ಹಾಂ, ಅವನು ಅದೃಶ್ಯನಾಗಿ ದ್ದಾನೆ. ಎಲ್ಲಿ ಹೋಗಿರಬಹುದೆಂದು ನಿಮ್ಮ ಅನುಮಾನ?" ಏರೋಸ್ಮಿಥ್ ನನ್ನು ಕಂಡೊಡನೆ ಪ್ಯಾರೆಟ್ ಕೇಳಿದರು.

"ಬಲ್ಲೆ, ಫಸ್‌ವ್ಯೂಕೋ ಹೋಗಿದ್ದಾನೆ ಅವನು." ಸಹಜಸ್ವರದಲ್ಲಿ ಅವನು ಉತ್ತರವಿತ್ತ.

"ಅದು ಹೇಗೆ ನೀವು ತಿಳಿದುಕೊಂಡಿರಿ? ನಿಮ್ಮ ಈ ಊಹೆಗೆ ಪ್ರಮಾಣ ವೇನು?"

ಏರೋಸ್ಮಿಥ್ ತನ್ನ ಊಹೆಗೆ ಕಾರಣವನ್ನು ಅವರಿಗೆ ಶ್ರುತಪಡಿಸಿದ. ತಾನು ಫಸ್‌ವ್ಯೂಭವನದಲ್ಲಿ ಕಂಡಿದ್ದ ಲೆಬೋರೇಟರಿಯ ವೈಶಿಷ್ಟ್ಯದಬಗ್ಗೆಯೂ ಅವರೊಡನೆ ವಿಚಾರ ವಿನಿಮಯ ಮಾಡಿದರು. ಆ ವಿಷಯವನ್ನು ಕೇಳಿ ಪ್ಯಾರೆಟ್ ಉತ್ಸಾಹದಿಂದ ಉತ್ತೇಜಿತರಾದರು. "ಈ ಲೆಬೋರೇಟರಿಯ ವರ್ತಮಾನವನ್ನು ನೀವು ಮೊದಲೇ ನನ್ನ ಮುಂದೆ ಹೇಳಿದ್ದರೆ, ಇಷ್ಟರೊಳಗೇ ನಾನು ಅದನ್ನು ನೋಡಿಕೊಂಡು ಬರುತ್ತಿದ್ದೆ; ಅಂತಹ ಗುಪ್ತಸ್ಥಾನದಲ್ಲಿ ಇಂತಹ ಲೆಬೋರೇಟರಿಯನ್ನು ಸ್ಥಾಪಿಸಿದ ಉದ್ದೇಶವೇನೆಂಬುದೂ ಸ್ವಲ್ಪ ಗೊತ್ತಾಗುತ್ತಿತ್ತು." ಎಂದು ಅವರೆಂದರು.

—"ಹಾಂ, ಈ ಮೊದಲು ಈ ವಿಷಯವಾಗಿ ನಿಮ್ಮೊಡನೆ ಮಾತನಾಡ ಲಿಲ್ಲ. ಏಕೆಂದರೆ ಅದರಿಂದ ಮಿಸ್ ಫೆಲ್ಪ್ಸನಳ ಶೋಧನೆಗೆ ಯಾವ ಸಹಾ ಯವೂ ಆಗುತ್ತಿರಲಿಲ್ಲ."

—"ಅದೂ ನನಗೆ ಗೊತ್ತಿರಲಿಲ್ಲ."

—"ಅದನ್ನು ತಿಳಿದುಕೊಳ್ಳಲು ನಿಮಗೆ ಅವಕಾಶವಿರಲಿಲ್ಲ ಎನ್ನಿರಿ. ನನ್ನ ಮಾತನ್ನು ನೀವು ಉಪೇಕ್ಷಿಸುತ್ತಲೇ ಬಂದಿರಿ. ಆದ್ದರಿಂದ ಈಗ ಬೇರೆ ವಿಷ ಯದ ಚರ್ಚೆಯಿಂದ ಪ್ರಯೋಜನವಿಲ್ಲ ಎಂದು ನಾನೆಂದುಕೊಂಡೆ."

—"ಇಂದು ಬೆಳಿಗ್ಗೆ ಪ್ರಿಂಗಲನೊಡನೆ ಟೆಲಿಫೋನಿನಲ್ಲಿ ಮಾತನಾಡಿದೆ.

ಅಪಹೃತಳಾದ ಯುವತಿಯನ್ನು ಹುಡುಕುವಂತೆ ಅವರಿಗೆ ಹೇಳಿದ್ದೆ. ಆದರೆ ಅವರ ಪ್ರಯತ್ನ ಸಫಲವಾಗಲಿಲ್ಲ. ಇದು ನನ್ನ ಔದಾಸೀನ್ಯದ ಫಲವೆಂದು ಎನ್ನುವಿರೇನು ನೀವು? ನಾನು ಕೇಳಿದ್ದೇನೆ—ಫಸ್‌ವ್ಯೂಭವನದ ಅಂಗಳದಿಂದ ಸ್ವಲ್ಪ ಅಂತರದಲ್ಲಿ ಒಂದು ಗುಡಿಸಲಿದೆಯಂತೆ; ಅದು ತೋಟಿಗನ ಗುಡಿಸಲಿದ್ದರೂ ಇರಬಹುದು. ಅದರ ಮೇಲೆ ಪ್ರಿಂಗಲ್ ಕಣ್ಣಿಟ್ಟಿದ್ದ. ಅಲ್ಲಿ ಹುಡುಕಿ ನೋಡಿದರೂ ಅಪಹೃತ ಯುವತಿಯ ಪತ್ತೆಯಾಗಲಿಲ್ಲ. ಆ ಸ್ಥಳದಲ್ಲಿ ಅವರು ವಾಸ ಮಾಡಿದ ಮುವ್ವತ್ತಾರು ಗಂಟೆ ಕಾಲ ನಿದ್ದೆಯನ್ನೇ ಮಾಡಿಲ್ಲ. ಆ ಕೆಟ್ಟ ಜಾಗೆಯಲ್ಲಿ ಇರುವುದು ಅವರ ಮನಸಿಗೆ ಒಗ್ಗದಾಗಿದೆ. ಈ ಪರಿಸ್ಥಿತಿಯಲ್ಲಿ, ನಾನು ಸ್ವತಃ ಅಲ್ಲಿಗೆ ಹೋಗಿ ಸ್ಥಾನಪರೀಕ್ಷೆ ಮಾಡಬೇಕೆಂದು ಯೋಚಿಸಿದ್ದೇನೆ. ನನ್ನ ಸಂಗಡ ನೀವೂ ಬರುತ್ತೀರಷ್ಟೆ?"

—"ಏಕೆ ಬರುವುದಿಲ್ಲ? ಯಾವಾಗ ಹೊರಡಬೇಕು?"

—"ಇಂದು ಇಳಿಹೊತ್ತಿನ ನಾಲ್ಕು ಗಂಟೆಗೆ. ಕತ್ತಲೆಯಾಗದೆ ಅಲ್ಲಿಗೆ ಹೋಗಿ ಉಪಯೋಗವಿಲ್ಲ."

ಏರೋಸ್ಮಿಥ್ ಎದ್ದು ಬಾಗಿಲ ಹತ್ತಿರ ಹೋಗಿ, "ಹಾಗಾದರೆ ನಾನು ಮೂರೂ ಮುಕ್ಕಾಲಿಗೆ ಇಲ್ಲಿ ಬರುತ್ತೇನೆ" ಎಂದು ಹಿಂದೆ ಹೊರಳಿ ಹೇಳಿದ.

"ನೀವೀಗ ಎಲ್ಲಿಗೆ ಹೋಗುತ್ತೀರಿ?"

"ಬ್ರಿಟಿಶ್ ಮ್ಯೂಜಿಯಮ್ಮಿಗೆ."

* * * * *

ನಿರ್ದಿಷ್ಟ ಸಮಯದಲ್ಲಿ ಮೂರು ಪೋಲಿಸ್ ವಾಹನಗಳು ಪಾರ್ಲಿಮೆಂಟ್ ಬೀದಿಯನ್ನು ಅತಿಕ್ರಮಿಸಿದವು. ಗೊತ್ತಾದಂತೆ ಏರೋಸ್ಮಿಥ್ ಸಕಾಲದಲ್ಲಿ ಬಂದು ಆ ದಲದೊಡನೆ ಸೇರಿಕೊಂಡಿದ್ದ. ಆದರೆ ಅವನ ಮನಸ್ಸು ನಾನಾ ಯೋಚನೆಗಳಿಂದ ವಿಚಲಿತವಾಗಿತ್ತು. ಅತಿ ಪ್ರಯಾಸದಿಂದ ಆತ್ಮಸಂಯಮ ಮಾಡಿಕೊಂಡು ನಿಃಶಬ್ದವಾಗಿ ಸಾಗಿದ್ದ. ನಕ್ಲಿಜ್ ಎಂಥ ಗಟ್ಟಿಗ, ಎಂಥ ನಿಷ್ಠುರ ಕರ್ಮಿ ಎಂಬುದು ಅವನಿಗೆ ಅಜ್ಞಾತವಲ್ಲ. ಬಾರಬಾರಾ ಅವನ ಬಲೆಯಲ್ಲಿ ಬಿದ್ದುದು ಅವನ ದುಶ್ಚಿಂತೆಗೆ ಕಾರಣವಾಗಿತ್ತು.

ಅಂದು ರಾತ್ರಿ ನಿಬಿಡ ಅಂಧಃಕಾರ ಕವಿದಿದ್ದಿತಾದರೂ ಆಕಾಶದಲ್ಲಿ ಮೋಡ ಹೆಸರಿಗೂ ಇರಲಿಲ್ಲ. ಒಂಬತ್ತು ಹೊಡೆದು ಕೆಲ ನಿಮಿಷಗಳಾಗಿದ್ದವು. ಆ ಗಾಡಿಗಳು ಫಸ್‌ವ್ಯೂ ಭವನ ಸುಮಾರು ಅರ್ಧ ಮೈಲು ದೂರವಿರುವಾಗ ನಿಂತವು. ಮರುಕ್ಷಣದಲ್ಲಿ ಸಾರ್ಜಂಟ್ ಪ್ರಿಂಗಲ್ ಒಂದು ಗುಪ್ತಸ್ಥಾನದಿಂದ ಹೊರಬಿದ್ದು ಆ ಗಾಡಿಗಳ ಬಳಿ ಬಂದ. ನಿದ್ದೆಗೇಡೊಂದು, ಮೇಲೆ ಸೊಳ್ಳೆಗಳ ಕಡತವೊಂದು, ಹೀಗಾಗಿ ಆವನ ಸಂಗಡಿಗರು ಇರಲಾರದೆ ಓಡಿಹೋಗಿದ್ದರು. ಆದಕ್ಕಾಗಿ ಅವನು ಪ್ಯಾರೆಟರಲ್ಲಿ ಕ್ಷಮೆ ಕೋರಿದ.

ಪ್ಯಾರೆಟ್ ಅವನ ಮಾತನ್ನು ಗಮನಕ್ಕೆ ತೆಗೆದುಕೊಳ್ಳದೆ, "ಅವರ ಅಪರಾಧದ ವಿಚಾರ ನಾನು ಮಾಡುವುದಿಲ್ಲ. ಅದಕ್ಕೆ ಬೇರೆ ಕಚೇರಿ ಇದೆ. ಆದರೆ, ನೀನು ಯಾವುದೋ ಕುಟೀರದ ವಿಷಯ ತಿಳಿಸಿದ್ದೆಯಲ್ಲ, ಅದೆಲ್ಲಿದೆ? ನೋಡಲಿಕ್ಕೆ ಹೇಗಿದೆ?" ಎಂದು ಕೇಳಿದರು.

"ಫಸ್‌ವ್ಯೂದ ಪಶ್ಚಿಮಕ್ಕೆ, ಸುಮಾರು ಎರಡು ನೂರು ಯಾರ್ಡು ದೂರದಲ್ಲಿ. ವಿಲಕ್ಷಣವಾದ ಮನೆ. ಯಾವ ರಾಯನ ಕಾಲದ್ದೋ ಹೇಳುವುದು ಕಷ್ಟ. ಅದಕ್ಕೆ ಅನೇಕ ಬಾಗಿಲುಗಳಿವೆ. ಎಲ್ಲವನ್ನೂ ಹುಳ ಕೊರೆದಿವೆ. ಅಲ್ಲಲ್ಲಿ ಮೆಟ್ಟಿಲುಗಳಿವೆ. ಆದರೆ ಅವು ಅಲ್ಲಿದ್ದ ಕಾರಣವೇನೋ ತಿಳಿಯದು. ಕುಟೀರದೊಳಗೆ ಪ್ರವೇಶಿಸಿದರೆ, ಅದು ಯಾವುದೋ ರಹಸ್ಯದ ಬೀಡೆಂದು ಎನಿಸುತ್ತದೆ." ಎಂದು ಪ್ರಿಂಗಲ್ ವಿವರಿಸಿದ.

"ಅದರ ಕೆಳಗೆ ಗುದಾಮು-ಗಿದಾಮು ಉಂಟೇನು?"

"ನನ್ನ ಕಣ್ಣಿಗಂತೂ ಗುದಾಮು–ಗಿದಾಮು ಯಾವುದೂ ಬಿದ್ದಿಲ್ಲ. ಫಸ್‌ವ್ಯೂದ ನಾಲ್ಕು ದಿಕ್ಕುಗಳನ್ನು ಕಾಯುವ ಅಪ್ಪಣೆ ನನಗಾಗಿದೆ. ಆದನ್ನು ನಾನು ಚಾಚೂ ತಪ್ಪದೆ ಪಾಲಿಸಿಕೊಂಡು ಬಂದಿದ್ದೇನೆ. ಅಲ್ಲಿ ಇಲ್ಲಿ ಹೋಗಿ ಅಲ್ಲಿಯ ಮನೆ ಮಠ ಶೋಧಿಸುವುದು ಲಾಭಕರವೆಂದು ನನಗೆನಿಸಲಿಲ್ಲ. ಅಲ್ಲದೆ, ನನ್ನ ಕರ್ತವ್ಯದಾಚೆ ಹೋಗಿ, ಬೇರೆ ಕಡೆ ಶೋಧನೆ ಮಾಡುವ ಅಧಿಕಾರ ನನಗಿಲ್ಲವೆಂದೇ ನನ್ನ ತಿಳಿವಳಿಕೆಯಾಗಿತ್ತು."

ಪ್ರಿಂಗಲನ ಉತ್ತರದಿಂದ ಪ್ಯಾರೆಟ್ ಅಪ್ರಸನ್ನರಾದರು. ಅವರೆಂದರು: "ಆದರೆ ನೀವು ವಾರಾವಧಿ ಆ ಕುಟೀರದ ಸುತ್ತಮುತ್ತ ತಿರುಗಾಡುತ್ತಿದ್ದೂ

ನಮ್ಮ ಒಂದು ವಾರವನ್ನು ಸುಮ್ಮನೆ ಕಳೆದಿರಿ. ಫಸ್‌ವ್ಯೂ ಪ್ರವೇಶಿಸಲಿಕ್ಕೆ ಗುಪ್ತ ಮಾರ್ಗವೇನಾದರೂ ಇದೆಯೋ ಹೇಗೆಂದು, ಹುಡುಕಿನೋಡು; ಜೊತೆಗೆ ಆರು ಮಂದಿಯನ್ನು ತೆಗೆದುಕೋ. ಅಲ್ಲಿ ಯಾರಾದರೂ ಅಪರಿಚಿತ ಮಂದಿ ಕಂಡರೆ ಅವರನ್ನು ತತ್‌ಕ್ಷಣವೇ ಬಂಧಿಸಬೇಕು. ಅವಶ್ಯವೆನಿಸಿದರೆ ಗುಂಡಿಕ್ಕು ವುದಕ್ಕೂ ಹಿಂಜರಿಯಬೇಕಾದ್ದಿಲ್ಲ. ತಿಳಿಯಿತಿಲ್ಲವೋ ನಾನು ಹೇಳಿದ್ದು ?"

"ಹಾಂ, ಮಹಾಶಯ. ಎಲ್ಲ ತಿಳಿಯಿತು. ಗಪ್‌ಚುಪ್ ಹಿಡಿದುಬಿಡು ವುದು; ಆಮೇಲೆ ಗೋಳಿ."

"ಚೆನ್ನಾಗಿ ತಿಳಿದುಕೊಂಡೆ! ಯಾರನ್ನು ಹಿಡಿಯುವುದು ಅಸಾಧ್ಯವಾಗು ತ್ತದೋ ಅಂಥವರಿಗೆ ಮಾತ್ರ ಗುಂಡಿನ ಪ್ರಯೋಗ ಮಾಡಬೇಕು."

"ಹಾಂ, ಹಾಗೆಯೇ ಮಾಡುತ್ತೇನೆ." ಎಂದು ಪ್ರಿಂಗಲ್ ತನ್ನ ಕೆಲಸಕ್ಕೆ ತೆರಳಿದ.

ಆಮೇಲೆ ಪ್ಯಾರೆಟ್ ದಲಸಹಿತವಾಗಿ ಫಸ್‌ವ್ಯೂದ ಪ್ರಶಸ್ತವಾದ ಅಂಗಳ ವನ್ನು ಪ್ರವೇಶಿಸಿದರು. ಬಳಿಕ ಕಟ್ಟಡದ ಕಡೆಗೆ ನೋಡಿ, "ಇದೇನು ಮಂದಿ ಇರತಕ್ಕ ಮನೆಯೇ ಅಲ್ಲ, ಭೂತ ಪ್ರೇತಗಳಿಗೇ ತಕ್ಕ ಸ್ಥಳ!" ಎಂದು ಅಸ್ಫುಟ ವಾಗಿ ಗೊಣಗಿ, "ನೀವು ಇಲ್ಲಿಯೇ ಸ್ವಲ್ಪ ನಿಲ್ಲಿರಿ, ಸುತ್ತಲೂ ಒಮ್ಮೆ ತಿರುಗಾಡಿ ನೋಡಿಕೊಂಡು ಬರುತ್ತೇನೆ." ಎಂದು ಹೇಳಿ ಹೊರಟರು.

ಸುಮಾರು ಹದಿನೈದು ನಿಮಿಷಗಳಲ್ಲಿ ಪ್ಯಾರೆಟ್ ಮರಳಿ ಬಂದರು. ಅವರ ಮುಖಮಂಡಲ ಅಸ್ವಾಭಾವಿಕ ಗಂಭೀರವಾಗಿತ್ತು, ವಿವರ್ಣವಾಗಿತ್ತು; ಕಣ್ಣು ಗಳಲ್ಲಿ ಸ್ತಂಭಿತ ಭಾವ ಮೂಡಿತ್ತು. ಯಾವನೊಬ್ಬ ಹೇಡಿಯ ಕಣ್ಣುಗಳಲ್ಲಿ ಈ ಭಾವ ಕಂಡಿದ್ದರೆ ಭಯದ ಚಿಹ್ನವೆಂದೇ ಸಂದೇಹವುಂಟಾಗುತ್ತಿತ್ತು.

ಪ್ಯಾರೆಟ್ ಅಸ್ಫುಟ ಸ್ವರದಲ್ಲಿ ಕಿಟ್ ಏರೋಸ್ಮಿಥ್‌ನಿಗೆ ನುಡಿದರು: "ನಾಲ್ಕೂ ಕಡೆ ಈ ಮನೆಯನ್ನು ಪರೀಕ್ಷಿಸಿದಾಗ ನನಗೆನಿಸಿತು. ರಕ್ತಲಾಲಸಿ ಯಾದ ಯಾವನೋ ರಾಕ್ಷಸನೇ ಐಂದ್ರಜಾಲಿಕನ ಮಾಯಾದಂಡ ತಾಗಿ, ಕಲ್ಲು ಇಟ್ಟಿಗೆಗಳ ರಾಶಿಯಾಗಿ ನಿಂತಿದ್ದಾನೆ! ಆದರೆ ಈ ಸ್ಥಿತಿ ಪ್ರಾಪ್ತವಾಗಿ ದ್ದರೂ ಅವನ ರಕ್ತದ ಪಿಪಾಸೆ ಆರಲಿಲ್ಲ. ಯಾವನಾದರೂ ಪೋಲಿಸ್‌ಮನ್ನಿಗೆ ಕಲ್ಪನಾಶಕ್ತಿ ಪ್ರಖರವಿದ್ದಿದ್ದರೆ ಕ್ರೂರ ದಾನವನೊಬ್ಬ ' ಆಃ ' ಎಂದು ಬಾಯಿ ತೆರೆದು ನಿಂತಿದ್ದಾನೆ ಎಂದು ಅವನು ಹೇಳಬಹುದಿತ್ತು; ಆದರೊಳಗಿಂದ ಏನೋ

ಒಂದು ಅಶರೀರ ಮೂರ್ತಿ ಹೊರಬಂದು ತನ್ನ ಕತ್ತಿಗೆ ಎರಗುತ್ತದೆಂದು ಹೆಜ್ಜೆ ಹೆಜ್ಜೆಗೂ ಅವನಿಗೆನಿಸುತ್ತಿತ್ತು. ಆದರೆ ಅಂಥದೇನೂ ನನಗೆ ಕಾಣಲಿಲ್ಲ."

ಮುಂದೆ ಹತ್ತು ನಿಮಿಷಗಳಲ್ಲಿಯೇ ಪ್ಯಾರೆಟರ ಅಪ್ಪಣೆಯ ಮೇರೆಗೆ ಅವರ ಅನುಚರರು ಆ ಮಂದಿರವನ್ನು ಸುತ್ತುವರಿದರು. ಅವರೆಲ್ಲರೂ ಕಟ್ಟಡದ ಗೋಡೆಯ ಹೊಂದಿಗಿದ್ದ ಕತ್ತಲೆಯಲ್ಲಿ ಅವಿತುಕೊಂಡು ಕಾಯತೊಡಗಿದರು. ಅದರ ತಲೆಬಾಗಿಲ ಬಳಿ ಒಂದು ಪಥಕ ನಿಂತಿತು.

ಬಾಗಿಲೆದುರಿಗೆ ಜಂಗು ತಿಂದ ಒಂದು ಸರಪಣಿ ಜೋತಾಡುತ್ತಿತ್ತು. ಪ್ಯಾರೆಟ್ ಅದನ್ನು ಬಲವಾಗಿ ಜಗ್ಗಿ ಕೈಬಿಟ್ಟರು. ಕೂಡಲೆ ಕಟ್ಟಡದ ಒಳಗಡೆ, ದೂರದ ಭಾಗದಲ್ಲೆಲ್ಲಿಯೋ ಕರ್ಣಕಠೋರವಾಗಿ ಗಂಟೆ ಬಾರಿಸಿತು. ಅದೇ ಶಬ್ದ ಕಟ್ಟಡದ ಪ್ರತಿ ಗೋಡೆಯಿಂದಲೂ ಪ್ರತಿಧ್ವನಿತವಾಯಿತಾಗಲಿ, ಒಳಗಡೆ ಬೇರೆ ಯಾವ ಶಬ್ದ-ಸಪ್ಪಳವೂ ಕೇಳಲಿಲ್ಲ. ಪ್ಯಾರೆಟ್ ಕೆಲಹೊತ್ತು ಪರೀಕ್ಷಿಸಿ ಮತ್ತೆ ಸರಪಣಿ ಜಗ್ಗಿದರು. ಮತ್ತೆ ಘಂಟಾಧ್ವನಿ—ಬೇರೆ ಶಬ್ದವಿಲ್ಲ. ಅವರು ಮತ್ತೊಮ್ಮೆ, ಇನ್ನೊಮ್ಮೆ ಗಂಟೆ ಬಾರಿಸಿದರು. ನಾಲ್ಕು ಸಾರೆ ಘಂಟಾಧ್ವನಿಯಾದರೂ ಅದಕ್ಕೆ ಒಳಗಿನಿಂದ ಯಾವ ನರಪ್ರಾಣಿಯ ಉತ್ತರವೂ ಇಲ್ಲ. ಘಂಟಾಧ್ವನಿಯ ತರುವಾಯ ಉಂಟಾದ ಗಭೀರ ನಿಸ್ತಬ್ಧತೆ ಜನಶೂನ್ಯವಾದ ಭೀಷಣ ಪ್ರೇತಭೂಮಿಯ ನೀರವತೆಯಂತೆ ದುಸ್ಸಹವಾಗಿತ್ತು.

ಪ್ಯಾರೆಟ್ ಸ್ತಂಭಿತ ಭಾವದಿಂದ ಏರೋಸ್ಮಿಥ್‌ನ ಮೋರೆ ನೋಡಿದರು. ಅವನ ದೃಷ್ಟಿಯಲ್ಲಿ ಕೃತಸಂಕಲ್ಪದ ದೃಢತೆ ಕಂಡುಬಂದಿತು. ದೃಢ ಸ್ವರದಲ್ಲಿ ಪ್ಯಾರೆಟ್ ಮಾತನಾಡಿದರು: "ಒಳಗಡೆ ಮಂದಿ ಇದ್ದಾರೆಯೋ ಇಲ್ಲವೋ ತಿಳಿಯದು. ಒಂದು ವೇಳೆ ಇದ್ದಿದ್ದರೆ ಅವರು ನಮ್ಮನ್ನು ಉಪೇಕ್ಷಿಸುತ್ತಿದ್ದಾರೆ; ಬೇಕಾದುದಾಗಲಿ ಉತ್ತರ ಕೊಡಲಾಗದೆಂದು ನಿರ್ಧರಿಸಿದ್ದಾರೆ. ಅಥವಾ ಅವರು ಸಿಕ್ಕುಬಿದ್ದೇವೆಂಬ ಭಯದಿಂದ ಈ ಮೊದಲೆ ಇಲ್ಲಿಂದ ಕಂಬಿ ಕಿತ್ತಿದ್ದರೆ ಉತ್ತರದ ಆಸೆಯೇ ವ್ಯರ್ಥ. ಆದರೆ ಈ ಸ್ಥಳವನ್ನು ಅವರು ಚಿರಕಾಲ ಬಿಟ್ಟಿರಲಿಕ್ಕಿಲ್ಲ, ಸುಯೋಗ ನೋಡಿಕೊಂಡು ತಿರುಗಿ ಬಂದಾರು ಎಂದೆನಿಸುತ್ತದೆ. ಆದರೆ ಅದೇಕೋ, ಈ ಮನೆಯನ್ನು ನೋಡಿದರೆ ಎದೆ ಧಕ್‌ಧಕ್ ಎನ್ನುತ್ತದೆ; ಒಳಗೆ ಏನೋ ಇದೆ, ಅದರ ಸಾಂಘಾತಿಕ ಪ್ರಭಾವವನ್ನು ಎದುರಿಸುವುದು ಮಹಾ ಮಹಾ ಸಾಹಸಿಗಳಿಗೂ ಆಗದು ಎನಿಸುತ್ತದೆ. ಇಂದು ರಾತ್ರಿ ನಮ್ಮ ದೈವದ

ಕ್ಷೇಸಿದೆಯೋ ಕಲ್ಪನೆಗೂ ಅಸಾಧ್ಯ." ಈ ಮಾತನ್ನಾಡುತ್ತಿರುವಾಗ ಅವರ ಹಣೆ ಬೆಮತಿತು. ಅವರು ಕರವಸ್ತ್ರದಿಂದ ಒರಸಿಕೊಂಡರು.

ಅವರ ಅಭಿಪ್ರಾಯವೇನೆಂದು ಏರೋಸ್ಮಿಥ್‌ನಿಗೆ ತಿಳಿಯಲಿಲ್ಲ. "ಈಗ ಏನು ಮಾಡಬೇಕೆಂದು ಮಾಡಿದ್ದೀರಿ?" ಎಂದು ಅವನು ಕೇಳಿದ.

"ಈ ಸ್ಥಿತಿಯಲ್ಲಿ ಯಾವುದು ಕರ್ತವ್ಯವೋ ಅದನ್ನು ಮಾಡಲೇ ಬೇಕು. ಬಲಪ್ರಯೋಗದಿಂದ ಬಾಗಿಲು ತೆರೆದು ಒಳಗೆ ಹೋಗಬೇಕು." ಎಂದು ಪ್ಯಾರೆಟ್ ವಸ್ತ್ರವನ್ನು ಜೇಬಿನಲ್ಲಿ ತುರುಕುತ್ತ ನುಡಿದರು.

ಆಮೇಲೆ ಬಲಪ್ರಯೋಗದ ಮುಂಚೆ ಯುಕ್ತಿ ಕೌಶಲಗಳಿಂದ ಪ್ರಯತ್ನಿಸುವುದು ಲೇಸೆಂದುಕೊಂಡು, ಬಾಗಿಲಿನ ಹಿಡಿಕೆಯನ್ನು ಹಿಡಿದು ಅವರು ಪರೀಕ್ಷಿಸತೊಡಗಿದರು. ಹಿಡಿಕೆಯನ್ನು ಹಿಡಿದು ಜೋರಾಗಿ ಒಳಗೆ ತಳ್ಳಿದೊಡನೆ ಬಾಗಿಲು ಒಂದಿಂಚಿನಷ್ಟು ಸರಿಯಿತು; ಪ್ಯಾರೆಟ್ ಉತ್ಸಾಹಿತರಾಗಿ ಇನ್ನಷ್ಟು ಬಲವಾಗಿ ಮತ್ತೆ ಒತ್ತಿದರು. ಬಾಗಿಲು ಪೂರಾ ತೆರೆಯಿತು. ಇಷ್ಟು ಸಹಜವಾಗಿ ಕೆಲಸ ಫಲಿಸಿದುದಕ್ಕಾಗಿ ಅವರಿಗೆ ಅತ್ಯಾಶ್ಚರ್ಯವಾಯಿತು. ಗಂಟೆಯ ಸಪ್ಪಳ ಕೇಳಿ ಒಳಗಿನಿಂದ ಯಾರಾದರೂ ನಿಶ್ಶಬ್ದವಾಗಿ ಬಂದು ಸದ್ದಿಲ್ಲದೆ ಬಾಗಿಲ ಕೊಂಡಿಯನ್ನು ತೆಗೆದಿಟ್ಟು ಹೋಗಿರಬಹುದೇ ಎಂದೊಮ್ಮೆ ಎನಿಸಿತು. ಆದರೆ, ನಾವು ಈ ಮೊದಲು ಬಾಗಿಲನ್ನು ನೂಕಿ ನೋಡಿರಲಿಲ್ಲ. ಹಾಗೆ ಆಗಲೇ ಪ್ರಯತ್ನಿಸಿದ್ದರೆ ತೆರೆಯುತ್ತಿತ್ತೋ ಏನೋ ಎಂದೂ ಭಾವಿಸಿದರು.

ಬಾಗಿಲೇನೋ ಹೆಚ್ಚು ಆಯಾಸವಿಲ್ಲದೆ ತೆರೆಯಿತು ನಿಜ. ಆದರೆ ಒಳಗಿನ ದೃಶ್ಯ ಪ್ಯಾರೆಟರಿಗೆ ಉತ್ಸಾಹಜನಕವಾಗಿರಲಿಲ್ಲ. ಅವರ ಮನಸಿನಲ್ಲಿ ಏನೋ ಒಂದು ಅಜ್ಞಾತಭಯ ಉಂಟಾಯಿತು. ಏಕೆ ಈ ಭಯ ಎಂಬುದು ಅವರಿಗೇ ತಿಳಿಯದು. ಹಿಂದಿದ್ದ ಏರೋಸ್ಮಿಥ್‌ನಿಗೂ ಎನಿಸಿತು—ಪ್ಯಾರೆಟ್ ಒಳಗೆ ಪ್ರವೇಶ ಮಾಡಿದರೋ! ತೀರಿತು ಅವರ ಅವಸ್ಥೆ! ಕ್ಷಣಾರ್ಧದಲ್ಲಿ ಅವರ ಸರ್ವಾಂಗ ಚೂರಾಗುವುದು!

ಈ ಭಯ ಮನದಲ್ಲಿ ಮಾಡುತ್ತಲೂ ಏರೋಸ್ಮಿಥ್ ತನ್ನೆರಡು ಕೈಗಳಿಂದಲೂ ಪ್ಯಾರೆಟರ ಹೆಗಲು ಹಿಡಿದು ಹಿಂದಕ್ಕೆ ಎಳೆದುಕೊಂಡ. ಅವರು ಬೀಳ್ತು ಬೀಳುತ್ತ ಸಾವರಿಸಿಕೊಂಡು ನಿಂತು ಕೋಪದಿಂದ ನುಡಿದರು: "ಇದೇನು ನಿಮ್ಮ ನಡತೆ! ನನ್ನನ್ನು ಹೀಗೇಕೆ—"

ಅವನ ಗದರಿಕೆಯತ್ತ ಏರೋಸ್ಮಿಥ್‌ನ ಲಕ್ಷ್ಯವೇ ಇರಲಿಲ್ಲ. ಅರೆತೆರೆದ ಬಾಗಿಲಿನ ಮೇಲ್ಭಾಗದಲ್ಲಿ ಅವನ ನೋಟ ನಿಂತಿತ್ತು. ಆರೆನಿಮಿಷ ಹಿಂದೆ ಪ್ಯಾರೆಟ್ ಒಳಗಡೆ ಇಣಿಕುತ್ತಿದ್ದಾಗ ಅವರ ಶಿರ ತಲೆಯ ಮೇಲ್ಗಡೆಯಲ್ಲಿ ಮಸೆದು ಹದನಾದ ಅಲಗೊಂದು ತೂಗುತ್ತಿತ್ತು. ಅದು ಒಮ್ಮೆಲೆ ಕೆಳಗೆ—ಅವರು ಒಳಗೆ ಪ್ರವೇಶಿಸಲೆಂದು ಕಾಲಿಟ್ಟ ಸ್ಥಳದಲ್ಲಿಯೇ—ಬಿದ್ದಿತು.

"ಸರ್ವ ನಾಶ! ಅದೇನದು ಬಿದ್ದದ್ದು ?" ಆ ಅಲಗಿನ ಕಡೆ ದಿಟ್ಟಿಸುತ್ತ ಭಯವಿಹ್ವಲ ಸ್ವರದಲ್ಲಿ ಪ್ಯಾರೆಟ್ ಕೇಳಿದರು.

ಆಗ ಏರೋಸ್ಮಿಥ್‌ರ ಮೈಯೆಲ್ಲ ನಡುಗುತ್ತಿತ್ತು. ಅವನು ಕಂಪಿತ ಹಸ್ತದಿಂದ ಬ್ಯಾಟರಿ ಹೊತ್ತಿಸಿ ಹೊಸತಿಲ ಮೇಲೆ ಬೆಳಕು ಚೆಲ್ಲಿದ. ಆ ಬೆಳಕಿನಲ್ಲಿ ಗಿಲೋಟಿನ್ ಎಂಬ ಹೆಸರಿನ ಸಾಂಘಾತಿಕ ಖಡ್ಗದ ನಿಶಿತ ಧಾರೆಯು ಥಳ ಥಳಿಸಿತು.

ಒಂದೆರಡು ನಿಮಿಷಗಳ ತರುವಾಯ ಏರೋಸ್ಮಿಥ್‌ನ ಭಯಮೂಢತೆ ದೂರವಾಗಲು ಅವನು ಬಾಗಿಲ ಬಳಿ ಹೋಗಿ ನಿಂತ. ಪ್ಯಾರೆಟರೂ ಅವನ ಪಕ್ಕದಲ್ಲಿ ಹೋಗಿ ನಿಂತರು. ಇಬ್ಬರೂ ಬಾಗಿ ಆ ಪದಾರ್ಥವೇನೆಂದು ಪರೀಕ್ಷಿಸತೊಡಗಿದರು. ಪ್ಯಾರೆಟರು ಆ ಅಸ್ತ್ರವನ್ನು ಎರಡೂ ಕೈಗಳಿಂದ ಎತ್ತಿಕೊಳ್ಳಲು ಹವಣಿಸಿದರು. ಅದು ಮಿಸುಕಲಿಲ್ಲ.

"ಇದು ಯಂತ್ರದ ಸಹಾಯದಿಂದಲೇ ಚಲಿಸಿದೆ; ಯಾರೂ ಇದನ್ನು ಮುಟ್ಟಿಲ್ಲ. ಬಹು ಭಯಂಕರ ಖಡ್ಗ. ಬಹು ಭಾರವಾದದ್ದು; ಸಹಜ ಶಕ್ತಿಯಿಂದ ಮಿಸುಕಾಡುವುದೂ ಇಲ್ಲ. ಬಾಗಿಲು ತೆರೆದು ಒಳಗೆ ತಲೆ ಹಾಕುತ್ತಲೂ ರಭಸದಿಂದ ತಲೆಯ ಮೇಲೆ ಬೀಳುವಂತೆ ಚೌಕಟ್ಟಿನ ಮೇಲ್ಭಾಗದಲ್ಲಿ ಹೊಂದಿಸಿ, ಯಾವುದೋ ಅಜ್ಞಾತ ಶಕ್ತಿಯಿಂದ ಚಲಿಸುವಂತೆ ವ್ಯವಸ್ಥೆ ಮಾಡಿದ್ದಾರೆ." ಎಂದು ಪ್ಯಾರೆಟ್ ತಮ್ಮ ಅಭಿಪ್ರಾಯವನ್ನು ಪ್ರಕಟಿಸಿದರು. ಆಮೇಲೆ ಏರೋಸ್ಮಿಥ್‌ನ ಕಡೆ ನೋಡುತ್ತ ಗಂಭೀರ ಭಾವದಿಂದ ಮತ್ತೆಂದರು: "ನಾನು ಹೊಸತಿಲೊಳಗೆ ಪ್ರವೇಶಿಸಿದೊಡನೆಯೇ ಜೀವಕ್ಕೆರವಾಗುವೆನೆಂದು ನಿಮಗೆ ಅದು ಹೇಗೋ ಅನಿಸಿದಂತೆ ಕಾಣುತ್ತದೆ. ಅದಕ್ಕೇ ನನ್ನನ್ನು ಹಾಗೆ ಹೊರಕ್ಕೆಳೆದುಕೊಂಡಿರಿ. ಒಂದರೆನಿಮಿಷ ನೀವು ತಡಮಾಡಿದ್ದರೆ ನನ್ನ ಚಂಡೇ ಹಾರುತ್ತಿತ್ತು. ನಿಮ್ಮ ಎಚ್ಚರಿಕೆ ನಮ್ಮನ್ನು ಉಳಿಸಿತು."

ಏರೋಸ್ಮಿಥ್‌ನೂ ಗಂಭೀರವಾಗಿಯೇ ಉತ್ತರವಿತ್ತ: "ನಿಜ. ನೀವು ನನ್ನೆಳೆ ಯುವುದಕ್ಕೆ ಅರೆಕ್ಷಣ ವಿಲಂಬವಾಗಿದ್ದರೆ ನಿಮ್ಮ ಜೀವ ಉಳಿಯುತ್ತಿರಲಿಲ್ಲ. ಮತ್ತೆ ನಿಮ್ಮ ಬದಲು ನಾನೇ ಮುಂದೆ ಒಳಹೊಗಲು ಪ್ರಯತ್ನಿಸಿದ್ದರೆ ನನ್ನ ತಲೆಯೇ ಆಹುತಿಯಾಗುತ್ತಿತ್ತು. ದೈವಾನುಗ್ರಹದಿಂದ ನಿಮ್ಮ ಜೀವ ಉಳಿ ಯಿತು. ಇದರಲ್ಲಿ ನನ್ನ ಕರ್ತೃತ್ವವೇನೂ ಇಲ್ಲ. ಇಂದು ಬೆಳಗಾಗುವುದರೊ ಳಗೆ ಹೀಗೆಯೇ ಅಕಲ್ಪಿತ ರೀತಿಯಿಂದ ನನ್ನ ಪ್ರಾಣವನ್ನು ನೀವು ಉಳಿಸಲಿಕ್ಕಿಲ್ಲ —ಎಂದಾದರೂ ಯಾರು ಹೇಳಬಲ್ಲರು? ನಾವಿಲ್ಲಿಗೆ ಬಂದು ಕತ್ತಲೆಯಲ್ಲಿ ಸುತ್ತುತ್ತಿದ್ದೇವೆ. ಹೆಜ್ಜೆಹೆಜ್ಜೆಗೂ ಸಾವಿನೊಡನೆ ಹೋರಾಡಲು ಸಿದ್ಧರಾಗಿರ ಬೇಕು ನಾವು. ಈ ಮನೆಯಲ್ಲಿ ಯಾರಾದರೂ ಇದ್ದಾರೆಯೇ, ಅಥವಾ ಬಾಗಿ ಲಲ್ಲಿ ಶೂಲದ ಏರ್ಪಾಟುಮಾಡಿ ಎಲ್ಲರೂ ಹೊರಟು ಹೋಗಿದ್ದಾರೆಯೇ ಹೇಳು ವುದು ಕಠಿನ."

—'ಅದನ್ನು ಅನುಮಾನಿಸುವುದು ಸಾಧ್ಯವಿಲ್ಲದಿದ್ದರೂ, ನಾವು ಈ ಮನೆಯೊಳಗೆ ಪ್ರವೇಶಿಸಿದರೆ ನಮಗೆ ದೊರೆಯುವ ಆತಿಥ್ಯ ಯಾವ ಬಗೆಯದೆಂ ಬುದನ್ನು ಮಾತ್ರ ಬಾಗಿಲಲ್ಲಿಯೇ ಕಂಡಾಯಿತು." ಎಂದರು ಪ್ಯಾರೆಟ್.

ಆಮೇಲೆ ಇಬ್ಬರೂ ಜೋಕೆಯಿಂದ ಒಳಹೊಕ್ಕರು. ಏರೋಸ್ಮಿಥ್ ಬಾರಬಾರಾನ ಬಿಡುಗಡೆಗಾಗಿ ಬಂದಾಗ ಈ ಮನೆಯ ಸ್ಥಿತಿಗತಿ ನೋಡಿದ್ದ. ಇದು ಮಾನವ ಜೀವನಕ್ಕೆ ಪ್ರತಿಕೂಲವಾದುದು; ಇಲ್ಲಿಯ ಗಾಳಿಯಲ್ಲಿ ಮೃತ್ಯು ವಿನ ಅದೃಶ್ಯ ವಿಷ ಬೆರೆತಿದೆ. ಇದು ಅಶಾಂತಿ, ಕಷ್ಟ, ಅಭಿಶಾಪಗಳಿಂದ ತುಂಬಿದೆ. ಏರೋಸ್ಮಿಥ್‌ನ ಈ ಭಾವನೆ ಮೆಲ್ಲಮೆಲ್ಲನೆ ಪ್ಯಾರೆಟರ ಹೃದಯ ವನ್ನು ವ್ಯಾಪಿಸಿತು.

"ಈ ಮನೆ ನಮಗೆ ಪ್ರತಿಕೂಲ!" ವಿದ್ಯುದ್ದೀಪವನ್ನು ಹಚ್ಚುವ ಬಿರಡಿ ಯನ್ನು ಹುಡುಕುತ್ತ ಪ್ಯಾರೆಟ್ ಎಂದರು; ಬಿರಡಿ ಸಿಕ್ಕಿತು. ಅದನ್ನೊತ್ತಿ ದೀಪ ಹಚ್ಚಿದರು. ಆದರೆ ಬೆಳಕಾದರೆ ಮನೆಯ ಭೀಕರತೆ ಕಡಿಮೆಯಾದೀತೆಂದರೆ ಆ ಆಸೆ ವ್ಯರ್ಥವಾಯಿತು. ಆ ಬೆಳಕಿನಿಂದ ಅದರ ರಹಸ್ಯಾಂಧಕಾರವು ಘನೀ ಭೂತವೇ ಆಯಿತು. ಪ್ರತಿಕ್ಷಣವೂ ವಿಪತ್ಕಾರಿ ಎಂಬುದೇ ಮತ್ತಷ್ಟು ಸ್ಪಷ್ಟ ವಾಯಿತು. ಆ ಕಟ್ಟಡದ ಪ್ರತಿಯೊಂದು ಕೋಣೆಯೂ ಅತ್ಯಂತ ನಿಃಶ್ಶಬ್ದ, ಗಾಂಭೀರ್ಯಪೂರ್ಣ—ಅವರಿಗೆ ತಮ್ಮ ನಿಃಶ್ವಾಸದ ಶಬ್ದ ಕೂಡ ಕೇಳಿಸುತ್ತಿತ್ತು

ಅಂಥಃಸ್ತಬ್ಧತೆ. ಈ ಅಸ್ವಾಭಾವಿಕ ನಿಃಸ್ತಬ್ಧತೆ ಭಯಾನಕವೇ ಆಗಿತ್ತು.

ಪ್ಯಾರೆಟ್ ತೀಕ್ಷ್ಣ ದೃಷ್ಟಿಯಿಂದ ಸುತ್ತಲೂ ನೋಡಿದರು. "ಇಲ್ಲ. ಇಲ್ಲಿ ಉಲ್ಲೇಖ ಯೋಗ್ಯವಾದ ಯಾವ ವಸ್ತುವೂ ಕಾಣುವುದಿಲ್ಲ. ಈ ಎಡಗಡೆ ಕಾಣುವ ಕೋಣೆಯೇ ಲೆಬೋರೇಟರಿಯೇನು ?" ಎಂದು ಕೇಳಿದರು.

"ಹೌದು, ಇದೇ ಆ ಅದ್ಭುತ ಲ್ಯಾಬೋರೇಟರಿ!" ಎರೋಸ್ಮಿಥ್ ಹೇಳಿದ.

ಪ್ಯಾರೆಟ್ ತಮ್ಮೊಬ್ಬ ಅನುಚರನನ್ನು ಕರೆದರು: "ಎಟ್ಕಿನ್ಸನ್, ನೀನು ಇಲ್ಲಿಯೇ ಕಾಯುತ್ತ ಇರು. ನಾವು ಸಂಶೋಧನೆ ನಡೆಸುತ್ತಿರುವ ವರೆಗೂ ಇಲ್ಲಿಂದ ಕದಲಕೂಡದು. ಈಕಡೆ ಯಾರಾದರೂ ಬಂದರೆ, ಯಾರದಾದರೂ ದನಿಗಿನಿ ಕೇಳಿದರೆ, ಶೀಟಿಯಿಂದ ಕೂಡಲೇ ನಮ್ಮನ್ನು ಎಚ್ಚರಿಸಬೇಕು. ನಾವು ತತ್ಕ್ಷಣವೇ ನಿನ್ನೊಡನೆ ಸಹಕರಿಸುವೆವು. ಬಂದೂಕು ಅಣಿಮಾಡಿಕೊಂಡೇ ಇರಬೇಕು--ಅಜ್ಞಾತ ಶತ್ರುವಿನ ಆಕ್ರಮಣ ಯಾವಾಗ ಆದೀತೋ ನಿಯಮವಿಲ್ಲ. ಮಿ. ಕಿಟ್, ನಿಮಗೆ ಹೇಳುವ ಕಾರಣವೇನಿಲ್ಲ, ನೀವು ಸದಾ ಜಾಗೃತರು."

ಪಿಸ್ತೂಲನ್ನು ಕೈಯೊಳಗೆ ತೆಗೆದುಕೊಂಡು ಪ್ಯಾರೆಟ್ ಲ್ಯಾಬೋರೇಟರಿಯ ಬಾಗಿಲ ಬಳಿ ಹೋದರು. ಬಾಗಿಲು ಕೀಲಿಯಿಂದ ಭದ್ರಗೊಳಿಸಿದ್ದಿರಬಹುದೆಂದು ಅವರಿಗೆನಿಸಿತ್ತು. ಅದರ ಹಿಡಿಯನ್ನು ಹಿಡಿದು ತಿರುವಿ ತಳ್ಳಿದೊಡನೆ ಅದು ತೆರೆದುಬಿಟ್ಟಿತು. ಅವರು ಒಂದು ಪಕ್ಕಕ್ಕೆ ಸರಿದು ನಿಂತು ಬಾಗಿಲನ್ನು ಪೂರ್ಣವಾಗಿ ತೆರೆದರು. ಒಳಗೆ ಕತ್ತಲು ಕವಿದುದರಿಂದ ಅಲ್ಲಿಯದೇನೂ ಕಾಣಿಸಲಿಲ್ಲ. ಒಮ್ಮೆಲೆ ಒಳನುಗ್ಗಿದರೆ ಏನಿದೆಯೋ ಎಂದುಕೊಂಡು ಬ್ಯಾಟರಿಯ ಬೆಳಕನ್ನು ಬಿಟ್ಟು ನೋಡಿದರು. ಅಲ್ಲಿ ಯಾವ ವಸ್ತುಗಳೂ ಕಾಣಲಿಲ್ಲ; ಕೋಣೆ ಬರಿದು.

ಅದನ್ನು ನೋಡಿ ಪ್ಯಾರೆಟ್ ಎಂದರು: "ಎಲ್ಲ ಸಾಮಾನುಗಳನ್ನು ಸ್ಥಳಾಂತರ ಮಾಡಿದ ಹಾಗೆ ಕಾಣುತ್ತದೆ. ಆದರೂ ಪ್ರಿಂಗಲ್ ಹಗಲೂ ರಾತ್ರಿ ಸುತ್ತುಕಡೆ ಪಹರೆ ಮಾಡುತ್ತಲೇ ಇದ್ದಾನೆ! ನನಗೆನಿಸುತ್ತದೆ—ಈ ರೀತಿ ಕಾವಲಿನ ಎರ್ಪಾಟು ಮಾಡದೆ ನಾವು ಮೊದಲೇ ಶೋಧನೆಯನ್ನು ನಡೆಸಿದ್ದರೆ ಬಹಳ ಲಾಭವಿತ್ತು; ಆ ಕೇಡಿಗರು ಜಾಗರೂಕರಾಗಿ ಈರೀತಿ ಗುಟ್ಟಾಗಿ ಓಡಿ—"

ಮಾತನ್ನು ಪೂರ್ತಿಗೊಳಿಸದೆಯೇ ಅವರು ಲ್ಯಾಬೋರೇಟರಿಯ ದೀಪದ ಬಿರಡಿಯೊತ್ತಿ ಬೆಳಕು ಮಾಡಿದರು. ಗೃಹವಾಸಿಗಳು ಆಕಸ್ಮಿಕವಾಗಿ ಪಲಾಯನ ಮಾಡಿದ ಬಗ್ಗೆ ಸುಸ್ಪಷ್ಟ ನಿದರ್ಶನಗಳು ಅವರಿಗೆ ಕಂಡುಬಂದವು. ನಾನಾ ಪ್ರಕಾರದ ಯಂತ್ರಗಳನ್ನೂ ರಾಸಾಯನಿಕ ಸಲಕರಣೆಗಳನ್ನೂ ಇಡುತ್ತಿದ್ದ ಬೆಂಚಿನ ಮೇಲೆ ಕೆಲವು ಮಾಸಿದ ಕಾಜಿನ ನಳಿಕೆಗಳೂ ಕೆಲವು ನೀರಿನ ಸೀಸೆ ಳೂ ಇದ್ದುವಲ್ಲದೆ ಬೇರೆ ಯಾವ ದ್ರವಗಳೂ ಇರಲಿಲ್ಲ. ಪುಸ್ತಕ ತುಂಬಿದ ಕಪಾಟೂ ಬರಿದಾಗಿತ್ತು.

"ಸ್ವಲ್ಪ ಸಮಯದಲ್ಲಿಯೇ ; ಅವರು ಎಲ್ಲ ವಸ್ತುಗಳನ್ನು ಸಾಗಿಸಿದ್ದಾರೆ. ಆದರೆ ನಮ್ಮ ಜನ ಮನೆಯ ನಾಲ್ಕು ದಿಕ್ಕುಗಳಲ್ಲಿ ಕಾವಲು ನಡೆಸಿರುವಾಗ, ಇಷ್ಟು ಅಲ್ಪಾವಕಾಶದಲ್ಲಿ ಅವರಿಗೆ ಕಾಣದಂತೆ ಎಲ್ಲವನ್ನೂ ಹೇಗೆ ಸಾಗಿಸಿದರು?" ಪ್ಯಾರೆಟ್ ವಿಚಲಿತ ಸ್ವರದಲ್ಲಿ ನುಡಿದರು.

ಇತರ ಕೋಣೆಗಳನ್ನು ಪರೀಕ್ಷಿಸಿದರು. ಯಾವ ಫಲವೂ ದೊರೆಯಲಿಲ್ಲ. ಅಲ್ಲಿಯ ಎಲ್ಲ ವಸ್ತುಗಳೂ ಕಾವಲುಗಾರರ ಕಣ್ಣು ತಪ್ಪಿಸಿ ಸಾಗಿಸಲಾಗಿದ್ದವು. ಆದರೆ ಹೇಗೆ ಒಯ್ದರು, ಎಲ್ಲಿಗೆ ಒಯ್ದರು ಎಂಬ ರಹಸ್ಯದ ಸೂತ್ರ ಮಾತ್ರ ಅವರಿಗೆ ಸಿಕ್ಕಲಿಲ್ಲ. ಒಂದು ಕೋಣೆಯನ್ನೂ ಅವರು ಹುಡುಕದೆ ಉಳಿಸಲಿಲ್ಲ. ಎಲ್ಲಿಯೂ ಉಲ್ಲೇಖಯೋಗ್ಯವಾದ ಯಾವ ವಸ್ತುವೂ ಇರಲಿಲ್ಲ. ಆದರೆ ಪ್ರತಿ ಕೋಣೆಯಲ್ಲಿಯೂ ನಾನಾ ಪ್ರಕಾರದ ಭೀತಿಯ ಅಸ್ತಿತ್ವವು ಮಾತ್ರ ಅವರ ಅನುಭವಕ್ಕೆ ಬಂದಿತು. ಯಾವುದೋ ಪ್ರೇತದ ಛಾಯಾಮೂರ್ತಿ ನಿಶ್ಶಬ್ದ ವಾಗಿ ಅವರನ್ನು ಅನುಸರಿಸುತ್ತಿರುವಂತೆ ದಿಗಿಲುಂಟಾಗುತ್ತಿತ್ತು. ನಿರ್ಜನವಾದ ಕೋಣೆಗಳ ನಿಃಸ್ತಬ್ಧತೆಶೂನ್ಯತೆ ಅವರನ್ನು ನುಂಗಲುದ್ಯುಕ್ತವಾಗಿದ್ದವು. ತಮಗ ರಿಯದಂತೆ ಯಾರೋ ನಿಃಶ್ಶಬ್ದವಾಗಿ ತಮ್ಮನ್ನು ಅನುಸರಿಸುತ್ತಿದ್ದಂತೆ, ತಮ್ಮ ಪ್ರತಿಯೊಂದು ಕಾರ್ಯವನ್ನು ನೋಡುತ್ತಿದ್ದಾರೆಂಬಂತೆ ಅವರಿಗೆ ಭಾಸವಾಗು ತ್ತಿತ್ತು.

## ೯

ಮಿ. ಪ್ಯಾರೆಟ್ ಪುನಃ ಹಾಲಿಗೆ ಬಂದು ಉಸ್ಸೆಂದು ಬೆಮರೊರಸಿಕೊಂಡರು. ಅವರ ಮುಖ ಚಿಂತಾಕ್ಲಿಷ್ಟವಾಗಿ ಮಲಿನವಾಗಿತ್ತು; ಮೈ ದಣಿದು ಶಿಥಿಲವಾಗಿತ್ತು. ಅತ್ಯಂತ ತ್ರಾಸದಿಂದ ಅವರೆಂದರು: "ಎಂಥ ಭಯಾನಕ ಮೃತ್ಯುಭವನವನ್ನೇ ಬಂದು ಹೊಕ್ಕೆವು! ಇಲ್ಲಿಯ ಗಾಳಿಯೇ ಅಸಹ್ಯವಾಗಿದೆ. ಇಲ್ಲಿ ಎಲ್ಲವೂ ಅಸ್ವಾಭಾವಿಕ, ಅಲೌಕಿಕ, ರಹಸ್ಯಜಾಲ. ಮನುಷ್ಯಪ್ರಾಣಿ ಜೀವಿಸಬಲ್ಲನೇ ಇಲ್ಲಿ?"

—"ಹೌದು, ನೀವೆನ್ನುವುದು ನೂರಕ್ಕೆ ನೂರು ಸತ್ಯ, ಅದೇಕೆ, ಇನ್ನೂ ಹೆಚ್ಚು. ಆದರೂ ಮಿಸ್ ಫೆಲ್ಸ್‌ಟನ್ ಇಲ್ಲಿಯೇ ಇದ್ದಾಳೆ, ಇಲ್ಲಿಯೇ ಇದ್ದಳು!"

—"ನಾನೂ ಅದನ್ನು ನಂಬುತ್ತೇನೆ. ಆದರೆ ಅವರು ಅವಳನ್ನೀಗ ಇಲ್ಲಿ ಇಟ್ಟು ಹೋಗಿದ್ದಾರೋ ಇಲ್ಲವೋ ಸಂದೇಹ; ಯಾವ ಕೋಣೆಯೊಳಗೂ ಆಕೆ ಕಾಣಲಿಲ್ಲ. ಇಲ್ಲಿಯ ಸ್ಥಳ ಶೋಧನೆಯಿಂದ ಯಾವ ಫಲವೂ ದೊರೆಯಲಿಲ್ಲ. ಇದು ಅತಿ ಭಯಾನಕ ಸ್ಥಾನವೆಂಬುದು ಸತ್ಯವಾದರೂ ಇದನ್ನು ಬಿಟ್ಟು ಹೋಗಲು ಮನಸ್ಸಾಗಲೊಲ್ಲದು. ಇಲ್ಲಿಯ ಕೆಲಸ ಮುಗಿದಿಲ್ಲವೆಂದು ಎನಿಸುತ್ತದೆ. ಮಿ. ಏರೋಸ್ಮಿಥ್, ಈ ಕಟ್ಟಡಕ್ಕೆ ತಾಗಿ ಎಲ್ಲಿಯಾದರೂ ಗುಪ್ತಕೋಣೆ, ಅಥವಾ ಗುಪ್ತಮಾರ್ಗ ಇರಬಹುದೇ? ನಿಮಗೇನೆನಿಸುತ್ತದೆ?"

—"ಇರಲಿಕ್ಕಿಲ್ಲ ಎಂದು ಹೇಗೆ ಹೇಳುವುದು? ಇರುವ ಸಂಭವವೇ ಉಂಟು. ನಾನು ಇಂದು ಬ್ರಿಟಿಶ್ ಮ್ಯುಜಿಯಮಿನ ಲಾಯಬ್ರರಿಗೆ ಹೋಗಿದ್ದೆ; ಅಲ್ಲಿ ಒಂದು ಪುಸ್ತಕ ನೋಡಿದೆ; 'ಇಂಗ್ಲಂಡಿನ ಗುಪ್ತ ಸ್ಥಾನಗಳ ಪರಿಚಯ' ಎಂದು ಅದರ ಹೆಸರು; ೧೭೩೬ನೆಯ ಕ್ರಿಸ್ತವರ್ಷದ ಪುಸ್ತಕ; ಸೆಸ್ಟಿಮ್ಸ್ ಎಂಬವರು ಬರೆದದ್ದು. ಆದರಲ್ಲಿ—"

—"ಆ ಲೇಖಕನು ಇಂಗ್ಲಂಡಿನ ಎಲ್ಲ ಗುಪ್ತ ಸ್ಥಾನಗಳ ಪರಿಚಯವನ್ನು ಸಂಗ್ರಹಿಸಿದ್ದಾನೆಯೆ? ಅವನೊಬ್ಬ ಸರ್ವಜ್ಞನೆ? ಲೇಖಕರು ಅನೇಕ ಕಾಲ್ಪನಿಕ ಕಥೆಗಳನ್ನು ಬರೆದು ಶಿಕ್ಷಿತ ಸಮಾಜದಲ್ಲಿ ಮನ್ನಣೆ ಪಡೆಯುವರೆಂಬುದು ನನಗೆ ಗೊತ್ತು. ಆ ಲೇಖಕನು ಕಲ್ಪನಾಬಲದಿಂದಲೇ ಅವೆಲ್ಲ ಗುಪ್ತಸ್ಥಳಗಳ ಪರಿಚಯವನ್ನು ಸಂಗ್ರಹಿಸಿರುವನೋ? ಏನೇ ಇರಲೊಲ್ಲದು, ಅವನೇನು

ಬರೆದಿದ್ದಾನೋ ನೋಡುವ, ಹೇಳಿರಿ."

ಏರೋಸ್ಮಿಥ್ ಜೇಬಿನಿಂದ ಒಂದು ಕಾಗದವನ್ನು ತೆಗೆದು, "ನಾನದನ್ನು ಬರೆದುಕೊಂಡೇ ಬಂದಿದ್ದೇನೆ, ನಿಮ್ಮ ಮುಂದೆ ಓದಿಬಿಡುತ್ತೇನೆ." ಎಂದು ಓದಿದ.

"........ಆ ಅಟ್ಟಾಲಿಕೆಯ ಕೋಣೆಗಳನ್ನು ಕೆಡವಿ ಆಗಿದಾಗ ಅವನ್ನು ಕೊಂಡ ಹುಬರ್ಟನಿಗೆ ಗೋಡೆಯ ಕೆಳಗೆ ಒಂದು ಗವಿಯು ಕಂಡಿತು. ಗವಿ ಗಭೀರವಾದುದು, ಅಂಧಕಾರಪೂರ್ಣ. ಅವನು ಅದರೊಳಗಿಳಿದು ನೋಡಿದ. ಅಲ್ಲಿಯ ಗುಪ್ತ ಮಾರ್ಗ ಅವನನ್ನು ಕೆಲವು ಕೋಣೆಗಳಿಗೆ ಕರೆದೊಯ್ದಿತು. ಆ ಭೀಷಣ ದೃಶ್ಯದಿಂದ ಅವನ ಪ್ರತಿ ಮೂಳೆಯಲ್ಲಿಯೂ ಕಂಪನ ಹುಟ್ಟಿತು. ಅವನು ಬೆದರಿ ತತ್‌ಕ್ಷಣವೇ ಹೊರಗೆ ಬಂದು, ದೊಡ್ಡ ಕಲ್ಲು ಹಾಕಿಸಿ ಆ ಗವಿಯನ್ನು ಮುಚ್ಚಿಸಿಬಿಟ್ಟ. ಆದರ ಮೇಲೆ ಹಾಲಿನ ನೆಲಗಟ್ಟು ತಯಾರಾಯಿತು. ಆದುದರಿಂದಲೇ ಮುಂದೆ ಯಾರಿಗೂ ಅಲ್ಲಿ ಗವಿಯಿರುವುದೆಂಬುದು ಗೊತ್ತಾಗಲಿಲ್ಲ." ಓದುವುದನ್ನು ಮುಗಿಸಿ ಏರೋಸ್ಮಿಥ್ ಮಾತು ಮುಂದುವರಿಸಿದ: "ಆ ಲೇಖಕನ ಈ ವರ್ಣನೆಯನ್ನು ಓದಿದರೆ, ಅದಕ್ಕೂ ಈ ಕಟ್ಟಡಕ್ಕೂ ಸಾದೃಶ್ಯವಿರುವುದು ಕಂಡುಬರುತ್ತದೆ. ನರ್ಕ್ಲಿಜ್ ಮತ್ತು ಅವನ ಕಳ್ಳರ ಕೂಟದವರು ಈ ಮನೆಯ ಕೆಳಗೇ ಯಾವುದೋ ಭೂಗರ್ಭದ ಕೋಣೆಯಲ್ಲಿ ಅಡಗಿರಬೇಕೆಂದು ನನಗೆನಿಸುತ್ತದೆ. ನನಗೆ ಅವರ ಅಸ್ತಿತ್ವ ಸುಸ್ಪಷ್ಟವಾಗಿ ಭಾಸವಾಗುತ್ತಿದೆ."

—"ನನಗೂ ಸ್ವಲ್ಪ ಹಾಗೆಯೇ ತೋರಿದೆ. ಆದರೆ ನಾವು ಇಲ್ಲಿಂದಲೇ ಹಿಂದಿರುಗಬೇಕೇ, ಇಲ್ಲವೆ ಮುಂದುವರಿಯಲು ಉಪಾಯವುಂಟೇ ಎಂಬುದೇ ಈಗಿನ ಪ್ರಶ್ನೆ."

—"ಆ ಪುಸ್ತಕದಲ್ಲಿ ಆ ಕೋಣೆಗಳ ರಚನೆ, ವೈಶಿಷ್ಟ್ಯಗಳನ್ನೂ ಲೇಖಕ ವರ್ಣಿಸಿದ್ದ. ಆದರೆ ಆ ಪುಟಗಳು ಕೆಲವು ಕಾಣಲಿಲ್ಲ. ಈ ವಿಷಯವನ್ನು ವಾಚನಾಲಯದ ಆಡಳಿತಗಾರರ ಗಮನಕ್ಕೆ ಒಯ್ದೆ. ಅವರು ಪುಸ್ತಕವನ್ನು ಪರೀಕ್ಷಿಸಿ, 'ಇದನ್ನು ಕೊನೆಯ ಬಾರಿ ಓದಲು ತೆಗೆದುಕೊಂಡ ಮನುಷ್ಯನೇ ಪುಟಗಳನ್ನು ಹರಿದಿರಬೇಕು; ಏಕೆಂದರೆ ಈ ಮೊದಲು ಯಾವ ಓದುಗನೂ ದೂರನ್ನು ತಂದಿಲ್ಲ' ಎಂದು ಹೇಳಿದರು. 'ಈಗ ಆರು ವಾರಗಳ ಹಿಂದೆ ಈ

ಪುಸ್ತಕವನ್ನು ಒಬ್ಬರಿಗೆ ಕೊಟ್ಟಿದ್ದೆ.' ಎಂದೂ ತಿಳಿಸಿದರು. ಅದನ್ನು ಓದಲು ತೆಗೆದುಕೊಂಡ ಮನುಷ್ಯನ ರೂಪ-ಚರ್ಯೆ ಎಂತಹದೆಂಬುದು ಅಡಳಿತಗಾರನಿಗೆ ನೆನಪಿಲ್ಲ; ಅವನು ವಿದೇಶೀಯನೆಂಬುದು ಮಾತ್ರ ಚೆನ್ನಾಗಿ ನೆನಪಿದೆ."

—"ವಿದೇಶಿಯೇ ? ಆ ಮನುಷ್ಯ ಯಾರು ಎಂಬುದನ್ನು ಶೋಧಿಸಿ ತಿಳಿದುಕೊಂಡಿರುವಿರಾ ?"

—"ಆ ಪುಟಗಳನ್ನು ಕದ್ದವನು ನಕ್ಲಿಜನೆಂದೇ ನನ್ನ ಸಂದೇಹ. ಗ್ರಂಥಾಲಯದ ಅಡಳಿತೆಗಾರರೆದುರು ನಕ್ಲಿಜನ ರೂಪ-ಚರ್ಯೆಗಳ ವಿಶೇಷಗಳನ್ನು ಬಣ್ಣಿಸಿ, ಇಂಥವನೇ ?' ಎಂದು ಕೇಳಿದೆ ನಾನು. ಅದನ್ನು ಕೇಳಿ ಅವರು ತಮಗಾದ ವಿಸ್ಮಯವನ್ನು ಸೂಚಿಸುತ್ತ, 'ಹಾಂ, ಅವನೇ. ಪುಸ್ತಕ ತೆಗೆದುಕೊಂಡವನು ಖಂಡಿತ ಅವನೇ.' ಎಂದರು."

ಪ್ಯಾರೆಟ್ ಒಮ್ಮೆಲೆ ತಮ್ಮ ಕೈಗಡಿಯಾರ ನೋಡಿದರು. ಅವರ ಮುಖದಲ್ಲಿ ಸಂಕಲ್ಪದ ದೃಢತೆ ಪರಿಸ್ಫುಟವಾಯಿತು. ಅವರೆಂದರು: " ನಿಮ್ಮ ಅನುಮಾನ ನಿಜವೆಂದೇ ತೋರುತ್ತದೆ. ಆ ಕಳ್ಳರ ಕೂಟದವರು ಈ ಮನೆಯ ಕೆಳಗೆ ಪಾತಾಳ ಲೋಕವನ್ನು ನಿರ್ಮಿಸಿಕೊಂಡು ವಾಸವಾಗಿದ್ದಾರೆ; ನಮ್ಮ ಜನಗಳಿಗೆ ಗೊತ್ತಾಗದಂತೆ ಇಲ್ಲಿಯ ಎಲ್ಲ ವಸ್ತುಗಳನ್ನು ಅಲ್ಲಿಗೆ ಒಯ್ದಿದ್ದಾರೆ. ನಾವು ಇನ್ನಷ್ಟು ಪ್ರಯತ್ನಪಟ್ಟರೆ ಈಗಲೇ ಅವರನ್ನು ಹಿಡಿಯಬಹುದು. ಒಂದು ವೇಳೆ ಅವರು ನೆಲಮನೆಗೆ ಬೇರೊಂದು ಗುಪ್ತ ಮಾರ್ಗ ಮಾಡಿಕೊಂಡಿದ್ದರೆ ನಮ್ಮ ಸುಳಿವು ಹತ್ತಿದರೆ ಅಲ್ಲಿಂದಲೂ ಪಲಾಯನ ಮಾಡಬಹುದು."

ಅನಂತರ ಅವರು ಹಾಲಿನ ನೆಲವನ್ನು ಸೂಕ್ಷ್ಮವಾಗಿ ಪರೀಕ್ಷಿಸತೊಡಗಿದರು. ಆದರೆ ಅಲ್ಲಿ ಬಾಗಿಲಾಗಲಿ, ಎತ್ತಿ ತೆಗೆಯುವಂಥ ಹಲಗೆಗಳಾಗಲಿ ಕಾಣಲಿಲ್ಲ. ಅದರಿಂದ ಪ್ಯಾರೆಟ್ ಹತಾಶರಾಗಲಿಲ್ಲ. ಅನುಚರರೊಡನೆ ಸೇರಿ ಬಡಿಗೆಯಿಂದ ನೆಲವನ್ನು ಬಡಿಬಡಿದು ನೋಡಿದರು. ಗೋಡೆಗಳನ್ನೂ ಪ್ರತಿಯೊಂದು ಕಪಾಟನ್ನೂ ಶೋಧಿಸಿದರು. ಎಲ್ಲವೂ ನಿಷ್ಫಲ. ನೆಲಕ್ಕೆ ಜೋಡಿಸಿದ ಹಳೆಯ ಮರದ ಹಲಗೆಗಳನ್ನು ಎರಡೂ ಕಡೆಗಳಲ್ಲಿ ಮೊಳೆ ಹೊಡೆದು ಕೂಡಿಸಿದ್ದರಿಂದ. ಅಡಿಯಲ್ಲಿ ಸುರಂಗ ಮಾರ್ಗವಿದೆಯೋ ಇಲ್ಲವೋ ತಿಳಿಯುವುದು ಅಸಾಧ್ಯವಾಗಿತ್ತು.

"ಹುಂ, ಎಲ್ಲಿಯೂ ಮಾರ್ಗವಿಲ್ಲ!" ಎಂದು ತಮ್ಮಷ್ಟಕ್ಕೆಂಬಂತೆ ಪ್ಯಾರೆಟ್ ಉದ್ಗಾರ ತೆಗೆದರು.

"ಗುಪ್ತದ್ವಾರ ನಮಗೆ ಸಿಕ್ಕಲೊಲ್ಲದು ನಿಜ. ಆದರೆ ಅವರು ಇಲ್ಲಿಯೇ ಭೂಗರ್ಭದಲ್ಲಿ ಅಡಗಿದ್ದಾರೆಂಬಲ್ಲಿ ನನಗೆ ಸಂದೇಹವೇ ಇಲ್ಲ. ಖಂಡಿತ ಅವರು ಈ ಮನೆಯಲ್ಲಿಯೇ ಇದ್ದಾರೆ." ಎಂದ ಏರೋಸ್ಮಿಥ್.

ಅವನ ಕಣ್ಣುಗಳು ಒಮ್ಮೆಲೆ ಮಿನುಗಿದವು, ಹಾಲಿನ ಒಂದು ಕಡೆಯಲ್ಲಿ ಅಟ್ಟದ ಮೆಟ್ಟಿಲ ಬಳಿ ಹಳೆಯ ಕಾಲದ ಒಂದು ದೊಡ್ಡ ಸಂದುಕವಿತ್ತು. ಅದು ಏರೋಸ್ಮಿಥ್‌ನ ನೋಟವನ್ನು ಸೆಳೆಯಿತು. "ನಾವು ಹಾಲಿನ ಎಲ್ಲ ಅಂಶ ಗಳನ್ನೂ ಪರೀಕ್ಷಿಸಿದೆವು. ಈ ಪೆಟ್ಟಿಗೆಯೊಂದು ಉಳಿದುಕೊಂಡಿದೆ. ।ಇದನ್ನೂ ಪರೀಕ್ಷಿಸುವುದು ಅಗತ್ಯ. " ಎಂದು ಪ್ಯಾರೆಟರಿಗೆ ಉಸುರಿದ.

ಆದಕ್ಕೆ ಪ್ಯಾರೆಟ್ "ಎಲ್ಲೆಲ್ಲಿಯೂ ಗುಪ್ತ ಮಾರ್ಗ ಸಿಕ್ಕಲಿಲ್ಲ. ಇನ್ನು ಈ ಪೆಟ್ಟಿಗೆಯಲ್ಲಿ ಪಾತಾಳ ಲೋಕದ ಹಾದಿ ಸಿಕ್ಕುವುದಂತೆ! ನಿಮ್ಮ ಕಲ್ಪನಾ ಶಕ್ತಿಯೂ ಬಲು ಹರಿತ! ಆದರೆ ನಿಮ್ಮ ಆಕ್ಷೇಪವಾದರೂ ಏಕೆ ಉಳಿಯ ಬೇಕು? ಪೆಟ್ಟಿಗೆಯಲ್ಲೂ ನೋಡುವಾ." ಎಂದು ಉಪೇಕ್ಷೆಯಿಂದ ನುಡಿದರು.

ಸಂದುಕಕ್ಕೆ ದೊಡ್ಡದೊಂದು ಕೀಲಿ ಹಾಕಿದ್ದರು. ತಾವು ತಂದಿದ್ದ ಅಸ್ತ್ರಗಳಿಂದ ಅದನ್ನು ಒಡೆದು ತೆಗೆಯಬೇಕಾಗುವುದೆಂದು ಅವರು ಎಣಿಸಿದ್ದರು. ಆದರೆ ಕೈಯಿಂದ ಸ್ವಲ್ಪ ಬಲವಾಗಿ ಜಗ್ಗಿದೊಡನೆ ಅದು ಬಿಚ್ಚಿ ಬಿಟ್ಟಿತು—ಅದು ಕೀಲಿಸದೆ ಹಾಗೆಯೆ ಒತ್ತಿ ಇಡಲಾಗಿತ್ತು. ಕೀಲಿಯನ್ನು ತೆಗೆದು ಪ್ಯಾರೆಟ್ ಮುಚ್ಚಳವನ್ನು ಎರಡು ಕೈಗಳಿಂದಲೂ ಎತ್ತಲು ಹೋದರು. ಮೈಯೊಳಗಿನ ಕಸುವನ್ನೆಲ್ಲ ಉಪಯೋಗಿಸಿ ಸೆಣಸಿದರೂ ಮುಚ್ಚಳ ಜುಮ್ಮೆನ್ನಲಿಲ್ಲ. ಏರೋ ಸ್ಮಿಥ್‌ನೂ ಅವರ ನೆರವಿಗೆ ಹೋಗಬೇಕಾಯಿತು. ಇಬ್ಬರ ಮೈಮೇಲೂ ಜೋರನೆ ನೀರಿಳಿದಾಗ ಮುಚ್ಚಳ ತೆರೆಯಿತು.

ಮುಚ್ಚಳವನ್ನು ಗೋಡೆಗೊರಗಿಸಿದವರೇ ಇಬ್ಬರೂ ಕೈಬಿಟ್ಟು ಹೌಹಾರಿ ದೂರ ನೆಗೆದು ನಿಂತರು. ಭಯದಿಂದ ಅವರ ಮೈಮೇಲೆ ಎಚ್ಚರವೇ ಇಲ್ಲದಂ ತಾಯಿತು. ಪೆಟ್ಟಿಗೆಯ ಮುಚ್ಚಳವನ್ನು ತೆಗೆದೊಡನೆಯೇ; ಯಾವುದೋ ಪಿಶಾಚವು ತನ್ನ ಸ್ಪರ್ಶದಂತೆ ಶೀತಲವಾದ ಅದೃಶ್ಯ ಹಸ್ತದಿಂದ ತಮ್ಮ ಮೇಲೆ ಆಕ್ರಮಣ ಮಾಡಿದಂತೆ ಅವರಿಗಾಯಿತು. ಆ ಆಕ್ರಮಣ ಎಷ್ಟು ಆಕಸ್ಮಿಕವೋ

ಅಷ್ಟೇ ತೀವ್ರವಾಗಿತ್ತು. ಒಂದು ನಿಮಿಷದ ತರುವಾಯ ಅವರು ತಮ್ಮ ವಿವ್ಹಲ ತೆಯನ್ನು ಸಾಧ್ಯವಿದ್ದಷ್ಟೂ ಕಡಿಮೆ ಮಾಡಿಕೊಂಡು ಪುನಃ ಪೆಟ್ಟಿಗೆಯ ಬಳಿ ಸಾರಿದರು. ಅದ್ಭುತ ಭಯಾನಕ ! ಪೆಟ್ಟಿಗೆಯೊಳಗೆ ವಯಸ್ಸಾದ ಹೆಂಗುಸಿನ ಹೆಣವಿತ್ತು.

"ಬೇರೆ ಯಾವ ಪ್ರಮಾಣಗಳು ಸಿಕ್ಕದಿದ್ದರೂ ಸ್ತ್ರೀಹತ್ಯೆಯ ಆರೋಪ ದಿಂದ ನರಪಶು ಮೆಲ್ಡ್ರುಮನನ್ನು ಬಂಧಿಸಬಹುದು." ಬೆವರೊರಸಿಕೊಳ್ಳುತ್ತ ನಿಂತಿದ್ದ ಏರೋಸ್ಮಿಥ್‌ನನ್ನು ಕುರಿತು ಪ್ಯಾರೆಟ್ ನುಡಿದರು.

ಏರೋಸ್ಮಿಥ್ ಅವರ ಮಾತಿಗೆ ಯಾವ ಅಭಿಪ್ರಾಯವನ್ನೂ ಕೊಡದೆ ಸುಮ್ಮನೆ ಅವರ ಪಕ್ಕದಲ್ಲಿ ಹೋಗಿ ಪೆಟ್ಟಿಗೆಯೊಳಗಿನ ಹೆಣವನ್ನು ಎವೆಯಿಕ್ಕದೆ ನೋಡುತ್ತ ನಿಂತ.

ಹೆಂಗುಸು ಮುದುಕಿಯಲ್ಲವಾದರೂ ಯೌವನದ ಎಲ್ಲೆಯನ್ನು ದಾಟಿದ ವಳು. ಆದುದರಿಂದ ಅವಳನ್ನು ಪ್ರೌಢೆಯರ ಸಾಲಿನಲ್ಲಿ ಎಣಿಸಬಹುದು. ಅವಳ ದೇಹ ಅಷ್ಟು ದೀರ್ಘವಲ್ಲ, ಅಷ್ಟು ಸ್ಥೂಲವೂ ಅಲ್ಲ. ತಲೆಗೂದಲಿನ ಬಣ್ಣ ಬಾದಾಮಿ; ಹೆಚ್ಚು ಉದ್ದವಲ್ಲದ ಕೇಶಕಲಾಪ ಹಣೆಯ ಮೇಲೆ ಹರಡಿ ದ್ದವು. ಚಕ್ಷುತಾರಕೆ ನೀಲ; ದೃಷ್ಟಿಹೀನವಾದ ಚಕ್ಷು ಸ್ಫಟಿಕದಂತೆ. ಬಿಟ್ಟ ಕಣ್ಣುಗಳಲ್ಲಿ ಮರಣಪೂರ್ವದಲ್ಲಿಯ ಭಯ ಒಡೆದು ಕಾಣುತ್ತಿತ್ತು. ಅವಳ ಆಡಂಬರವಿಲ್ಲದ ಉಡಿಗೆ ತೊಡಿಗೆಗಳಿಂದ ಪ್ಯಾರೆಟ್ ಏರೋಸ್ಮಿಥ್‌ರಿಬ್ಬರಿಗೂ ಅವಳೊಬ್ಬ ಮಧ್ಯಮ ಶ್ರೇಣಿಯ ಮನೆತನದ ಹೆಣ್ಣುಮಗಳಾದರೂ ಅವಳ ಆರ್ಥಿಕ ಸ್ಥಿತಿ ಅಷ್ಟು ಚನ್ನಾಗಿರಲಿಲ್ಲವೆಂದು ಎನಿಸಿತು.

ಪ್ಯಾರೆಟ್ ಮೃತ ದೇಹವನ್ನು ಕೈಯಿಂದ ಮುಟ್ಟದೆ ನಿಃಶಬ್ದವಾಗಿ ಜಾಗ ರೂಕವಾಗಿ ಪರೀಕ್ಷಿಸತೊಡಗಿದರು. ಅವರಿಗೆ ಮೃತ್ಯುವಿನ ಕಾರಣ ತಿಳಿಯ ಲಿಲ್ಲ. ಬಳಿಕ ಅವರು ಬಾಗಿ ಬೆರಳಿನಿಂದ ಮೆಲ್ಲನೆ ಹೆಣದ ಹಣೆಯ ಮೇಲಿನ ಕೂದಲನ್ನು ಸರಿಸಿದರು. ಬಲಹುಬ್ಬಿನ ಮೇಲ್ಭಾಗದಲ್ಲಿ ಗೋಲಾಕಾರದ ಸಣ್ಣ ಗಾಯ ಕಂಡುಬಂದಿತು. ಗಾಯದ ಅಂಚು ನೀಲವರ್ಣವಾಗಿ ಮಾಂಸದಲ್ಲಿ ಒಳಸೇರಿತ್ತು. ಆ ಗಭೀರವಾದ ಗಾಯವನ್ನು ಪರೀಕ್ಷಿಸಿ ಪ್ಯಾರೆಟ್ ನುಡಿ ದರು; "೨೨ನೆಯ ನಂಬರಿನ ಪಿಸ್ತೂಲಿನಿಂದ ಇವಳನ್ನು ಗುಂಡಿಕ್ಕಿಕೊಲ್ಲಲಾಗಿದೆ. ಇದು ಸುಳ್ಳಾದರೆ ಈ ವಿಷಯದಲ್ಲಿ ನನಗಿರುವ ಜ್ಞಾನ ವ್ಯರ್ಥವೆಂದೊಪ್ಪಿ

ಕೊಳ್ಳಲೇಬೇಕು. ನೀವು ನನಗೊಂದು ದಿನ ಹೇಳಿದ ಮಾತು ನೆನಪಾಗು ತ್ತದೆ: ಮಿಸ್ ಫೆಲ್ಪನಳನ್ನು ಸೆರೆಯಿಂದ ಬಿಡಿಸುವ ಉದ್ದೇಶದಿಂದ ಚೌಕಟ್ಟಿನ ಸಂದಿಯಲ್ಲಿ ಕೀಲಿಕೈ ಅವಳ ಕೋಣೆಯಲ್ಲಿ ಚೆಲ್ಲಿದ ಅಡಿಗೆಯವಳು ಸ್ಕಾಂಡಿನೇವಿಯದವಳೆಂದು."

ಅವರ ಮಾತನ್ನು ಕೇಳಿ ಏರೋಸ್ಮಿಥ್ ಸ್ತಂಭಿತನಾದ. ಆವಳ ವಿಷಯ ವಾಗಿ ಮಿಸ್ ಫೆಲ್ಪನಳಿಂದ ತಿಳಿದುಕೊಂಡುದನ್ನೇ ನಾನು ನಿಮಗೆ ಹೇಳಿದ್ದು. ಮೆಲ್ಡ್ರುಮನ ಆ ಪರಿಚಾರಿಕೆಯ ಹೆಸರು ಲಾರ್‌ಸೆನ್. ಅಸ್ಫುಟ ಸ್ವರದಿಂದ ಅವನು ಉತ್ತರವಿತ್ತ.

ಪ್ಯಾರೆಟ್ ಗಂಭೀರ ಭಾವದಿಂದ ಕ್ಷಣಹೊತ್ತು ಹೆಣದ ಮೋರೆಯನ್ನು ಎವೆ ಹಳಚದೆ ನೋಡಿದರು. ಆಮೇಲೆ ಸಸಂಭ್ರಮರಾಗಿ ತಮ್ಮ ಕರವಸ್ತ್ರ ದಿಂದ ಮುಖವನ್ನು ಮುಚ್ಚಿ, ಏರೋಸ್ಮಿಥ್‌ನ ಸಹಾಯದಿಂದ ಸಂದುಕದ ಮುಚ್ಚಳವನ್ನು ಮುಚ್ಚಿದರು. ಸಾರ್ಜಂಟ್ ಎಟ್ಕಿನ್‌ಸನ್ನನನ್ನು ಕೂಗಿ, "ಈ ಸಂದುಕದ ರಕ್ಷಣೆಯ ಭಾರ ನಿನ್ನದು; ಅದರ ಹೊಣೆ ಸಂಪೂರ್ಣ ನಿನ್ನದು." ಎಂದು ಅಪ್ಪಣೆ ವಿಧಿಸಿ ಅಲ್ಲಿಂದ ಹೊರಡಲನುವಾದರು.

ಅದನ್ನು ಕಂಡು ಏರೋಸ್ಮಿಥ್ ಅವರನ್ನು ತಡೆದ: "ಒಂದು ವಿಷಯ: ಆ ಕಳ್ಳರು ಈ ತೊತ್ತಿನ ಹೆಣವನ್ನು ಸಂದುಕದಲ್ಲಿ ಏಕೆ ಹಾಕಿಟ್ಟರು ?" ಎಂದು ಪ್ರಶ್ನೆ ಎತ್ತಿದ.

"ಮುಚ್ಚಿಡುವುದೇ ಉದ್ದೇಶ. ಈ ಸಂದುಕದ ಹೊರತು ಅದಕ್ಕೆ ಬೇರೆ ತಕ್ಕ ಸ್ಥಾನ ಇಲ್ಲಿತ್ತೆ? ಹೆಣವನ್ನು ಸಂದುಕದಲ್ಲಿ ಇಟ್ಟುದಕ್ಕೆ ಬೇರೆ ಉದ್ದೇಶ ನನಗಂತೂ ತೋರುವುದಿಲ್ಲ." ಪ್ಯಾರೆಟ್ ಉತ್ತರವಿತ್ತರು.

ಈ ಉತ್ತರ ಏರೋಸ್ಮಿಥ್‌ನಿಗೆ ಮನವರಿಕೆಯಾಗಲಿಲ್ಲ. "ಹೆಣ ಬಚ್ಚಿಡುವ ಉದ್ದೇಶದಿಂದಲೇ ಸಂದುಕದಲ್ಲಿಟ್ಟರೆಂಬ ತರ್ಕ ನನಗೆ ಸರಿ ತೋರುವದಿಲ್ಲ. ಅವರಿಗೆ, ಬೇಗನೆಯೇ ಆಗಲಿ, ತಡವಾಗಿಯೇ ಆಗಲಿ ನಾವು ಸಂದುಕ ತೆರೆದು ನೋಡುವೆವೆಂದು ಗೊತ್ತೇ ಇತ್ತು. ಅಲ್ಲದೆ, ಪೆಟ್ಟಿಗೆ ತೆರೆಯುವುದಕ್ಕೆ ತೊಂದರೆಯಾಗಬಾರದೆಂಬ ಉದ್ದೇಶದಿಂದಲೇ ಅವರು ಕೀಲಿ ಹಾಕದೆ ಹಾಗೇ ಬಿಟ್ಟಿದ್ದರು. ಇದರಿಂದ ಹೊರಡುವ ಅನುಮಾನವೇನೆಂದರೆ, ಪೋಲೀಸರು ಸಂದುಕವನ್ನು ನೋಡಲಿ ಎಂಬುದೇ ಅವರ ಉದ್ದೇಶವಿರಬೇಕು."

"ಪೋಲಿಸರು ಸಂದುಕವನ್ನು ತೆರೆದು ಹೆಣವನ್ನು ನೋಡಲಿ ಎಂಬ ಅವರ ಆಗ್ರಹಕ್ಕೆ ಏನು ಕಾರಣ? ನಿಮ್ಮ ತಿಳಿವಳಿಕೆಯಾದರೂ ಏನು?" ವಿಸ್ಮಯದಿಂದ ಪ್ಯಾರೆಟ್ ಕೇಳಿದರು.

"ನನ್ನ ತಿಳಿವಳಿಕೆಯೆ?" ಎಂದು ನುಡಿದು ಏರೋಸ್ಮಿಥ್ ಒಂದು ಕ್ಷಣ ಏನೋ ಯೋಚಿಸಿದ. ರಹಸ್ಯದ ಕಗ್ಗತ್ತಲೆಯಲ್ಲಿ ಬೆಳಕಿನ ಗೆರೆಯೊಂದು ಫಕ್ಕನೆ ಮಿಂಚಿದಂತಾಯಿತವನಿಗೆ. ಅವನ ಕಣ್ಣುಗಳು ಉಜ್ವಲವಾದವು. ಉತ್ಸಾಹ ಭರದಿಂದ ಪ್ಯಾರೆಟರ ಮೋರೆಯ ಕಡೆ ನೋಡುತ್ತ ಅವನೆಂದ: "ನನ್ನ ತಿಳುವಳಿಕೆ ಸತ್ಯವೆಂದೇ ಹೇಳಲಾಗದಿದ್ದರೂ ಪೋಲಿಸರು ಈ ಪೆಟ್ಟಿಗೆಯನ್ನು ತೆರೆದು ನೋಡಿದರೂ ಇದರ ತಳವನ್ನು ಪರೀಕ್ಷಿಸುವ ಗೊಡವೆಗೆ ಹೋಗದಿರಲೆಂಬ ಉದ್ದೇಶದಿಂದಲೇ ಇದರೊಳಗೆ ಹೆಣ ಇರಿಸಿದ್ದಾರೆಂದು ನನ್ನ ನಂಬುಗೆ. ಪೆಟ್ಟಿಗೆಯಲ್ಲಿ ಹೆಂಗುಸಿನ ಹೆಣವನ್ನು ನೋಡಿ ನಮ್ಮ ಮನಸು ಅದರ ಶೋಧದ ಕಡೆಗೇ ಮುಂದುವರಿಯುವುದು, ನಾವು ಪೆಟ್ಟಿಗೆಯನ್ನು ಹಾಗೆಯೇ ಮುಚ್ಚಿಟ್ಟು ಬೇರೆ ಕೆಲಸಕ್ಕೆ ಹೊರಟು ಹೋಗುವೆವು ಎಂಬುದೇ ಅವರ ವಿಚಾರ. ಹೆಣ ತೆಗೆದು ತಳವನ್ನು ಪರೀಕ್ಷಿಸುವ ವಿಚಾರವೇ ನಮ್ಮಲ್ಲಿ ಹುಟ್ಟಲಾರದೆಂದು ಅವರ ವಿಶ್ವಾಸ."

"ನಿಮ್ಮ ಮಾತು ಸಂಗತವೆಂದೇ ತೋರುತ್ತದೆ. ನನಗೆ ಮೊದಲು ಈ ವಿಚಾರ ತೋಚಲೇ ಇಲ್ಲ. ನಿಮ್ಮ ಅನುಮಾನ ಹುಸಿಯಾದರೂ ಆಗಬಹುದು. ಆದರೆ ಪರೀಕ್ಷಿಸಿ ನೋಡುವುದರಲ್ಲಿ ತಪ್ಪೇನು? ಮುಚ್ಚಳ ಹಿಡಿಯಿರಿ, ಮತ್ತೆ ತೆರೆಯೋಣ ಎಂದರು ಪ್ಯಾರೆಟ್.

ಇಬ್ಬರೂ ಸೇರಿ ಮತ್ತೆ ಮುಚ್ಚಳವನ್ನೆತ್ತಿ ಗೋಡೆಗೆ ಆನಿಸಿಟ್ಟರು. ಹೆಣವನ್ನು ಹಿಡಿದೆತ್ತಿ ಹೊರಗೆ ತೆಗೆದರು. ತತ್‌ಕ್ಷಣವೇ ಬಾಂಬು ಸಿಡಿದಂತೆ ಘನ ಗಂಭೀರ ಶಬ್ದದಿಂದ ಕೋಣೆ ಕಂಪಾಯಮಾನವಾಯಿತು. ಇಬ್ಬರ ಮುಖಗಳೂ ವಿವರ್ಣವಾದವು; ಮೈ ನಡುಗಿದವು; ವ್ಯಾಕುಲ ಭಾವದಿಂದ ಅವರು ಸರಿದು ನಿಂತರು. ಆದರೆ ಹೆಣವು ಇನ್ನೂ ಅವರ ಕೈಯಲ್ಲಿಯೇ ಇತ್ತು.

ಸಾರ್ಜಂಟ್ ಎಟ್ಕಿನ್ಸನ್ ಸ್ವಲ್ಪ ದೂರದಲ್ಲಿ ನಿಂತಿದ್ದ. ಸಿಡಿಲ ಗರ್ಜನೆಯಂತಹ ಸಬ್ದವನ್ನು ಕೇಳಿ ಬೆದರಿದರೂ ಪ್ಯಾರಟರನ್ನು ಕುರಿತು ಅವನೆಂದ:

"ಸಂದುಕದ ಮುಚ್ಚಳ ಒಮ್ಮೆಲೇ ಬಿದ್ದು ಮುಚ್ಚಿಕೊಂಡಿತು, ಅದರದೇ ಈ ಶಬ್ದ."

ಹತ್ತಿರವೇ ಒಂದು ಕೆಂಪು ಕಾಜಿನ ಕಿಡಿಕಿಯಿತ್ತು. ಅದರ ಕೆಳಗೆ ಒಂದು ಬೆಂಚು ಇಟ್ಟಿತ್ತು. ಪರಿಚಾರಿಕೆಯ ಹೆಣವನ್ನು ಅದರಮೇಲೆ ಮೆಲ್ಲಗೆ ಇರಿಸಿದ ಮೇಲೆ ಪ್ಯಾರೆಟ್—"ಸಂದುಕದ ಬುಡದಲ್ಲಿ ಏನಿದೆಯೋ ನೋಡುವ ಇನ್ನು" ಎಂದರು.

ಬಳಿಕ ಇಬ್ಬರೂ ಸಂದುಕದ ಬಳಿ ಹೋಗಿ ಮೊದಲಿನಂತೆಯೇ ಮತ್ತೆ ಅದರ ಮುಚ್ಚಳವನ್ನು ತೆರೆಯಲು ಸಾಹಸಪಟ್ಟರು. ಆದರೆ ಅವರಿಬ್ಬರ ಪೂರ್ಣ ಪ್ರಯೋಗದಿಂದಲೂ ಮುಚ್ಚಳ ಏಳಲಿಲ್ಲ. ಕೂದಲೆಳೆಯಷ್ಟೂ ಚಲಿಸಲಿಲ್ಲ. ಅವರಿಬ್ಬರೂ ಕೂಡಿ ಹತ್ತು ಮಣ ಭಾರದ ಕಲ್ಲನ್ನು ಎತ್ತಲಾರದಾದರೂ ಸರಿ ಸಾಡಲು ಸಮರ್ಥರಾಗಿದ್ದರು. ಆದರೆ ಸಂದುಕದ ಮುಚ್ಚಳ ಮಿಟ್ಟನೆ ಮಿಸುಕಲಿಲ್ಲ. ಎಷ್ಟು ಹೊತ್ತು ಸೆಣಿಸಿದರೂ ತಮ್ಮ ಕೆಲಸ ಈಡೇರದಿರಲು ವಿಸ್ಮಯ ವಿಹ್ವಲರಾಗಿ ಅವರಿಬ್ಬರೂ ಒಬ್ಬರ ಮೋರೆ ಒಬ್ಬರು ನೋಡಿದರು. ಬಳಿಕ ಪೆಟ್ಟಿಗೆಯನ್ನೇ ದಿಟ್ಟಿಸುತ್ತ ತೇಕುತ್ತ ನಿಂತರು. ಅವರ ಹಣೆಯ ಮೇಲೆ ಬೆವರು ಸುರಿಯುತ್ತಿತ್ತು.

ಕೊನೆಗೆ ಪ್ಯಾರೆಟ್ ತೇಕುತ್ತ ಹಿಂದಕ್ಕೆ ಸರಿದು ನಿಂತರು. ಇಷ್ಟು ಶ್ರಮಪಟ್ಟರೂ ಮುಚ್ಚಳ ಏಕೆ ತೆರೆಯಲೊಲ್ಲದೆಂಬುದನ್ನು ಅರಿತುಕೊಳ್ಳುವುದಕ್ಕಾಗಿ ಪೆಟ್ಟಿಗೆಯ ಎಲ್ಲ ಬದಿಗಳನ್ನೂ ತೀಕ್ಷ್ಣ ದೃಷ್ಟಿಯಿಂದ ನಿರೀಕ್ಷಿಸತೊಡಗಿದರು. ಒಂದೆರಡು ನಿಮಿಷಗಳಲ್ಲಿ ಅವರ ವಿಚಾರತಂದ್ರಿ ಹರಿದು ಮೊಗ ಅರಳಿತು. ಪೆಟ್ಟಿಗೆಯ ಎರಡೂ ಪಾರ್ಶ್ವಗಳತ್ತ ಏರೋಸ್ಮಿಥ್‌ನ ನೋಟವನ್ನು ಸೆಳೆದು ಅವರೆಂದರು: "ಸಂದುಕದ ಸುಮಾರು ಮುಕ್ಕಾಲು ಭಾಗ ನೆಲದಲ್ಲಿ ಹೂತಿದೆ: ಮುಚ್ಚಳ ಸವೇಗವಾಗಿ ಬಿದ್ದುದರಿಂದ ಅದರ ಎರಡೂಬದಿಗಳು ನೆಲದಲ್ಲಿ ಸೇರಿವೆ. ಆದ್ದರಿಂದಲೇ ಅದನ್ನೆತ್ತಲು ನಮ್ಮ ಶಕ್ತಿ ಸಾಲಲಿಲ್ಲ. ಏನೇ ಆಗಲಿ. ಇದರ ಈ ಭಾಗವನ್ನು ನೆಲದೊಳಗಿಂದ ಮೇಲೆ ತೆಗೆದು ಪೆಟ್ಟಿಗೆಯನ್ನು ತೆರೆಯದೆ ಬಿಡುವಂತಿಲ್ಲ."

ಈಗ ಅವರ ಪ್ರಯತ್ನ ಹಣ್ಣೆಸಿತು. ಅವರು ಮುಚ್ಚಳವನ್ನು ಗೋಡೆಗೆ ಆನಿಸಿದರು. ಆದರೆ ಈಸಲ ಪೆಟ್ಟಿಗೆಯೊಳಗೆ ಅವರ ದೃಷ್ಟಿ ಬಿದ್ದಾಗ ಕಂಡ

ದೃಶ್ಯದಿಂದ ಅವರ ಉಸಿರಾಟವೇ ನಿಲ್ಲುವಂತಾಯಿತು. ಆಶ್ಚರ್ಯದಿಂದ ಅವರ ಕಣ್ಣುಗಳು ಹಣೆಗೇರಿದವು. ಸಂದುಕದ ತಳದಲ್ಲಿ ಸುರಂಗ ಮಾರ್ಗದ ಗುಪ್ತ ದ್ವಾರವನ್ನು ಕಾಣುವೆವೆಂದು ಅವರು ನಂಬಿದ್ದರು. ಆದರೆ ಅಲ್ಲಿ ಅವಿತಿದ್ದ ವಿಷಧರ ಸರ್ಪ ಅವರ ಕೈಯನ್ನು ಕಚ್ಚಲು ಭುಸ್ಸನೆ ಹೆಡೆಯೆತ್ತಿದರೆ ಹೇಗೋ ಹಾಗೆ ಅವರು ಭಯದಿಂದ ಹಿಂದೆ ಸರಿದು ನಡುಗುತ್ತ ನಿಂತರು. ಆದರೆ ಅವರು ಕಂಡ ದೃಶ್ಯ ರೋಮಾಂಚಕಾರಿಯಾಗಿತ್ತು. ಆ ಸಂದುಕದಲ್ಲಿ ಅವರು ಮತ್ತೊಂದು ಹೆಣವನ್ನು ನೋಡಿದರು. ಅದರ ಮೋರೆ ನೀಲಿಯಾಗಿತ್ತು. ಅದರ ಹಣೆಯ ಮೇಲೂ ಪಿಸ್ತೂಲಿನ ಗುಂಡಿನ ಆಳವಾದ ಗಾಯವಿತ್ತು. ಅದ ರಿದು ಗಂಡುಸಿನ ಹೆಣ.

ಕ್ಷಣದ ತರುವಾಯ ಪ್ಯಾರೆಟ್ ಮತ್ತೆ ಸಂದುಕದ ಬಳಿ ಸಾರಿ ಹೆಣದ ಮೋರೆಯನ್ನು ದಿಟ್ಟಿಸಿ ನೋಡಿದರು; ಗಾಬರಿಯಾಗಿ ಅಸ್ಫುಟವಾಗಿ ಚೀರಿದರು. ಅವರಿಗೆ ಸುಪರಿಚಿತವಾದ ಮುಖ. ಅವರು ಭಯ ವಿಹ್ವಲ ಸ್ವರದಲ್ಲಿ ನುಡಿ ದರು; "ದೇವರು ನಮ್ಮನ್ನು ಕಾಪಾಡಲಿ. ಇದು ನಮ್ಮ ಸಾರ್ಜಂಟ್ ಲುಕಾಸನ ಹೆಣ ! ಲುಕಾಸನೇ ಬ್ಯಾಂಕಿನ ಬಾಗಿಲಲ್ಲಿ ಸಿಕ್ಕ ಬಂಗಾರ ಗಟ್ಟಿಯನ್ನು ನಮ್ಮ ಆಫೀಸಿಗೆ ತಂದು ಕೊಟ್ಟಿದ್ದ " ಒಂದು ಕ್ಷಣ ಸುಮ್ಮನಿದ್ದು ಪ್ಯಾರೆಟ್ ಆವೇಗ ಕಂಪಿತಸ್ವರದಿಂದ ಮತ್ತೆಂದರು: "ಈಗ ನನಗೆನಿಸುತ್ತದೆ—ಕ್ರಮಾಗತ ಅಂಧಃ ಕಾರದಲ್ಲಿ ತಡವಾಗುತ್ತ ಅಲೆದರೂ ನಾವು ಸರಿಯಾದ ಸ್ಥಳಕ್ಕೇ ಬಂದು ತಲು ಪಿದೆವು; ಅಜ್ಞಾನದಿಂದ ನಾವು ತಪ್ಪು ದಾರಿಯಲ್ಲಿ ಸುತ್ತಾಡುವಂತಾಗಲಿಲ್ಲ. ಹಾಂ, ಈ ಹಾದಿಯೇ ಸರಿಯಾದ ಹಾದಿ."

ಆಮೇಲೆ ಅವರಿಬ್ಬರೂ ಮೃತದೇಹದ ಮೇಲೆ ತಲೆ ಬಗ್ಗಿಸಿ ಮೃದುಸ್ವರ ದಲ್ಲಿ ಏನೋ ಯೋಚನೆ ಮಾಡಿದರು. ಕೆಲವು ನಿಮಿಷಗಳಲ್ಲಿ ಅವರ ದಣಿವು ಅಂಜಿಕೆ, ಉದ್ವೇಗ ಎಷ್ಟೋ ಕಡಿಮೆಯಾಯಿತು. ಆಗ ಇಬ್ಬರೂ ಗಭೀರ ಚಿಂತನೆಯಲ್ಲಿ ಮಗ್ನರಾದರು. ಏರೋಸ್ಮಿಥ್‌ನಿಗೆ ಎನಿಸುತ್ತಿತ್ತು—ಈ ಭೀಷಣ ದುಷ್ಕೃತ್ಯವನ್ನು ಎಸಗಿದವನ, ಒಬ್ಬ ಹೆಂಗುಸನ್ನು ಈ ಭಯಂಕರ ಸ್ಥಾನದಲ್ಲಿ ಕೊಲೆ ಮಾಡಿ, ಅವರ ರಕ್ತದಲ್ಲಿ ಕೈದೊಳೆದವನ ಉದ್ದೇಶವೇನೇ ಇರಲಿ, ಅವನು ಬಾರಬಾರಾ, ಫೆಲ್‌ಸ್ಟನ್‌ಳ ಬಿಡುಗಡೆಯ ಕಾರ್ಯದಲ್ಲಿ ಅಡ್ಡಿಯೊಡ್ಡ ತಕ್ಕವನೇ; ಏಕೆ, ಅಡ್ಡಿಯೊಡ್ಡಿಯೇ ಸುಮ್ಮನಾಗಲಿಕ್ಕಿಲ್ಲ, ಅವಳ ಬಿಡುಗಡೆಯ

ಪಣವನ್ನು ಹುಸಿಗೊಳಿಸುವುದಕ್ಕಾಗಿ ಸಂಧಿ ಸಾಧಿಸಿ ಅವಳನ್ನು ಕೊಲ್ಲಬಹುದು. ಬಾರಬಾರಾನ ಮುಕ್ತತೆಯ ಪ್ರಯತ್ನದಿಂದ ನಿವೃತ್ತನಾಗದಿದ್ದರೆ ತಾನೂ ಪ್ರಾಣಕ್ಕೆ ಎರವಾಗಬೇಕಾದೀತು.

ಪ್ಯಾರೆಟ್ ಮಂಡೆ ಮತ್ತು ಕೈಯೂರಿ ಕುಳಿತು ಪುನಃ ಪರೀಕ್ಷೆಯನ್ನಾರಂಭಿಸಿದರು. ಅವರ ಮುಖ ಗಂಭೀರವಾಗಿತ್ತು. ಕೊನೆಗೆ ಅವರ ಸೂಚನೆಯಂತೆ ಪೋಲಿಸರಿಬ್ಬರು ಆ ಹೆಣವನ್ನು ಹೊರಗೆ ತೆಗೆಯುತ್ತಲೇ ಸಂದುಕದ ಮುಚ್ಚಳ ಮತ್ತೆ ಧಡಾರನೆ ಮುಚ್ಚಿಕೊಂಡಿತು. ಪ್ಯಾರೆಟ್ ಅದನ್ನು ಮತ್ತೆ ತೆರೆದರು. ಬ್ಯಾಟ್ರಿಯ ಬೆಳಕಿನಿಂದ ಸಂದುಕದ ಒಳಭಾಗವನ್ನು ಪರೀಕ್ಷಿಸಿದರು. ಮುಚ್ಚಳವನ್ನು ಮುಚ್ಚಿ ತೆರೆದು, ಮುಚ್ಚಿ ತೆರೆದು ನೋಡಿದರು; ಅವರ ರಚನಾ ಕೌಶಲಕ್ಕಾಗಿ ಕೌತುಕಪಟ್ಟರು. "ಓಹ್, ಈ ಸಂದುಕದ ರಹಸ್ಯ ಗೊತ್ತಾಯಿತು. ಇದರ ರಚನೆಯ ಚಾತುರ್ಯ ತೋರಿಸುತ್ತೇನೆ, ಮುಚ್ಚಳವನ್ನು ಮೆಲ್ಲನೆ ಕೆಳಗಿಳಿಸುತ್ತ ಸಂದಿನೊಳಗಿಂದ ಒಳಗಡೆ ನೋಡಿರಿ." ಎಂದು ಅವರು ಸಂದುಕದಲ್ಲಿ ಬ್ಯಾಟರಿ ಬೆಳಕನ್ನು ಚೆಲ್ಲಿ, ಏರೋಸ್ಮಿಥ್‌ನಿಗೂ ತಮ್ಮ ಅನುಯಾಯಿಗಳಿಗೂ ಹೇಳಿದರು. ಅವರು ಅದರಂತೆ ಮಾಡುತ್ತ ಒಳಗೆ ನೋಡಿದರು. ಮುಚ್ಚಳವು ಕೆಳಗಿಳಿದಿಳಿದಂತೆ ತಳದ ಹಲಗೆ ಇಬ್ಭಾಗವಾಗಿ ನೆಲದಡಿಯಲ್ಲಿ ಪಕ್ಕಕ್ಕೆ ಸರಿದು, ಗಭೀರ ಗಹ್ವರವು ಗೋಚರಿಸಿತು. ಪ್ಯಾರೆಟ್ ಮತ್ತೆ ಮುಚ್ಚಳವನ್ನು ತೆರೆಯಲು ಹೇಳಿದರು. ಅದನ್ನು ಪೂರ್ಣ ತೆರೆದಾಗ ಹಲಗೆಗಳೆರಡೂ ಮತ್ತೆ ಬಂದು ಗಟ್ಟಿಯಾಗಿ ಹೊಂದಿಕೊಂಡವು.

"ತಿಳಿಯಿತೆ? ಮೊದಲು ಸಂದುಕದಲ್ಲಿಯ ಸ್ತ್ರೀಯ ಹೆಣವನ್ನು ನಾವು ಹೊರಗೆ ತೆಗೆದೊಡನೆ ಮುಚ್ಚಳ ಮುಚ್ಚಿಕೊಂಡಿತು. ಆಗ ತಳದ ಹಲಿಗೆಗಳು ಸರಿದು ಹೋಗಿದ್ದವು. ನಾವು ಪುನಃ ಮುಚ್ಚಳವನ್ನು ತೆರೆದೊಡನೆ ತಳದ ಹಲಗೆಯೊಡನೆ ಇನ್ನೊಂದು ಹೆಣ ಸಂದುಕದಲ್ಲಿ ಬಂದಿತು." ಪ್ಯಾರೆಟ್ ತಮ್ಮ ಶೋಧನೆಯ ಫಲಿತಾಂಶವನ್ನು ತಿಳಿಸಿದರು.

ಏರೋಸ್ಮಿಥ್‌ನ ಮುಖ ಬಿಳುಪಿಟ್ಟು ಹೋಗಿತ್ತು. ಅವನು ಅಸಾಧಾರಣ ಧೈರ್ಯಶಾಲಿ, ಸಾಹಸಿ. ಆದರೆ ಇದೆಲ್ಲವನ್ನೂ ನೋಡಿ ಅವನ ಬಾಯಿಯಿಂದ ಮಾತೇ ಹೊರಡಲಿಲ್ಲ. ಸಾರ್ಜಂಟ್ ಲುಕಾಸನಿಗೆ ಮರಣಶಿಕ್ಷೆಯಾದುದರ ಕಾರಣ ಅವನಿಗೆ ಗೊತ್ತಾಗಲಿಲ್ಲ; ಲುಕಾಸನ ಕೈಕೆಳಗಿನ ಪೋಲಿಸ್

ತಂದುಕೊಟ್ಟ ಕೃತ್ರಿಮ ಸುವರ್ಣದಲ್ಲಿ ಕೆಲವಂಶವನ್ನು ಅವನು ಲೋಭದಿಂದ ತೆಗೆದುಕೊಂಡರೂ ಉಳಿದುದನ್ನು ಆಫೀಸಿಗೆ ಮುಟ್ಟಿಸಿದ್ದ. ಚಿನ್ನಗಾರನು ಸರ್ವಸಾಧಾರಣರಿಗೆ ತಿಳಿಸುವುದಕ್ಕಾಗಿ ಬರೆದಿದ್ದ ಪತ್ರವನ್ನೂ ಸಹ ಮೇಲಿನವರಿಗೆ ತಲುಪಿಸಿದ್ದ. ಈ ಅಪರಾಧಕ್ಕಾಗಿ ಲುಕಾಸ್ ಹತನಾದ! ಈ ಅಪರಾಧದ ಮಾನದಿಂದ ಬಾರಬಾರಾನ ಅಪರಾಧ ಎಷ್ಟೋ ಗುರುತರವಾದದ್ದು. ನಕ್ಲಿಜ್ ಅವಳನ್ನು ಹಿಡಿದುಕೊಂಡು ಹೋಗಿ ಅದಾವ ಪರಿಯಿಂದ ಹಿಂಸಿಸಿದನೋ ಎಂಬುದನ್ನು ನೆನೆದಾಗ ಏರೋಸ್ಮಿಥ್‌ನ ಮೈ ಜುಮ್ಮೆಂದಿತು, ತಲೆ ದಿಮ್ಮೆಂದಿತು.

ಬಹಳ ಹೊತ್ತಿನ ಗಂಭೀರ ವಿಚಾರದ ಅನಂತರ ಪ್ಯಾರೆಟ್ ಮಾತನಾಡಿದರು: "ಅವರು ಲುಕಾಸನನ್ನು ಏಕೆ ಕೊಂದರೋ ಆಶ್ಚರ್ಯದ ಸಂಗತಿ. ತಿಳಿಯಲು ಉಪಾಯವಿಲ್ಲ. ಚಿನ್ನಗಾರನು ಬ್ಯಾಂಕಿನ ಅಧಿಕಾರಿಗೆ ಬರೆದ ಪತ್ರದಲ್ಲಿ ಬರೆದ ಸಂಗತಿಯನ್ನು ಅವನು ಬಹಿರಂಗವಾಗಿಯೇ ಘೋಷಿಸಲು ಸಿದ್ಧನಿದ್ದ. ಅದು ಅವನ ಗುಟ್ಟಿನ ಕಾಗದವಲ್ಲ ಅದನ್ನು ಲುಕಾಸ್ ಮೇಲಧಿಕಾರಿಗೆ ತೋರಿಸಿದ್ದರಿಂದ ಅವರಿಗೇನೂ ನಷ್ಟವಿಲ್ಲ. ಆ ಪತ್ರದ ವಿಷಯ ಶೀಘ್ರದಲ್ಲಿಯೇ ಪೋಲಿಸರಿಗೆ ತಿಳಿಯುವುದೆಂದು ಅವನಿಗೆ ಗೊತ್ತಿಲ್ಲವೇನು? ಆದರೂ ದೈವಗೇಡಿ ಲುಕಾಸನ ಮೇಲೆ ಅವನಿಗೇಕೆ ಇಷ್ಟೊಂದು ಆಕ್ರೋಶ?"

ಅವರ ಈ ಪ್ರಶ್ನೆಗೆ ಉತ್ತರವನ್ನೀಯದೆ ಭಗ್ನಸ್ವರದಿಂದ ಮಾತನಾಡಿದ: "ಆ ವಿಷಯ ಹಿಂದುಗಡೆ ಯೋಚಿಸಿದರೂ ಪರವಾ ಇಲ್ಲ. ಆದರೆ ಶವಗಳೆರಡೂ ಎಲ್ಲಿ ಕೊಲೆಯಾಗಿ ಸಂದುಕದಲ್ಲಿ ಇಡಲ್ಪಟ್ಟವೆಂಬುದೇ ಈಗ ತಿಳಿಯಬೇಕಾದ ವಿಷಯ. ಸಂದುಕದ ಪರೀಕ್ಷೆಯಿಂದ, ಮುಚ್ಚಳ ತೆರೆದಾಗ ತಳದ ಹಲಗೆಗಳು ಕೂಡಿಕೊಂಡಿರುವವು, ಮುಚ್ಚಿದಾಗ ಹೋಳಾಗಿ ಬದಿಗೆ ಸರಿದಿರುವವು ಎಂದು ಕಂಡುಬಂದಿತು. ಎಂದರೆ ನಾವು ಸಂದುಕವಲ್ಲಿಳಿದು ಮುಚ್ಚಳ ಮುಚ್ಚಿಕೊಂಡರೆ ಅದರ ತಳದಿಂದ ಈ ಕಟ್ಟಡದಡಿಯ ನೆಲಮನೆಗೆ ಹೋಗುವೆವಷ್ಟೆ? ಆ ಪಾತಾಳ ಮಂದಿರವು ಅನೇಕ ರಹಸ್ಯಗಳ ಬೀಡೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಆ ಸ್ಥಾನದಲ್ಲಿ ನಾವು ಪ್ರವೇಶಿಸುವುದು ಯುಕ್ತವೋ ಅಲ್ಲವೋ ಎಂಬುದನ್ನು ಸದ್ಯ ನಿರ್ಣಯಿಸಿಕೊಳ್ಳಬೇಕು."

"ಆ ಸ್ಥಾನದ ಪರಿಶೋಧನೆಗೆ ನಿರಾಪದವಾದ ಒಳ್ಳೆಯ ಉಪಾಯವೇನಾದರೂ ಉಂಟೋ ಹೇಗೆಂಬುದನ್ನು ನಾನು ವಿಚಾರಿಸಿಕೊಳ್ಳುತ್ತೇನೆ. ನಾವು ಇಲ್ಲಿ ಬಂದಿರುವುದು ಆ ಜನಕ್ಕೆ ತಿಳಿಯದಂತೆ ನೋಡಿಕೊಳ್ಳುವುದು ಒಳ್ಳೆಯದು. ಆ ನೆಲಮನೆಯಲ್ಲಿ ನಾವು ಹೋಗಿ ಏನಾದರೂ ಗೊಂದಲವೆಬ್ಬಿಸಿದೊಡನೆ ಅವರೂ ಜಾಗರೂಕರಾಗುವರು; ಅದು ಇಷ್ಟವಲ್ಲ."

ಎಂದು ನುಡಿದು ಪ್ಯಾರೆಟ್ ಆ ಪೆಟ್ಟಿಗೆಯ ಎರಡು ಬದಿಗಳನ್ನೂ ಪರೀಕ್ಷಿಸತೊಡಗಿದರು. ಅವುಗಳನ್ನು ಜೋಕೆಯಿಂದ ಕೈಯಿಂದ ಸವರಿ ಸವರಿ ನೋಡಿದರು. ಒಂದು ಹಲಗೆಯಲ್ಲಿ ಕೂಡಿಸಿದ ಸಣ್ಣ ಕಾಜಿನ ತುಂಡು ಅವರ ಕೈಗೆ ಹತ್ತಿತು. ಅದನ್ನು ಏರೋಸ್ಮಿಥ್‌ನಿಗೆ ತೋರಿಸಲು ಅವನು ಅದನ್ನು ಮುಟ್ಟಿನೋಡಿ, "ಇದೇ ಗುಪ್ತ ರಹಸ್ಯದ ಕೈ. ಇದನ್ನು ಬೆರಳಿನಿಂದ ಒತ್ತಿದರೆ ಏನಾಗುತ್ತದೋ ನೋಡಿರಿ" ಎಂದನು.

ಪ್ಯಾರೆಟ್ ಆ ಕಾಜನ್ನು ಬಲವಾಗಿ ಬೆರಳಿಂದೊತ್ತಿದರು. ಆಗ ಸಂದುಕದ ತಳದ ಹಲಗೆಗಳೆರಡೂ ವಿಭಕ್ತವಾಗಿ, ಸದ್ದಿಲ್ಲದೆ ಅತ್ತಿತ್ತ ಸರಿದುಹೋದವು ಅವುಗಳ ಸಂದಿನೊಳಗಿಂದ ಅಂಧಃಕಾರಮಯವಾದ ಗಹ್ವರವೊಂದುಕಾಣಿಸಿತು. ಆಗ ಅವರಿಬ್ಬರೂ ಸಂದುಕದ ಮೇಲೆ ಬಾಗಿ ಬ್ಯಾಟರಿಯ ಬೆಳಕನ್ನು ಆ ಗವಿಯೊಳಗೆ ಬಿಟ್ಟು ಅದರ ರಹಸ್ಯವನ್ನು ಭೇದಿಸಲು ತೀಕ್ಷ್ಣ ದೃಷ್ಟಿಯಿಂದ ನೋಡತೊಡಗಿದರು.

ಆ ಗಹ್ವರದಲ್ಲೊಂದು ತಿರುಗಣಿ ಸೋಪಾನಶ್ರೇಣಿ ಅವರಿಗೆ ಕಂಡಿತು. ಕಪ್ಪು ಬಣ್ಣದ ಸೋಪಾನಗಳು ಕಾಲದೊಡನೆ ಹೋರಾಡಿ ಕ್ಷಯಿಸಿದ್ದವು. ಆದರೂ ಹತ್ತಿಳಿಯುವುದಕ್ಕೆ ಬಾರದಂತಿರಲಿಲ್ಲ. ಮೆಟ್ಟಿಲುಗಳ ಕೊನೆಯಲ್ಲಿ ಗೋಲಾಕಾರದ ಸುರಂಗದ್ವಾರವೂ ದೃಗ್ಗೋಚರವಾಯಿತು.

ಏರೋಸ್ಮಿಥ್ ಪೆಟ್ಟಿಗೆಯ ಎರಡೂ ಬದಿಗಳ ಮೇಲೆ ಮೊಣಕಾಲೂರಿ, ಮುಂದಿನ ಬದಿಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡು, ಒಳಗಡೆ ಏನಾದರೂ ಶಬ್ದವಾಗುತ್ತಿದೆಯೋ ಎಂದು ಕಿವಿಗೊಟ್ಟು ತಲೆತಗ್ಗಿಸಿಕೊಂಡು ಕುಳಿತ. ಆದರೆ ಭೂಗರ್ಭ ಗೃಹದಿಂದ ಯಾವ ಶಬ್ದವೂ ಕೇಳಿ ಬರಲಿಲ್ಲ. ನೆಲದ ಮೇಲಿನ ಮನೆ ಹೇಗೋ ಒಡಲೊಳಗಿನ ಕಾಳ್ಮನೆಯೂ ಹಾಗೆಯೇ— ಎಲ್ಲೆಡೆಯೂ ಗಭೀರ ನಿಃಸ್ತಬ್ಧ ರಾಜ್ಯ. ಗರ್ಭಗೃಹದಲ್ಲಿ ಜನಪ್ರಾಣಿ ಇರಬಹು

ದೆಂಬ ಕಲ್ಪನೆಯೇ ಅವನಿಗೆ ಬರಲಿಲ್ಲ.

"ಕೆಳಗಡೆ ಯಾರದಾದರೂ ದನಿ, ಏನಾದರೂ ಶಬ್ದ ಕೇಳುತ್ತದೆಯೆ, ಮಿ. ಏರೋಸ್ಮಿಥ್?" ಬದಿಯಲ್ಲಿ ನಿಂತಿದ್ದ ಪ್ಯಾರೆಟ್ ಕುತೂಹಲದಿಂದ ಕೇಳಿದರು.

ಏರೋಸ್ಮಿಥ್ ಅಡ್ಡಗೋಣು ಹಾಕಿದ. ಆಮೇಲೆ ಮೋರೆ ಮೇಲೆತ್ತಿ, "ಮೆಟ್ಟಿಲ ಕೆಳಗೆ ಕಾಣುವ ನೆಲಬಾಗಿಲಿಂದ ಯಾವುದೊಂದು ಪಾತಾಳಗೋಣೆಗೆ ಹೋಗಬಹುದೆಂಬಲ್ಲಿ ಸಂದೇಹವೇ ಇಲ್ಲ. ಬಹುಶಃ ಅಲ್ಲಿಯೇ ನಕ್ಲಿಜ್ ತನ್ನ ಗುಂಪಿನೊಂದಿಗೆ ಲಾರ್‌ಸೆನಳನ್ನು ಕೊಂದು, ಈ ಮೆಟ್ಟಿಲ ಮೂಲಕ ಮೇಲೆ ಬಂದು, ಹೆಣವನ್ನು ಸಂದುಕದಲ್ಲಿ ಇಟ್ಟಿರಬೇಕು. ಆದರೆ ಆ ಸ್ಥಾನದಲ್ಲಿ ಆತ್ಮ ರಕ್ಷಣೆಗಾಗಿ ಅವರು ಏನು ವ್ಯವಸ್ಥೆ ಮಾಡಿಕೊಂಡಿರುವರೋ ಊಹಿಸುವುದು ಕಷ್ಟ." ಎಂದ.

ಪ್ಯಾರೆಟ್ ಚಿಂತಿತ ಭಾವದಿಂದ ಕೆನ್ನೆ ತಿಕ್ಕಿಕೊಳ್ಳುತ್ತ, "ಹೂಂ, ಅವರನ್ನು ಹಿಡಿಯುವುದಕ್ಕಾಗಿ ಪಾತಾಳ ಗ್ರಹದಲ್ಲಿ ಇಳಿದುಹೋದರೆ ಯಾವಬಗೆಯ ಸಂಕಟವೊದಗುವುದೋ ತಿಳಿಯದು. ಅದಕ್ಕೇ ನನಗೆನಿಸುತ್ತದೆ—" ಎಂದು ಮಾತನ್ನು ಮುಗಿಸದೆ ಪಕ್ಕನೆ ಮೌನ ತಳೆದರು.

"ನಿಮಗೆ ಏನೆನಿಸುತ್ತದೆ ಹೇಳಿಬಿಡಿರಿ. ಇನ್ನು ಹೊತ್ತುಗಳೆಯುವುದು ಯುಕ್ತವಲ್ಲ." ಎಂದು ಏರೋಸ್ಮಿಥ್ ಉತ್ಕಂಠೆಯಿಂದ ಗಂಭೀರ ಸ್ವರದಲ್ಲಿ ನುಡಿದ.

"ಎಲ್ಲ ಪರಿಸ್ಥಿತಿಯನ್ನೂ ಪೋಲಿಸ್ ಕಮಿಶ್ನರರಿಗೆ ತಿಳುಹಿ, ಅವರ ಸಲಹೆಯಂತೆ ನಡೆದರೆ ಒಳ್ಳೆಯದಲ್ಲವೆ? ಒಂದು ವೇಳೆ ಪುಂಡರು ಅಲ್ಲಿಯೇ ಅಡಗಿಕೊಂಡಿದ್ದಾರೆನ್ನಿರಿ. ಅವರ ಮೇಲೆ ನಾವು ಒಮ್ಮೆಲೆ ಎದುರಾಗಿ ಆಕ್ರಮಿಸಿದರೆ, ಅವರು ಯಾವುದಾದರೂ ಗುಪ್ತ ಮಾರ್ಗದಿಂದ ತಪ್ಪಿಸಿಕೊಳ್ಳಬಹುದು. ಅಲ್ಲದೆ, ನಾವು ಮರಳಿ ಮೇಲೆ ಬಾರದ ಹಾಗೆ ಅವರು ಏನಾದರೂ ವ್ಯವಸ್ಥೆ ಮಾಡಿ ಹೋದರೂ ಹೋಗುವ ಸಂಭವವಿದೆ. ಆಗ ನಾವು ಈ ನೆಲಮನೆಯಲ್ಲಿಯೇ ಸಜೀವ ಸಮಾಧಿಸ್ಥರಾಗಬೇಕಾದೀತು. ಇದರೊಳಗೆ ಇಳಿಯುವುದು ಉಚಿತವೆಂದು ನನಗೆನಿಸುವುದಿಲ್ಲ. ನಿಮಗೆ ಹೇಗೆನಿಸುತ್ತದೆ?"

"ನಾವಿಲ್ಲಿ ವಿಲಂಬ ಮಾಡುವುದು ಸರಿ ಎಂದು ನನಗೆನಿಸುವುದಿಲ್ಲ.

ನಮ್ಮ ಹತ್ತಿರ ಅಸ್ತ್ರಗಳಿವೆ, ವಿಪತ್ತಿನ ಸಂಭವ ಕಂಡರೆ ಆತ್ಮರಕ್ಷಣೆ ಮಾಡಿ ಕೊಳ್ಳಬಲ್ಲೆವು, ಬಾರಬಾರಾನ ಗತಿ ಏನಾಗಿದೆಯೋ ಅರಿತುಕೊಳ್ಳಲು ನಾನು ಅಧೀರನಾಗಿದ್ದೇನೆ. ಅವಳ ರಕ್ಷಣೆಯ ಭಾರವನ್ನು ವಹಿಸಿಕೊಂಡು ನಾನು ಕೃತಕಾರ್ಯನಾಗಲಿಲ್ಲ. ನನ್ನ ಮನಸ್ಸಿನ ಭಾವ ನಿಮಗೆ ಸರಿಯಾಗಿ ತಿಳಿಯದು. ಭೂಗರ್ಭದಲ್ಲಿಳಿಯುವುದಕ್ಕೆ ನಿಮಗೆ ಸಾಹಸ ಸಾಲದಾದರೆ, ನೀವು ನಿಮ್ಮ ಪಥಕದೊಡನೆ ಇಲ್ಲಿಯೇ ಕಾಯ್ದಿರಿ. ನಾನೊಬ್ಬನೇ ಕೆಳಗಿಳಿದು ಹೋಗು ತ್ತೇನೆ. ”

ಪ್ಯಾರೆಟ್ ಸ್ವಲ್ಪ ಕುಂಠಿತರಾದರು. “ಬೇಡ, ಬೇಡ, ಅದಾಗದು. ನಿಮ್ಮೊಬ್ಬರನ್ನೇ ನಾನಲ್ಲಿಗೆ ಹೋಗಗೊಡುವುದಿಲ್ಲ. ನಡೆಯಿರಿ. ನಾನೂ ನಿಮ್ಮೊಂದಿಗೆ ಬರುತ್ತೇನೆ. ಆದರೆ ಅಂತಹ ಅಜ್ಞಾತ ಸ್ಥಾನದಲ್ಲಿ ನಾವಿಬ್ಬರೇ ಹೋಗುವುದು ನಿರಾಪದವಲ್ಲ. ನಮ್ಮ ಅನುಚರರೂ ನಮ್ಮ ಹಿಂದೆ ಬರಲಿ. ನಾವು ಅನೇಕರು ಕೂಡಿದ್ದರೆ ಪುಂಡರು ನಮ್ಮನ್ನು ಸಹಜವಾಗಿ ವಿಪನ್ನಗೊಳಿಸ ಲಾರರು. ಅವರನ್ನು ಬಂಧಿಸುವುದೂ ಅಷ್ಟೊಂದು ಕಠಿಣವಾಗಲಿಕ್ಕಿಲ್ಲ.” ಎಂದು ಅವರೆಂದರು.

## ೧೦

ಈ ಗಂಡಾಂತರದ ದಂಡಯಾತ್ರೆಯಲ್ಲಿ ಕಿಟ್ ಎರೋಸ್ಮಿಥ್‌ನೇ ಮುಂದಾ ಳಾಗುವನು. ಅವನ ಹಿಂದೆ ಪ್ಯಾರೆಟ್ ಸಾಗಿದರು. ಅವರನ್ನು ಅನುಸರಿಸಿ ಅವರ ಅನುಚರರು—ಎಟ್ಕಿನ್ಸನ್ ಮೊದಲಾದ ಪೋಲಿಸರು—ಒಬ್ಬೊಬ್ಬರಾಗಿ ಸುರಂಗದಲ್ಲಿ ಇಳಿಯತೊಡಗಿದರು. ಏರೋಸ್ಮಿಥ್ ಆರು ಮೆಟ್ಟಿಲುಗಳನ್ನಿಳಿದ, ಆಮೇಲೆ ಪಕ್ಕನೆ ಅವನ ಗತಿ ಕುಂಠಿತವಾಯಿತು. ಅವನು ದೀಪಹಚ್ಚಿ ಕೆಳಗೆ ನೋಡಿದ. ಮುಂದೆ ಕೆಲವು ಮೊಳಗಳ ವರೆಗೆ ಒಂದೂ ಮೆಟ್ಟಿಲಿರಲಿಲ್ಲ. ಗುಹೆ ಜಾರಿಕೆಮಯ. ಅಷ್ಟು ಅಂತರವನ್ನು ದಾಟಲು ಉಪಾಯಗಾಣದೆ ಏರೋ ಸ್ಮಿಥ್ ಮೇಲಕ್ಕೆ ನೋಟ ಹೊರಳಿಸಿ,

"ಮಿ. ಪ್ಯಾರೆಟ್, ಒಬ್ಬ ಪೋಲಿಸನನ್ನು ಮೇಲೆ ಕಳಿಸಿ ಒಂದು ತುಂಡು ಹಗ್ಗವನ್ನು ತರಿಸಿರಿ. ಹಗ್ಗವಿಲ್ಲದೆ ಇನ್ನು ಕೆಳಗಿಳಿಯುವುದು ಸಾಧ್ಯವಿಲ್ಲ." ಎಂದನು.

ಒಬ್ಬ ಪೋಲಿಸ್ ಹಾಲಿನಲ್ಲಿ ಹೋಗಿ ಹುಡುಕಿದ. ಹಗ್ಗದ ತುಂಡು ಸಿಕ್ಕಲಿಲ್ಲ. ಒಂದು ಚಾದರವನ್ನು ತಂದ. ಪ್ಯಾರೆಟ್ ಆದರ ಒಂದು ತುದಿಯನ್ನು ಏರೋಸ್ಮಿಥ್‌ನ ಕೈಯಲ್ಲಿ ಕೊಡಲು, ಅವನು ಅದನ್ನು ಹುರಿ ಮಾಡಿ ಹಗ್ಗ ಮಾಡಿದ. ಆ ಚಾದರವನ್ನು ನೋಡಿದಾಗ ಅದು ಫೆಲ್ಸ್ಟನಳ ಹೆಣದ ಮೇಲೆ ಹೊದಿಸಿದ್ದೆಂದು ಏರೋಸ್ಮಿಥ್‌ಸಿಗೆ ತಿಳಿಯಿತು. ಅದನ್ನೇ ಹಗ್ಗದಂತೆ ಉಪಯೋಗಿಸಬೇಕಾಯಿತೆಂಬುದನ್ನು ನೆನೆದಾಗ ಅವನ ಮನಸು ಅಪ್ರಸನ್ನವಾಯಿತು.

ಪ್ಯಾರೆಟ್ ಚಾದರದ ಒಂದು ತುದಿಯನ್ನು ಹಿಡಿದುಕೊಂಡರು. ಏರೋಸ್ಮಿಥ್ ಇನ್ನೊಂದು ತುದಿಯನ್ನು ಹಿಡಿದುಕೊಂಡು ಜೋತುಬಿದ್ದರು. ಕೆಲ ಅಂತರದ ಮೇಲೆ ಅವನ ಕಾಲಿಗೆ ಒಂದು ಮೆಟ್ಟಿಲು ಹತ್ತಿತು. ಅಲ್ಲಿಂದ ಮುಂದೆ ಇಳಿಯುವುದಕ್ಕೆ ಯಾವ ಅನನುಕೂಲತೆ ಇದ್ದಿಲ್ಲವಾದರೂ ಆವನು ಚಾದರವನ್ನು ಬಿಡಲಿಲ್ಲ. ಆಮೇಲೆ ಘಟಿಸಿದ ದುರ್ಘಟನೆಯ ಫಲಿತಾಂಶವನ್ನರಿತಾಗ, ಆ ಜಾಗರೂಕತೆಗಾಗಿ ಅವನು ತನ್ನ ಭಾಗ್ಯವನ್ನು ಕೊಂಡಾಡಿದ.

ಆರಕ್ಷಣದಲ್ಲಿಯೇ ಆ ಅಂಧಃಕಾರದಲ್ಲಿ ಹರಿತವಾದ ಕತ್ತಿಯ ಧಾರೆ ಝಳಪಿಸಿತು. ಕೂಡಲೆ ಅವನು ಹಿಡಿದಿದ್ದ ಹಗ್ಗವು ಎರಡು ತುಂಡಾಯಿತು. ಆದರೆ ಪ್ಯಾರೆಟ್ ತತ್ಕ್ಷಣ ಕೈನೀಡಿ ಏರೋಸ್ಮಿಥ್‌ನ ಎತ್ತಿದ ಕೈಯನ್ನು ಹಿಡಿದರು. ಇಲ್ಲದಿದ್ದರೆ ಆವನು ಜೋಲಿ ಹಿಡಿಯಲಾಗದೆ ಕೆಳಗೆ—ಅದೆಷ್ಟು ಕೆಳಗೆ ಬೀಳುತ್ತಿದ್ದನೆಂಬುದನ್ನು ತಿಳಿಯುವುದೇ ಅಸಾಧ್ಯ. ಸಾವಿನ ಬಾಯಲ್ಲಿಯೇ ಬೀಳುತ್ತಿದ್ದನೆಂಬುದು ಮಾತ್ರ ಖಂಡಿತವಾಗಿ ಅವರಿಗೆನಿಸಿತು. ಮುಂದಿನ ಕ್ಷಣದಲ್ಲಿ ನಿಕೆಲ್—ನಿರ್ಮಿತ ಗುಂಡುಗಳ ಮಳೆ ಆವನ ಅಕ್ಕಪಕ್ಕದಲ್ಲಿ ಸುರಿಯತೊಡಗಿತು. ಆದರಿಂದ ಮುಂದೆ ಕೆಳಗಿಳಿಯುವುದು ಅಸಾಧ್ಯವಾಗಿ ಬಿಟ್ಟಿತು.

ಈ ಹೊಸ ವಿಪತ್ತು ಏರೋಸ್ಮಿಥ್‌ನ ಬುದ್ಧಿಯನ್ನು ಮಂಕುಗೊಳಿಸಿತು. "ಆಟೋಮೆಟಿಕ್ ರೈಫಲಿನ ಗುಂಡುಗಳು! ಮೆಟ್ಟಿಲ ಮೇಲೆ ಕಾಲ ಭಾರ ಬಿದ್ದುದರಿಂದ ಆದು ಹಾರತೊಡಗಿದೆ. ಉಳಿದ ಮೆಟ್ಟಿಲುಗಳನ್ನಿಳಿಯುವಾಗ

ಮತ್ತೆ ಹೀಗೆಯೇ ಆಗುವುದೋ ಏನೋ ನಾನರಿಯೆ." ಹಣೆಯ ಬೆವರೊರಸಿ ಕೊಳ್ಳುತ್ತ ಅವನೆಂದ;

ಮುಂದಿನ ಮೆಟ್ಟಿಲುಗಳನ್ನು ಏರೋಸ್ಮಿತ್ ಬೇರೆ ರೀತಿಯಲ್ಲಿಯೇ ಇಳಿದ. ಅದರಿಂದ ಮೆಟ್ಟಿಲು ಸ್ವಲ್ಪ ಕುಂಟಿದರೂ ಗುಂಡಿನ ಮಳೆ ಸುರಿಯ ಲಿಲ್ಲ.

"ಗುಂಡುಗಳ ಮಳೆಯನ್ನು ಕಂಡು ನಾವು ಮುಂದುವರಿಯಲು ಪ್ರಯತ್ನಿ ಸದಿರೆವು ಎಂಬ ಉದ್ದೇಶದಿಂದಲೇ ಅವರು ಈ ಏರ್ಪಾಟು ಮಾಡಿದ್ದಾರೆ. ಗುಂಡು ಗಳಿಂದ ನಾವು ಸಾಯಲಿಲ್ಲ ನಿಜ; ಆದರೆ, ಮುಖ್ಯ ತೊಂದರೆಯ ವಿಷಯವೆಂ ದರೆ, ಅವರು ಪಾತಾಳ ಗೃಹದಲ್ಲಿ ಅಡಗಿಕೊಂಡಿದ್ದರೆ, ಈ ಶಬ್ದವನ್ನು ಕೇಳಿ ನಾವು ಬರುತ್ತಿರುವೆವೆಂದು ಅವರಿಗೆ ಗೊತ್ತಾಗುವುದು." ಏರೋಸ್ಮಿತ್ ನುಡಿದ.

ಏನೇ ಆಗಲಿ, ಕೆಲವು ನಿಮಿಷಗಳಲ್ಲಿಯೇ ಅವರು ಒಬ್ಬೊಬ್ಬರಾಗಿ ಸೋಪಾನ ಪಙ್ಕ್ತಿಯನ್ನಿಳಿದು ಸುರಂಗದ್ವಾರದ ಬಳಿಬಂದುಸೇರಿದರು. ಆ ಭಾಗ ಇಟ್ಟಿಗೆಗಳಿಂದ ಕಟ್ಟಿದ್ದು. ಮಧ್ಯ ಯುಗದ ಶಿಲ್ಪ ಮಾದರಿ ಇನ್ನೂ ಅಚ್ಚಳಿ ಯದೆ ಉಳಿದು ಬೆರಗುಗೊಳಿಸುತ್ತಿತ್ತು. ಅಲ್ಲಿ ಕೆಲವು ಆಟೊಮೆಟಿಕ್ ರೈಫಲು ಗಳು ಮೇಲ್ಮೊಗವಾಗಿ ಸಾಲಾಗಿ ಇಟ್ಟಿದ್ದವು. ಪ್ರತಿಯೊಂದು ರೈಫಲಿನ ಕುದು ರೆಗೆ ಒಂದೊಂದು ಮೆಟ್ಟಿಲಿನ ಸಂಬಂಧ ಜೋಡಿಸಿ, ಮೆಟ್ಟಿಲ ಮೇಲೆ ಒತ್ತಡ ಬಿದ್ದೊಡನೆ ಕುದುರೆ ಹಾರುವಂತೆ ಏರ್ಪಾಟವಿತ್ತು.

ಸುರಂಗದೊಳಗೆ ಏರೋಸ್ಮಿತ್ ನೋಡಿದ. ಅವನ ಅಂದಾಜಿನಂತೆ ಅದು ಎರಡು ನೂರು ಗಜ ಉದ್ದವಾಗಿತ್ತು. ಅವನ ಬ್ಯಾಟರಿಯ ಬೆಳಕು ಸುರಂಗದ ಆ ತುದಿಯ ವರೆಗೆ ಹರಿಯುತ್ತಿರಲಿಲ್ಲವಾದುದರಿಂದ ತನ್ನ ಅಂದಾಜು ಎಷ್ಟು ಮಟ್ಟಿಗೆ ನಿಜವೆಂಬುದು ಅವನಿಗೆ ತಿಳಿಯಲಿಲ್ಲ. ನಾಲ್ಕೂ ಕಡೆ ನಿಃಸ್ತ ಬ್ಧತೆ; ತಮ್ಮ ಹೆಜ್ಜೆಯ ಮೃದು ಶಬ್ದದ ಹೊರತು ಏನೂ ಕೇಳಿಸುತ್ತಿರಲಿಲ್ಲ. ಅವರು ಸ್ವಲ್ಪ ಮುಂದುವರಿದ ಮೇಲೆ ಸುರಂಗವು ಎಡಕ್ಕೆ ಹೊರಳಿತ್ತು. ಅಲ್ಲಿ ಹೋಗಿ ಏರೋಸ್ಮಿತ್ ಗಕ್ಕನೆ ನಿಂತ. ಪ್ಯಾರೆಟ್ ಮತ್ತು ಸಾರ್ಜಂಟ್ ಎಟ್ಕಿನ್ಸನ್ ಹೋಗಿ ಅವನ ಬದಿಯಲ್ಲಿ ನಿಂತರು. ಆಗ ಏರೋಸ್ಮಿತ್ ಹೇಳಿದ:

"ಇಲ್ಲಿಂದ ನಾವು ಎರಡು ಗುಂಪುಗಳಾಗಿ ಮುಂದುವರಿಯಬೇಕು. ಅದ ಕ್ಕಾಗಿ ನೀವು ಹೇಗೆ ವ್ಯವಸ್ಥೆ ಮಾಡುವಿರಿ? ನನಗೆನಿಸುತ್ತದೆ: ನಾನೂ ನೀವೂ

ನಾಲ್ಕೂ ಕಡೆಯ ವ್ಯವಸ್ಥೆಯನ್ನು ಪರೀಕ್ಷಿಸುತ್ತ ಮುಂದುವರಿಯಬೇಕು. ಸಾರ್ಜಂಟ್ ಎಟ್ಕಿನ್ಸನ್ ಮತ್ತು ಪೋಲಿಸರು ದೂರದಲ್ಲಿ ನಮ್ಮ ಅಪ್ಪಣೆಯನ್ನು ನಿರೀಕ್ಷಿಸಿಕೊಂಡಿರಬೇಕು. ನಮಗೆ ಅಗತ್ಯವೆನಿಸಿದರೆ ಅವರಿಗೆ ಮುಂದುವರಿಯಲು ಸೂಚನೆ ಕೊಡಬೇಕು. ನಮಗೆ ಇವರ ಸಹಾಯ ಬೇಕೆನಿಸಿದಾಗ ಸೀಟಿ ಊದುವೆವು, ಅಥವಾ ಶತ್ರುಗಳೊಡನೆ ನಮ್ಮ ಹೊಡೆದಾಟ ಪ್ರಾರಂಭವಾದರೆ ಆ ಶಬ್ದವನ್ನು ಕೇಳಿ ಇವರು ನಮ್ಮ ಸಹಾಯಕ್ಕೆ ಧಾವಿಸಿ ಬರುವರು. ಅಂತಹ ಪ್ರಸಂಗ ಬರದಿದ್ದರೆ ಇವರು ಅರ್ಧ ಗಂಟೆ ಕಾಲ ನಮಗಾಗಿ ಇಲ್ಲಿಯೇ ಕಾದಿರಬೇಕು."

ಪ್ಯಾರೆಟ್ ಗಂಭೀರನಾಗಿ ವಿಚಾರ ಮಾಡದೆ ಯಾವ ವಿಷಯದಲ್ಲಿಯೂ ತಮ್ಮ ಮತಾಮತವನ್ನು ಹೇಳತಕ್ಕವರಲ್ಲ. ಏರೋಸ್ಮಿಥ್‌ರ ಸೂಚನೆಯನ್ನು ಸಮರ್ಥಿಸುವುದು ಯುಕ್ತವಾದೀತೋ ಆಗದೋ ಎಂದು ಅವರು ಯೋಚಿಸಿದರು. ಕೊನೆಗೆ, "ಒಳ್ಳೇದು, ಹಾಗೇ ಆಗಲಿ" ಎಂದು ಈ ದಾಳಿಯ ಸಹಾಯಕನ ಸೂಚನೆಯನ್ನು ಒಪ್ಪಿದರು.

ಬಳಿಕ ಅವರಿಬ್ಬರೂ ಮುಂದುವರಿದರು. ಆ ಸುರಂಗ ಮಾರ್ಗ ಕಿರಿಯಗಲಾಗಿತ್ತು. ಕೆಲ ನಿಮಿಷ ಸಾಗಿದ ಬಳಿಕ, ಮುಂದೆ ಸುಮಾರು ಐವತ್ತು ಗಜದಷ್ಟು ದೂರದಲ್ಲಿ ಪುನಃ ಎಡಕ್ಕೆ ತಿರುಗಬೇಕಾಗುವುದೆಂದು ತೋರಿತು. ಏಕೆಂದರೆ ಆ ತಿರುವಿನಮುಖದಲ್ಲಿ ಮೃದುಪ್ರಕಾಶ ಅವರಿಗೆ ಗೋಚರಿಸಿತು; ಆ ಬೆಳಕು ಇನ್ನೊಂದು ಮಾರ್ಗದ ಅಸ್ತಿತ್ವದ ಸೂಚಕವೆಂದು ಅವರಿಗೆನಿಸಿತು.

ಆ ಬೆಳಕನ್ನು ಕಂಡು ಪ್ಯಾರೆಟ್ ಬ್ಯಾಟರಿಯನ್ನು ಆರಿಸಿ, "ಇಲ್ಲಿಂದ ನಾವು ಸುತ್ತುಮುತ್ತಲೂ ಕಣ್ಣಿಟ್ಟು ಎಚ್ಚರದಿಂದ ನಡೆಯಬೇಕು." ಎಂದು ಮೃದುಸ್ವರದಲ್ಲಿ ನುಡಿದರು.

ಅತ್ಯಂತ ಜಾಗರೂಕತೆಯಿಂದ, ಕಾಲಸಪ್ಪಳವೂ ಹೆಚ್ಚಾಗಿ ಆಗದಂತೆ, ಅವರು ಸಾಗಿದರು. ಆದರೆ ಎಷ್ಟು ಮೆಲ್ಲಗೆ ನಡೆದರೂ ಪ್ರತಿಧ್ವನಿತವಾಗುವಷ್ಟು ಆ ಗುಹೆ ನಿಶ್ಶಬ್ದವಾಗಿತ್ತು. ಶಬ್ದಸ್ಪರ್ಶಮಯವಾದ ವಸುಂಧರೆಯನ್ನು ಬಿಟ್ಟು ಬೇರೆ ಯಾವುದೋ ಜಗತ್ತಿಗೆ ಬಂದಂತೆ ಅವರಿಗೆ ಭಾಸವಾಯಿತು.

ಅವರು ಆ ಮಾರ್ಗದ ಮುಕ್ಕಾಲು ಪಾಲು ಕ್ರಮಿಸಿದ್ದರು. ಆಗ ಸಾಂ ಸಾಂ ಎಂಬ ನಿರಂತರವಾದ ಶಬ್ದ ಕೇಳಿಸಿತು. ಆ ಶಬ್ದ ಗಂಭೀರ, ಶ್ರುತಿ

ಕಠೋರ, ಚಿಂತಾಜನಕ. ಆ ಕರ್ಕಶ ಶಬ್ದವನ್ನು ಕೇಳಿ ಅವರು ವಿದ್ಯುದ್ವೇಗ ದಿಂದ ಹಿಂದಿರುಗಿ ನಿಂತರು. ಆಗ, ಈ ವೊದಲು ಕಂಡ ಬೆಳಕು ಅವರ ಬೆನ್ನುಕಡೆಗಾಯಿತು. ಎದುರಿನಲ್ಲಿ ಅಂಧಕಾರವನ್ನು ಭೇದಿಸಿಕೊಂಡು ಅವರ ದೃಷ್ಟಿ ಏನನ್ನೂ ಕಾಣಲಿಲ್ಲ. ಆದರೂ ಈ ಶಬ್ದ ಯಾವುದೋ ಭಯಾನಕ ಘಟನೆಗೆ ಸಂಬಂಧಿಸಿದುದೆಂದು ಅವರು ತಿಳಿದುಕೊಂಡರು. ಆ ಘಟನೆ ಏನೆಂಬುದು ಮಾತ್ರ ಅವರ ಊಹೆಗೆ ನಿಲುಕಲಿಲ್ಲ. ನೋಡದಂತೆ ಕಪ್ಪಾದ ಕಠಿನ ಪದಾರ್ಥವೊಂದು ಸುರಂಗದ ಮೇಲ್ಗಡೆಯಿಂದ ಮೆಲ್ಲಮೆಲ್ಲನೆ ಕೆಳಗಿಳಿದಂತೆ ಕಿಟ್ ಏರೋಸ್ಮಿಥ್‌ನಿಗೆನಿಸಿತು. ಅವನ ನೋಟ ಮುಂದೆ ಹರಿಯಲಿಲ್ಲ.

ಅವನ ಹಿಂದೆ ನಿಂತು ಪ್ಯಾರೆಟ್ ಬ್ಯಾಟರಿ ಹಚ್ಚಿದರು. ಆ ಬೆಳಕಿನಲ್ಲಿ ಕಂಡ ದೃಶ್ಯವನ್ನು ನೋಡಿ ಏರೋಸ್ಮಿಥ್‌ನಿಗೆ ಪ್ರಾಣ ಕೊರಳಿಗೆ ಬಂದಂತಾಯಿತು. ಆವನು ನಿಂತಲ್ಲಿಯೇ ಸ್ತಂಭಿತನಾಗಿ ಬಿಟ್ಟ. ಮೇಲಿನಿಂದ ತಮ್ಮ ಆದೂರದಲ್ಲಿ ಕೆಳಗಿಳಿದ ಕರಿಯ ಪದಾರ್ಥ ಸುದೃಢವಾದ ಉಕ್ಕಿನ ಹಲಗೆ. ದಪ್ಪವಾದ ಆ ಉಕ್ಕಿನ ಹಲಗೆ ಆವರ ದಾರಿಯನ್ನು ಕಟ್ಟಿತು. ಅವರು ಪಕ್ಕನೆ ಹಿಂದಿರುಗಿ ನೋಡಿದರು. ಆ ದಿಕ್ಕಿನ ದಾರಿಯೂ ಹಾಗೆಯೇ ಕಟ್ಟಿದ್ದಿತು. ಎತ್ತ ಹೋಗಲೂ ಹಾದಿಯಿಲ್ಲ. ಅವರ ದೌರ್ಭಾಗ್ಯವು ಅವರನ್ನು ಅಭೇದ್ಯವಾದ ಉಕ್ಕಿನ ಪೆಟ್ಟಿಗೆಯಲ್ಲಿ ಸೆರೆ ಹಾಕಿತು.

"ಬೇಗ ಬನ್ನಿ, ಆ ಹಲಗೆಯನ್ನು ಸರಿಸಿ ಬಿಡುವ" ಏರೋಸ್ಮಿಥ್ ಕೂಗಿ ನುಡಿದ.

ಉಕ್ಕಿನ ಪರದೆಯನ್ನು ಸರಿಸುವುದಕ್ಕಾಗಿ ಅವನು ಮುಂದುಗಡೆ ಧಾವಿಸಿ ನಡೆದ. ಆದರೆ ಪ್ರಚಂಡವಾದ ಕಾಲ್ತೊಡಕೆನಿಂದ ಅವನ ಗತಿ ಕುಂಠಿಸಿತು. ಕೆಲವು ಉಕ್ಕಿನ ಬೆರಳುಗಳು ಅವನ ಕಾಲನ್ನು ಗಟ್ಟಿಯಾಗಿ ಹಿಡಿದು ಎಳೆದವು. ಆ ಹಿಡಿತವನ್ನು ತಪ್ಪಿಸಿಕೊಳ್ಳುವುದು ಏರೋಸ್ಮಿಥ್‌ನ ಪೂರ್ಣಶಕ್ತಿಯಿಂದಲೂ ಆಶಕ್ಯವಾಯಿತು. ಸ್ಥಿರವಾಗಿ ನಿಲ್ಲುವುದಕ್ಕೂ ಆಗದೆ ಕಿರಿಯಗಲಾದ ಆ ಸುರಂಗದಲ್ಲಿ ಆವನು ಬಿದ್ದುಬಿಟ್ಟ. ತಲೆಗೆ ಪೆಟ್ಟುತಗಲಿ ಆವನಿಗೆ ಮೂರ್ಛೆ ಬರಲು ಉಪಕ್ರಮಿಸಿತು. ಅರ್ಧ ಚೇತನಾವಸ್ಥೆಯಲ್ಲಿಯೇ ಅವನು ಪ್ಯಾರೆಟರ ಕಡೆಗೆ ನೋಡಿದ. ಅವರ ಸ್ಥಿತಿಯೂ ಅವನಂತೆಯೇ ಆಗಿತ್ತು; ಆವರೂ ಬಿದ್ದುಬಿಟ್ಟಿದ್ದರು. ಸ್ವಲ್ಪ ಹೊತ್ತಿನಲ್ಲಿ ಅವನು ಪೂರ್ಣ ಪ್ರಜ್ಞಾಹೀನನಾದ.

ಎಷ್ಟು ಸಮಯದ ತರುವಾಯ ತನಗೆ ಎಚ್ಚರು ಹುಟ್ಟಿತೋ ಏರೋಸ್ಮಿಥ್ ನಿಗೆ ತಿಳಿಯದು. ಅವನು ಕಣ್ಣು ತೆರೆದಾಗ ವಿದ್ಯುದ್ದೀಪಗಳ ಉಜ್ವಲ ಪ್ರಕಾಶದಿಂದ ಆ ಸುರಂಗಪಥ ಝುಗಝುಗಿಸುತ್ತಿತ್ತು. ಸುರಂಗದ ಗೋಡೆಯೊಳಗೆ ಸಣ್ಣ ದುಂಡು ಕಿಂಡಿಗಳಿದ್ದವು. ಅವೆಲ್ಲವುಗಳಲ್ಲಿ ವಿದ್ಯುದ್ದೀಪದ ಬಟ್ಟಲುಗಳಿದ್ದವು. ಶತ್ರುಗಳು ಆ ಕಿಂಡಿಗಳ ಮರೆಯಲ್ಲಿ ಅವಿತುಕೊಂಡು ತಮ್ಮ ಚಲನವನ್ನು ನೋಡುತ್ತಿದ್ದಿರಬೇಕೆಂದು ಅವನು ತಿಳಿದುಕೊಂಡ. ಏರೋಸ್ಮಿಥ್ ಎಚ್ಚತ್ತ ವೇಳೆ ತನ್ನ ಕೈಕಡೆ ನೋಡಿದ. ತನ್ನ ಕೈಗಳೆರಡೂ ಸೂಕ್ಷ್ಮವಾದ ಆದರೂ ಸುದೃಢವಾದ ಹಗ್ಗದಿಂದ ಕಟ್ಟಿವೆ. ಕಾಲುಗಳೂ ಕಟ್ಟಿದ್ದವು. ಅತಿ ಕಷ್ಟದಿಂದ ಎದ್ದು ನಿಂತರೂ ಚಲಿಸುವುದು ಅಶಕ್ಯವಾಗಿತ್ತು. ಅವನು ಪಕ್ಕಕ್ಕೆ ನೋಟ ಹೊರಳಿಸಿ ನೋಡಿದ: ಪ್ಯಾರಿಟರ ಹಾಡೂ ಅವನಂತೆಯೇ ಆಗಿತ್ತು. ಸ್ಕಾಟ್ಲಂಡ್ ಯಾರ್ಡಿನ ಹೆಸರಾದ ಸನ್ಮಾನ್ಯ ಡಿಟೆಕ್ಟಿವ್ ಸುಪರಿಂಟೆಂಡೆಂಟರ ಗೌರವವು ಧೂರ್ತ ದಸ್ಯುಗಳ ಚಾತುರ್ಯದಿಂದ ಮಣ್ಣಲ್ಲಿ ಹೊರಳಾಡುತ್ತಿತ್ತು. ಈ ಅವಸ್ಥೆಯಲ್ಲಿ ಅವರ ಮನಸ್ಥಿತಿ ಎಷ್ಟು ಶೋಚನೀಯವಾಗಿರಬೇಡ! ಮರ್ಯಾದೆಗಾದ ಈ ಆಘಾತ ಅವರಿಗೆ ಅದೆಷ್ಟು ಮರ್ಮಾಂತಿಕವಾಗಿರಬೇಡ ! ಏನೇ ಆಗಲಿ, ಆ ದುರುಳರು ಪ್ಯಾರಿಟರನ್ನು ಕೈಕಾಲು ಕಟ್ಟಿ ಕೆಡವಿದ್ದರಲ್ಲದೆ ಶಸ್ತ್ರಗಳಿಂದ ಗಾಯಗೊಳಿಸಿರಲಿಲ್ಲ.

ಸಹಸಾ ಏರೋಸ್ಮಿಥ್‌ರ ದೃಷ್ಟಿ ಅನತಿದೂರದಲ್ಲಿ ನಿಂತಿದ್ದ ಎರಡು ವಿಕಟ ಮೂರ್ತಿಗಳ ಮೇಲೆ ಬಿದ್ದಿತು. ಅವರೇ ಈ ಭೂಕೋಟರದಲ್ಲಿ ಅಡಗಿದ್ದ ತಮ್ಮನ್ನು ಬಂಧಿಸಿದವರೆಂದು ಅವನು ತಿಳಿದುಕೊಂಡ. ಅವರೊಳಗೊಬ್ಬ ವರ್ಣಸಂಕರ ನಿಗ್ರೋ ಎಂದು ಅವನ ಬಣ್ಣ ಸೂಚಿಸುತ್ತಿತ್ತು. ದೈತ್ಯನಂತೆ ವಿಶಾಲದೇಹಿ ಅವನು; ನೋಡುವುದಕ್ಕೆ ವಿಕಾರರೂಪಿ; ಮೂಗು ಚಪ್ಪಟೆ; ದೃಷ್ಟಿ ಹಿಂಸ್ರ; ತುಟಿ ಗಡುತರ. ನಿಮಿಷಕ್ಕೊಮ್ಮೆ ನಾಲಗೆ ತುಟಿ ಸವರುತ್ತಿತ್ತು. ಇನ್ನೊಬ್ಬ ವಾಮನನಂತೆ ಕುಳ್ಳ. ಅವನ ದೇಹ ಮೂಳೆಹಂದರ— ಮಾಂಸದ ಲವಲೇಶವೂ ಇಲ್ಲ. ಕಿವಿಯ ವರೆಗೂ ಹಬ್ಬಿರುವ ಹುಬ್ಬುಗಳು, ಉಜ್ವಲವಾದ ಕಿರುಗಣ್ಣುಗಳಲ್ಲಿ ದುಷ್ಟತೆ ತುಂಬಿದೆ. ಹಣೆಗೆಯಿಂದ ಹಿಂದಕ್ಕೆ ಬಾಚಿದ ತಲೆಗೂದಲು. ಚೆಂದ ಕಾಣುವುದಕ್ಕಾಗಿ ವೇಷಭೂಷಣಗಳ ಬಗ್ಗೆ ಒಳ್ಳೇ ಜತನ ವಹಿಸುತ್ತಿದ್ದಾನೆಂದು ಅನಿಸುತ್ತಿತ್ತು. ಆದರೆ ಬೆಲೆಯುಳ್ಳ ಉಡಿಗೆ

ತೊಡಿಗೆ ಧರಿಸಿದ ಮಂಗ ಆನಂದದಿಂದ ಹಲ್ಲು ಕಿರಿಕಿರಿದು ತನ್ನ ಚೆಲುವಿಕೆಯನ್ನು ನೋಡಿಕೊಳ್ಳುತ್ತಿರುವಂತೆ ಏರೋಸ್ಮಿಥ್‌ನಿಗೆ ಅವನು ಕಂಡ. ಇವರಿಬ್ಬರನ್ನೂ ಎಲ್ಲಿಯಾದರೂ ಎಂದಾದರೂ ನೋಡಿದ್ದೇನೋ ಎಂದು ಅವನ ಸ್ಮರಣೆಗೆ ಬರಲಿಲ್ಲ.

ಬಾರಬಾರಾ ಅವನ ಮುಂದೆ ಎರಡು ವ್ಯಕ್ತಿಗಳ ರೂಪರೇಷೆ ಬಣ್ಣಿಸಿದ್ದಳು. ಆ ಹೋಲಿಕೆಯಿಂದ ಈ ಟೊಣಪ ದೈತ್ಯ ಸುಲ್ಜ್, ಈ ಬಡಕಾಟಿಗಿಡ್ಡ ಕಾನ್ ಎಂದು ಏರೋಸ್ಮಿಥ್ ತಿಳಿದುಕೊಂಡ. ಅವಳು ಸೆರೆಯಲ್ಲಿದ್ದಾಗ ಈ ನರಪಿಶಾಚರಿಗೇ ಅವಳ ಅನ್ನ ನೀರಿನ ವ್ಯವಸ್ಥೆಯನ್ನು ಒಪ್ಪಿಸಿತ್ತು. ನಕ್ಲಿಜನೇ ಇವರ ದಳಪತಿ ಎಂಬುದು ನಿಃಸಂದೇಹ. ಆದರೆ ಅಲ್ಲಿ ಎಲ್ಲಿಯೂ ಅವನು ಏರೋಸ್ಮಿಥ್‌ನಿಗೆ ಕಾಣಲಿಲ್ಲ. ಅವನು ಬಾರಬಾರಾನನ್ನು ಮರಳಿ ಹಿಡಿದು ತಂದು ಎಲ್ಲಿ ಅಡಗಿಸಿಟ್ಟನೆಂಬುದು ತಿಳಿಯುವ ಬಗೆಯೇ ಇಲ್ಲ. ತನ್ನ ಅವಸ್ಥೆಯ ಬಗ್ಗೆ ಅವನು ಅಷ್ಟು ಕಾತರನಾಗಿರಲಿಲ್ಲ. ಬಾರಬಾರಾನ ದುರ್ಭಾಗ್ಯದ ಚಿಂತೆಯೇ ಅವನನ್ನು ಹೆಚ್ಚು ವ್ಯಾಕುಲನನ್ನಾಗಿ ಮಾಡಿತ್ತು.

"ಇವರಿಗಂತೂ ಈಗ ಎಚ್ಚರ ಹುಟ್ಟಿದೆ; ಇನ್ನು ಇವರನ್ನು ಇಲ್ಲಿ ಇಡುವ ಅಗತ್ಯವೇನು ?" ಕಾನ್ ತನ್ನ ಸಂಗಾತಿಯೊಡನೆ ವಿಚಾರಿಸಿದ.

ಸುಲ್ಜ್ ಹಲ್ಲು ತೆರೆದು ನಕ್ಕು ತಲೆಯಲ್ಲಾಡಿಸಿದ. "ಇಲ್ಲ. ಇವರನ್ನು ಇಲ್ಲಿ ಇಡುವುದರಿಂದ ಪ್ರಯೋಜನವಿಲ್ಲ. ಇವರಿಗೆ ನಡೆಯುವ ಶಕ್ತಿ ಬಂದಿದ್ದರೆ ಎಳೆದುಕೊಂಡು ನಡೆ." ಎಂದು ಅವನು ಪಿಸ್ತೂಲನ್ನು ತೆಗೆದು ಏರೋಸ್ಮಿಥ್‌ನಿಗೆ ಗುರಿಯಿಟ್ಟು ಹಿಡಿದು, "ಬಹಳ ಕಠಿಣ ಸ್ಥಳಕ್ಕೆ ಬಂದಿದ್ದೀರಿ. ಹುಃ ಹುಃ ! ಎದ್ದು ಓಡಿಹೋಗಲು ಪ್ರಯತ್ನಿಸಿದರೆ ಒಂದೇ ಗುಂಡಿನಿಂದ ಖಲಾಸ!" ಎಂದು ನುಡಿದ.

ಕಾನ್ ಏರೋಸ್ಮಿಥ್‌ನನ್ನು ಹಿಡಿದೆತ್ತಲು ಕೈನೀಡಿದ. ಆದರೆ ಅವನು ಆ ಕೈಯನ್ನು ತಳ್ಳಿ ಸ್ವಪ್ರಯತ್ನದಿಂದಲೇ ಅತಿ ಪ್ರಯಾಸದಿಂದ ಎದ್ದು ನಿಂತ; ತನ್ನ ಹಿಂದೆ ಸುಲ್ಜ್ ಹೆಮ್ಮೆಯಿಂದ ಪ್ಯಾರೆಟ್‌ರ ಬಳಿ ನಿಂತಿರುವುದು ಅವನಿಗೆ ಗೋಚರಿಸಿತು. ಅವನು ಅವರನ್ನು ಎಳೆದು ಎದ್ದು ನಿಲ್ಲಿಸಿದ್ದ. ಅವರು ತಮ್ಮನ್ನು ಎಲ್ಲಿಗೆ ಯಾವ ಉದ್ದೇಶದಿಂದ ಒಯ್ಯುತ್ತಿರುವರೆಂಬುದು ಏರೋಸ್ಮಿಥ್‌ನಿಗೆ ತಿಳಿಯಲಿಲ್ಲ.

ಅವರು ಮೂರ್ಛೆ ಹೊಂದುವ ಮೊದಲು ಇದ್ದ ಲೋಹದ ಪರದೆ ಈಗ ಸರಿದು ಹೋಗಿತ್ತು. ಆದುದರಿಂದ ಎದುರಿನಲ್ಲಿ ಒಂದು ಗುಪ್ತ ಕೋಣೆ ಅವರ ಕಣ್ಣಿಗೆ ಬಿತ್ತು. ಅದರ ಕ್ಷೇತ್ರ ಇಪ್ಪತ್ತು ವರ್ಗ ಅಡಿಗಳಿಗಿಂತ ಹೆಚ್ಚಿರಲಾರದು. ಅದನ್ನು ನೆಲದೊಳಗಿನ ಒಂದು ಗುದಾಮು ಎಂದರೂ ಸಲ್ಲುವುದು. ಅಲ್ಲಿ ಯಾವ ಸಾಮಾನೂ ಇರಲಿಲ್ಲ. ಅದು ಮನುಷ್ಯ ವಾಸಕ್ಕೆ ಅತ್ಯಂತ ಅಯೋಗ್ಯವಾದ ಕೋಣೆ. ಕಾನನೊಂದಿಗೆ ಆ ಕೋಣೆಯನ್ನು ಪ್ರವೇಶಿಸಿದೊಡನೆ ಏರೋಸ್ಮಿಥ್‌ನ ಮುಖದಿಂದ ಒಂದು ಅಸ್ಫುಟ ಉದ್ಗಾರ ಹೊರಟಿತು. ಒಳಗೆ ಕಾಲಿಟ್ಟೊಡನೆ ಅಲ್ಲಿ ಅವನಿಗೆ ಕಂಡ ಯುವತಿ ಬಾರಬಾರಾ ಫೆಲ್ಸ್‌ಟನ್. ಯಾವಳ ಶೋಧಕ್ಕಾಗಿ ಹಗಲಿರುಳೆನ್ನದೆ ಅವಿಶ್ರಾಂತವಾಗಿ ಹಲವೆಡೆ ತಿರುಗಿದ್ದನೋ, ಆದರೆ ಆ ಶ್ರಮವೆಲ್ಲ ನಿರರ್ಥಕವಾಗಿತ್ತೋ ಅವಳೇ.

ಆ ಪಾತಾಳ ಗೃಹದಲ್ಲಿ ಬಾರಬಾರಾ ಸೆರೆಯಾಳು. ಅವಳ ಕೈಕಾಲುಗಳೂ ಕಟ್ಟಿದ್ದವು. ಬಿಡುಗಡೆಗಾಗಿ ಹೆಣಗಾಡಿ ಅವಳ ಕೂದಲು ಉಡಿಗೆ ತೊಡಿಗೆ ವಿಶೃಂಖಲವಾಗಿದ್ದವು. ಅವಳು ದಣಿದು ಹೈರಾಣಾಗಿದ್ದಳು. ಅವಳ ಮುಖ ವಿವರ್ಣವಾಗಿತ್ತು. ಅವಳನ್ನು ಒಂದು ಕುರ್ಚಿಯಲ್ಲಿ ಬಿಗಿಯಲಾಗಿತ್ತು. ಭೀತಿವಿಹ್ವಲಳಾದ ಅವಳ ಹಿಗ್ಗಿದ ಕಣ್ಣುಗಳ ದೃಷ್ಟಿ ಆ ಕೋಣೆಯಲ್ಲಿದ್ದ ನಾಲ್ವರಲ್ಲಿ ಒಬ್ಬನ ಮೋರೆಯಲ್ಲಿಯೇ ನಟ್ಟಿತ್ತು. ಅವಳ ನೋಟದ ಗುರಿಯಾದ ಆ ವ್ಯಕ್ತಿಯ ಕಡೆಗೆ ನೋಡಿ ಅವನು ಯಾರೆಂದು ತಿಳಿದಾಗ ಏರೋಸ್ಮಿಥ್‌ನಿಗೆ ಅವಳ ಭೀತಿಯ ಬಗ್ಗೆ ಆಶ್ಚರ್ಯವೆನಿಸಲಿಲ್ಲ.

ಆ ವ್ಯಕ್ತಿ ಪ್ರೌಢ, ದೀರ್ಘಕಾಯ, ಕ್ಷೀಣ; ಅವನ ತಲೆಗೂದಲು ಶುಭ್ರ; ಕೂತುಹೋದ ಕಣ್ಣುಗಳು; ಆ ಕಣ್ಣುಗಳಲ್ಲಿ ಸ್ವಪ್ನಮಯ ಭಾವ, ಆದರೆ ಹುಚ್ಚರಂತೆ ಉದ್ಭ್ರಾಂತ ದೃಷ್ಟಿ. ನಾಲ್ಕು ಅಡಿ ಎತ್ತರದ ಮರದ ಮಂಚದ ಮೇಲೆ ಅವನನ್ನು ಕೆಡವಿದ್ದರು. ಅವನ ಎರಡು ಕೈಗಳನ್ನೂ ದೇಹಕ್ಕೆ ಜೋಡಿಸಿ ಕಟ್ಟಿದ್ದರು. ಅವನನ್ನು ಕೆಡವಿದ ಆ ಮಂಚ ಕೋಣೆಯ ಹಿಂಭಾಗದ ಬಾಗಿಲ ಮುಂದೆ ಇತ್ತು.

ಆ ಕೋಣೆಯ ಎಲ್ಲ ಅಂಶಗಳನ್ನು ಏರೋಸ್ಮಿಥ್ ಸೂಕ್ಷ್ಮದೃಷ್ಟಿಯಿಂದ ನೋಡಿಕೊಂಡ. ಒಂದು ಕಡೆ ಒಂದು ಹಸಿರು ಪರದೆಯಿತ್ತು. ಅದರ ಕೆಳಗೆ

ಅವನ ಪರಿಚಯದ ಕಳ್ಳ ಸ್ಯಾಪರ್ ಬಿದ್ದುಕೊಂಡಿದ್ದ. ಏರೋಸ್ಮಿಥ್‌ನ ದೃಷ್ಟಿ ಆಶ್ಚರ್ಯದಿಂದ ಅಲ್ಲಿಯೇ ನಿಂತಿತು.

"ಬರಬೇಕು, ಬರಬೇಕು! ತುಬ್ಬುಗಾರ ಸಾಹೇಬ!"

ಒಮ್ಮೆಲೆ ಯಾರೋ ಎಂದರು. ಕಂಠಸ್ವರ ಕಠೋರ, ತೀವ್ರ ವಿದ್ರೂಪ ಪೂರ್ಣ. ಅದರಲ್ಲಿ ಅಹಂಭಾವ ತುಂಬಿತ್ತು. ಗೆಲುವಿನ ಗರ್ವ ಪ್ರಕಟವಾಗು ತ್ತಿತ್ತು. ಆದರೂ ಮನುಷ್ಯ ಸ್ವರಗಳಲ್ಲಿ ವಿಶೇಷ ತಜ್ಞನಾದ ಏರೋಸ್ಮಿಥ್‌ನಿಗೆ ಆ ಸ್ವರದಲ್ಲಿ ಮರ್ಮಭೇದಿಯಾದ ಉದ್ವೇಗವೂ ಪ್ರಚ್ಛನ್ನವಾಗಿದೆಯೆಂಬುದು ಕೇಳಿದೊಡನೆ ತಿಳಿಯಿತು.

ಧ್ವನಿ ಅಪರಿಚಿತವಲ್ಲ. ಅಂತೆಯೇ ಆ ಮನುಷ್ಯನ ಮೋರೆ ನೋಡುವ ಅಭಿಲಾಷೆ ಹುಟ್ಟಿ ಏರೋಸ್ಮಿಥ್ ಸುತ್ತಲೂ ನೋಡಿದ. ಕೋಣೆಯ ಒಂದು ಮೂಲೆಯಲ್ಲಿ ನಕ್ಲಿಜ್ ಕಂಡ. ಅವನ ಮೈ ಮೊದಲಿಗಿಂತ ಸೊರಗಿತ್ತು. ಆದರೆ ಮುಖಕಾಂತಿ ಅತಿ ಭೀಷಣ; ಅಲ್ಲಿ ದೃಢತೆ ಒಡೆದು ಕಾಣುತ್ತಿತ್ತು. ಅವನು ಹಲವು ಬಾರಿ ಹಲವು ಆಂದೋಲನಗಳಲ್ಲಿ ಭಾಗಿಯಾಗಿದ್ದ: ಒಮ್ಮೊಮ್ಮೆ ದೇಶದ, ಒಮ್ಮೊಮ್ಮೆ ಸಮಾಜದ, ಮತ್ತೊಮ್ಮೊಮ್ಮೆ ಇಡೀ ಮಾನವ ಜಾತಿಯ ಕಲ್ಯಾಣ ಸಾಧನೆಗಾಗಿ ಒಂದೊಂದು ಗುಂಪನ್ನು ಸಂಘಟಿಸಿ, ಅವುಗಳ ಮುಂದಾ ಳಾಗಿ ಕೆಲಸ ಮಾಡಿದ್ದ. ಅವನು ಅವುಗಳನ್ನು ಅಂಕೆಯಲ್ಲಿಟ್ಟುಕೊಂಡು ನಡೆ ಸುತ್ತಿದ್ದ ನಿಜ, ಆದರೆ ಅವನು ಸ್ವಾರ್ಥವನ್ನು ಎಂದೂ ಮರೆಯಲಿಲ್ಲ. ಅವನು ಯಾವಾಗ ಯಾವ ಅನುಷ್ಠಾನದಲ್ಲಿ ತೊಡಗಿರುತ್ತಿದ್ದನೋ ಅದರಲ್ಲಿಯೇ ಸ್ವಾರ್ಥ ರಕ್ಷಣೆಯ ಏರ್ಪಾಡು ಮಾಡುತ್ತಿದ್ದ. ಆದರೂ ಸಮಾಜದ ಕಲ್ಯಾಣವೇ ತನ್ನ ಏಕಮಾತ್ರ ಉದ್ದೇಶವೆಂದು ಉಚ್ಚಕಂಠದಿಂದ ಸಾರುತ್ತಿದ್ದ. ಅವನಂತಹ ಭಂಡ ಮಾನವ ಹಿತೈಷಿಗಳು ಜಗತ್ತಿನಲ್ಲಿ ವಿರಳವಲ್ಲ.

ಈ ಮೊದಲು ಅವನು ಇಂಗ್ಲಂಡಿನಲ್ಲಿ ಗುಪ್ತಚಾರನಾಗಿ ಕೆಲಸ ಮಾಡಿ ದವನು. ಅಲ್ಲಿ ಅವನು ಅಸಾಧಾರಣ ಚಾತುರ್ಯವನ್ನು ತೋರಿದ್ದ. ಆದರೆ ಕೊನೆಯಲ್ಲಿ ತನ್ನ ಶಕ್ತಿಯ ಅಪಪ್ರಯೋಗ ಮಾಡಿದುದರಿಂದ ಆ ಕೆಲಸವನ್ನು ಬಿಡಬೇಕಾಯಿತು. ಬಳಿಕ ಮೆಲ್ಡ್ರಮನ ಪ್ರತಿಭೆಯನ್ನು ಕಂಡು ಅವನ ಗುಂಪಿ ನಲ್ಲಿ ಸೇರಿದ. ಮೆಲ್ಡ್ರಮನನ್ನು ವಶದಲ್ಲಿ ತಂದುಕೊಂಡು ಅವನ ಪರಿಶ್ರಮದ ಫಲವನ್ನು ತಾನು ಉಣ್ಣಬೇಕೆಂದು ನಕ್ಲಿಜನ ಉದ್ದೇಶ. ಕೊನೆಗೆ ಮೆಲ್ಡ್ರಮ

ನನ್ನ ಕಾರ್ಯಕ್ಷೇತ್ರದಿಂದ ಹೊರಗೆ ಹಾಕಬೇಕೆಂದು ಅವನ ಎಣಿಕೆ. ಮೆಲ್ಡ್ರಮನ ವಿಪತ್ತನ್ನರಿತು ಬಾರಬಾರಾ ಅವನ ಗುಪ್ತಸ್ಥಾನಕ್ಕೆ ಹೋದಾಗಲೇ ನಕ್ಲಿಜ್ ಅವಳನ್ನು ಅಲ್ಲಿಂದ ಹೊರಗೆ ಬಿಡಲಾಗದೆಂದು ಸಂಕಲ್ಪಿಸಿದ್ದ. ಅವಳು ಏರೋಸ್ಮಿಥ್‌ನ ನೆರವಿನಿಂದ ಬಿಡುಗಡೆ ಪಡೆದು ಓಡಿದರೂ ಅವನ ಬಲೆಯಿಂದ ಪಾರಾಗಲಿಲ್ಲ. ಅವನು ಅವಳನ್ನು ನೆರಳಿನಂತೆ ಬೆಂಬತ್ತಿ ಪುನಃ ಹಿಡಿದು ಪಾತಾಳಗೃಹದಲ್ಲಿ ಸೆರೆಯಿಟ್ಟಿದ್ದಾನೆ. ಅಂತೆಯೇ ಅವಳು ಅಲ್ಲಿ ರಜ್ಜುಬದ್ಧಳಾಗಿ ಬಿದ್ದಿರುವುದನ್ನು ಕಂಡಾಗ ಏರೋಸ್ಮಿಥ್‌ನಿಗೆ ಅಚ್ಚರಿಯಾಗಲಿಲ್ಲ.

ನಕ್ಲಿಜ್ ಏರೋಸ್ಮಿಥ್‌ನ ಮೋರೆಯನ್ನು ಕಠೋರದೃಷ್ಟಿಯಿಂದ ನೋಡುತ್ತ ಮಾತನಾಡಿದ: "ಮಿ. ಏರೋಸ್ಮಿಥ್, ನೀವು ಇಲ್ಲಿಯ ವರೆಗೆ ಬಂದು ಭೆಟ್ಟಿ ಕೊಟ್ಟುದಕ್ಕಾಗಿ ಆನಂದವಾಗಿದೆ. ನನ್ನ ಸಂಕಲ್ಪವನ್ನು ವ್ಯರ್ಥಗೊಳಿಸುವುದಕ್ಕಾಗಿ ನೀವು ಪ್ರಯತ್ನಿಸಿದ್ದು ಇದೇ ಮೊದಲನೆಯ ಸಲವಲ್ಲ. ನನ್ನ ಕೆಲಸದಲ್ಲಿ ಎಷ್ಟೋ ಸಲ ಅಡ್ಡ ಬಂದಿದ್ದೀರಿ. ಸುಯೋಗ ಒದಗಿದ್ದರೆ ನನ್ನನ್ನು ಕೊಲ್ಲಲೂ ನೀವು ಹಿಂಜರಿಯುತ್ತಿದ್ದಿಲ್ಲ. ಕೊನೆಗೆ ನೀವು ಪೋಲಿಸರ ಸಹಾಯದಿಂದ ನಮ್ಮ ಈ ಗುಪ್ತ ಸ್ಥಾನಕ್ಕೆ ಬಂದಿದ್ದೀರಿ. ನಿಮ್ಮನ್ನು ವಂಚಿಸುವುದಕ್ಕಾಗಿ ನಾನು ಮಾಡಿದ್ದ ಉಪಾಯವನ್ನು ವ್ಯರ್ಥಗೊಳಿಸಿಯೇ ಈ ಗವಿಯನ್ನು ಪ್ರವೇಶಿಸಿರುವಿರಿ. ಶೀಘ್ರದಲ್ಲಿಯೇ ನಿಮ್ಮ ಈ ಧಾರ್ಷ್ಟ್ಯದ ಪ್ರತಿಫಲವನ್ನು ಭೋಗಿಸಲು ಸಿದ್ಧರಿರಬೇಕು." ಎಂದು ನುಡಿದು ತನ್ನ ಅನುಚರರಿಗೆ—ಅವರನ್ನು ಕಟ್ಟಿ ತಂದಿದ್ದ ಸುಲ್ಜ್-ಕಾನರಿಗೆ "ಅವರನ್ನು ಈಕಡೆ ತಕ್ಕೊಂಡು ಬರ್ರಿ" ಎಂದು ಆಜ್ಞಾಪಿಸಿದ.

ಅವರು ಏರೋಸ್ಮಿಥ್ ಮತ್ತು ಪ್ಯಾರೆಟರನ್ನು ಕೋಣೆಯ ಇನ್ನೊಂದು ಬದಿಗಿದ್ದ ಹಸಿರು ಪರದೆಯ ಹತ್ತಿರ ಎಳೆದುಕೊಂಡು ಹೋಗಿ ಸ್ಯಾಪರನ ಮಗ್ಗಲಲ್ಲಿ ಕೆಡವಿದರು.

ಮಲತಂದೆಯ ಅವಸ್ಥೆಯನ್ನು ನೋಡಿ ಬಾರಬಾರಾ ಅತ್ಯಂತ ಮರ್ಮಾಹತಳಾಗಿ ವಿಚಲಿತಳಾಗಿದ್ದಳು. ಏರೋಸ್ಮಿಥ್—ಪ್ಯಾರೆಟರನ್ನು ಅಲ್ಲಿಗೆ ತಂದರೂ ಆಕಡೆ ಅವಳು ಗಮನ ಕೊಟ್ಟಿರಲಿಲ್ಲ. ನಕ್ಲಿಜ್ ಅವರನ್ನು ಕುರಿತು ಬೆದರಿಸುವ ಮಾತುಗಳನ್ನಾಡಿದಾಗ ಅವಳು ಮೊಗವೆತ್ತಿ ಅವರ ಕಡೆ ನೋಡಿದವಳೆ, ಭಯದಿಂದ ಚೀರಿಕೊಂಡು ಮಾತನಾಡಿದಳು: "ಕಿಟ್, ನೀವೆ? ನೀವೂ

ಈ ನೀಚರ ಬಲೆಯೊಳಗೆ ಬಿದ್ದು ಬಂಧಿತರಾದಿರಾ? ಸರ್ವನಾಶ!" ಹೆಚ್ಚು ಮಾತನಾಡುವುದು ಅಸಾಧ್ಯವಾಯಿತು. ಮೂರ್ಛಿತ ಪ್ರಾಯಳಾಗಿ ತನ್ನನ್ನು ಬಂಧಿಸಿದ್ದ ಕುರ್ಚಿಯ ಬೆನ್ನಿಗೆ ಗೋಣೊರಗಿಸಿದಳು.

ನರ್ಕ್ಲಿಜ್ ಕ್ರೋಧದಿಂದ ಅಧೀರನಾದನು. ವಿಕೃತ ಸ್ವರದಿಂದ ಬಾರ ಬಾರಾಗೆ ಅವನೆಂದ: "ಹಾಂ, ನಾನು ಬಹು ದಿನದಿಂದಲೂ ಈ ತುಂಟನನ್ನು ಅನುಸರಿಸಿದ್ದೇನೆ. ಕೆಲವು ವರುಷಗಳ ಹಿಂದೆ, ನಾನು ಚಿಕಾಗೋ ನಗರದಲ್ಲಿ ಬುದ್ಧಿಬಲದಿಂದ ಧನಸಂಪಾದನೆಯ ಕೆಲಸದಲ್ಲಿ ತೊಡಗಿದ್ದಾಗ ಈ ದೈವಗೇಡಿ ನನ್ನ ಮೇಲೆ ಪೋಲಿಸರನ್ನು ಬಿಟ್ಟ. ಆಮೇಲೆ ನಾನು ಈ ದೇಶಕ್ಕೆ ಬಂದು ನೂತನ ಕೌಶಲದಿಂದ ಅರ್ಥೋಪಾರ್ಜನೆಯಲ್ಲಿ ತೊಡಗಿದರೆ, ಈ ನಾಯಿ ಇಲ್ಲಿಯೂ ನನ್ನನ್ನು ಹುಡುಕಿ, ನಿನ್ನನ್ನು ತನ್ನ ಗಾಡಿಯಲ್ಲಿ ತಂದು ನಮ್ಮ ಗುಪ್ತಸ್ಥಾನದ ಎದುರು ಇಳಿಸಿ ಹೋದ. ನಿಮ್ಮ ಕಪಟಾಲೋಚನೆ ನನಗೆ ಹಿಂದುಗಡೆ ತಿಳಿಯಿತು. ಆಮೇಲೆ ಇವನು ಪುನಃ ಪುನಃ ನನಗೆ ಎಷ್ಟು ಕಷ್ಟ ಕೊಟ್ಟಿದ್ದಾನೆ, ನನ್ನ ದೀರ್ಘ ಕಾಲದ ಯತ್ನ ಪರಿಶ್ರಮಗಳನ್ನು ವ್ಯರ್ಥಗೊಳಿಸಲು ಎಷ್ಟು ಪ್ರಯತ್ನಿಸಿದ್ದಾನೆ, ಇದು ನಿನಗೆ ತಿಳಿಯದ ವಿಷಯವಲ್ಲ. ನನ್ನನ್ನು ವಿಪನ್ನಗೊಳಿಸುವುದಕ್ಕಾಗಿ ನೀವು ಪೋಲಿಸರ ಸಹಾಯವನ್ನು ಪಡೆದಿರಿ, ನನ್ನನ್ನು ಚೂರ್ಣ ಮಾಡುವುದಕ್ಕಾಗಿ ಯಥಾಸಾಧ್ಯ ಪ್ರಯತ್ನ ಮಾಡಿದಿರಿ. ಆದರೆ ನಾನು ನರ್ಕ್ಲಿಜ್. ಬುದ್ಧಿ ಕೌಶಲದಲ್ಲಿ ನನ್ನನ್ನು ಜಯಿಸುವುದು ಪೋಲಿಸರಿಗೆ ಸಾಧ್ಯವೆ? ಈ ಎರೋಸ್ಮಿಥ್ ನನಗೆ ಲೆಕ್ಕವೆ? ನನ್ನ ಮುಂದೆ ಅವನು ಒಂದು ಹುಳ ಇದ್ದ ಹಾಗೆ. ನನ್ನ ಕೌಶಲದಿಂದಲೇ ಇವರು ಇಲ್ಲಿಗೆ ಬಂದು ಸಿಕ್ಕುಬಿದ್ದಿದ್ದಾರೆ. ಈಗ ನಾನು ಇವರನ್ನು ಸಾಮಾನ್ಯ ಕೀಟಗಳಂತೆ ತುಳಿದು ಬಿಡುವೆ." ಎಂದು ನುಡಿದು ಅವನು ಉತ್ತೇಜನೆಯಿಂದ ನೆಲವನ್ನೊದೆದು ಉಗುಳಿದ.

ಬಳಿಕ ನರ್ಕ್ಲಿಜ್ ಕುರ್ಚಿಯ ಬೆನ್ನಿಗೊರಗಿ ಒಂದು ಸಿಗಾರೇಟನ್ನು ಬಾಯಿಯಲ್ಲಿ ತುರುಕಿಕೊಂಡು ಹೊತ್ತಿಸಿ ಬಾಯಿ ಮೇಲ್ಮಾಡಿ ಹೊಗೆಯನ್ನುಗುಳ ತೊಡಗಿದ.

ಎರೋಸ್ಮಿಥ್ ಮಲಗಿದಲ್ಲಿಯೇ ತಲೆಯೆತ್ತಿ ನರ್ಕ್ಲಿಜನ ಮುಖದ ಕಡೆಗೆ ನೋಡಿದ. "ನಿನ್ನ ಒಳ್ಳೆಯ ಸಂಕಲ್ಪ ತಿಳಿದಂತಾಯಿತು. ನೀನೀಗ ಮೆಲ್ಲ್ರನು

ನನ್ನು ಏನು ಮಾಡುವೆಯೆಂಬುದನ್ನು ತಿಳಿಯಬೇಕಾಗಿದೆ." ಅನುಕಂಪಿತ ಸ್ವರದಿಂದ ನುಡಿದ.

ಹೊಗೆಯನ್ನುಗುಳುತ್ತ ಅವಜ್ಞೆಯಿಂದ ಉತ್ತರವಿತ್ತ: "ಅವನ ಭಾಗ್ಯದಲ್ಲಿ ಏನಿದೆಯೆಂಬುದನ್ನು ಶೀಘ್ರವಲ್ಲಿಯೇ ತೋರಿಸುವೆ."

ಅವನ ಮನೋಭಾವವನ್ನರಿತ ಬಾರಬಾರಾನ ಮೈಗೂದಲು ಭಯದಿಂದ ನಿಮಿರಿ ನಿಂತವು.

ಎರೋಸ್ಮಿಥ್ ಧೀರ ಭಾವದಿಂದ, "ಈ ಮಾತಿನಿಂದ ನಿನ್ನ ಮನಸಿನ ಭಾವ ಚೆನ್ನಾಗಿ ತಿಳಿಯಲಿಲ್ಲ. ಅವನ ಗುಪ್ತ ವಿದ್ಯೆಯನ್ನು ಅನ್ಯರು ಯಾರೂ ಪಡೆದುಕೊಳ್ಳಬಾರದೆಂಬ ಉದ್ದೇಶದಿಂದ ಅವನನ್ನು ಕೊಲೆ ಮಾಡಬೇಕೆಂಬುದು ನಿನ್ನ ಸಂಕಲ್ಪವೋ?" ಎಂದು ಮತ್ತೆ ಕೇಳಿ, ಅವನು ನಕ್ಲಿಜನ ಮುಖದ ಭಾವ ಭಂಗಿಯನ್ನು ನಿರೀಕ್ಷಿಸತೊಡಗಿದ. ಅವನ ತಲೆಯ ಸುಸ್ಥಿತಿಯ ಬಗ್ಗೆ ಎರೋಸ್ಮಿಥ್‌ನಿಗೆ ಸಂದೇಹವುಂಟಾಗಿತ್ತು. ಏಕೆಂದರೆ, ಬಹು ಜನ ಅಪರಾಧಿಗಳು, ನರಘಾತಕರು ವಿಕೃತ ಮಸ್ತಿಷ್ಕರಾಗಿರುವರೆಂದು ಅವನ ಗೃಹಿಕೆಯಾಗಿತ್ತು.

ನಕ್ಲಿಜ್ ವಿಕಟ ಮುಖಭಂಗಿಯಲ್ಲಿ ಪಿಶಾಚನಂತೆ ಹೋಹೋ ಎಂದು ನಕ್ಕ. ಆಮೇಲೆ, "ಹಾಂ, ನಿನ್ನ ಅನುಮಾನ ಸತ್ಯ. ನಾನು ಇವನನ್ನು ಕೊಲ್ಲುವೆ. ಆದರೆ, ಇವನಿಂದ ಒಂದು ಗುಟ್ಟನ್ನು ತಿಳಿದುಕೊಳ್ಳುವ ಶಕ್ತಿ ನಿನಗಿಲ್ಲ. ನಿನ್ನಂಥಹ ಮೊಂಡ ತಲೆಯ ಹುಂಬರಿಗೆ ತೋಚಬಹುದಾದಂಥ ವಿಷಯವನ್ನು ತಿಳಿಯುವುದಕ್ಕಾಗಿ ನಾನು ಕಾದಿಲ್ಲ." ಎಂದು ಉಚ್ಚ ಸ್ವರದಿಂದ ನುಡಿದ.

ಅವನ ಮನದಿಂಗಿತವನ್ನು ತಿಳಿದುಕೊಳ್ಳುವುದಕ್ಕಾಗಿ ಎರೋಸ್ಮಿಥ್ ದೃಢ ನಿಶ್ಚಯವನ್ನೇ ಮಾಡಿದ. ಅವನ ಅಂತರಂಗವನ್ನು ಕೌಶಲದಿಂದ ಹೊರಪಡಿಸುವ ಉದ್ದೇಶದಿಂದ ಅವನೆಂದ: "ನೀನು ಎನ್ನುವುದೇನು,—ಯಾವ ಗುಪ್ತ ವಿದ್ಯೆಯ ಸಹಾಯದಿಂದ ಒಂದು ಧಾತುವನ್ನು ರಾಸಾಯನಿಕ ಪ್ರಕ್ರಿಯೆಯಿಂದ ಬೇರೊಂದು ಧಾತುವಿನಲ್ಲಿ ರೂಪಾಂತರಿಸಲಾಗುವುದೋ ಆ ವಿದ್ಯೆ ಅವನಿಗೆ ತಿಳಿದಿಲ್ಲವೋ? ಅಥವಾ ಆ ರಾಸಾಯನಿಕ ಪ್ರಕ್ರಿಯೆಯೇ ಅವನಿಗೆ ಸಿದ್ಧಿಸಿಲ್ಲವೋ?"

ನಕ್ಲಿಜ್ ಅವಜ್ಞೆಯಿಂದ ಉತ್ತರವಿತ್ತ: "ಒಂದು ಧಾತುವನ್ನು ಮತ್ತೊಂದು ಧಾತುವನ್ನಾಗಿ ರೂಪಾಂತರಿಸುವ ಪ್ರಕ್ರಿಯೆಯ ಸಿದ್ಧಿ ಅವನಿಗೆ ಸಾಧ್ಯವೆ? ಈ ಕೇವಲ ಅಹಂಭಾವದ ಹುಂಬ, ಕೊಳಕು ಬೆಲ್ಲದಿಂದ ಉತ್ಕೃಷ್ಟ ಬ್ರಾಂಡಿಯನ್ನು ತಯಾರಿಸಬಲ್ಲನೆ? ಎಂದಿಗೂ ಸಾಧ್ಯವಿಲ್ಲ."

## ೧೧

ಇಷ್ಟು ಹೊತ್ತಿನ ತರುವಾಯ ಈಗ ಮೆಲ್ಡ್ರಮ್ ಮಾತನಾಡಿದ. ಅವನ ಬುದ್ಧಿ ಕೆಟ್ಟಿದೆಯೆಂದು ಏರೋಸ್ಮಿಥ್‌ನ ಗ್ರಹಿಕೆಯಾಗಿತ್ತಾದರೂ ಅವನ ಮುಖಚರ್ಯೆ ನೋಡಿದರೆ, ಅವನೊಬ್ಬ ಹುಚ್ಚನೆಂಬುದರ ಹೊರತು ಬೇರೆ ಭಾವನೆಯೇ ಉಂಟಾಗುವಂತಿರಲಿಲ್ಲವಾದರೂ ತನ್ನ ಸಾವು ನಿಶ್ಚಿತವೆಂದು ತಿಳಿದಾಗಲೂ ಆ ತಲೆಕೆಟ್ಟ ಹುಚ್ಚನು ಆತ್ಮಸಮರ್ಥನೆಗಾಗಿ ತನ್ನ ಕೀರ್ತಿ ಖ್ಯಾತಿಗಳ ಕಥೆಯನ್ನು ಪ್ರಕಾಶಪಡಿಸಲು ಉದ್ಯುಕ್ತನಾದನು. ಆದರೆ ನಕ್ಲಿಜನನ್ನು ಕುರಿತಾಗಲಿ, ಏರೋಸ್ಮಿಥ್‌ನನ್ನು ಕುರಿತಾಗಲಿ ತನ್ನ ಮನದ ಮಾತನ್ನು ಹೇಳುವುದಕ್ಕೆ ಅವನು ಹೇಸಿಕೊಂಡಿರಬೇಕು. ಎಂತಲೇ ಬಾರಬಾರಾನನ್ನು ಉದ್ದೇಶಿಸಿ ಮಾತನಾಡಿದ:

"ನನ್ನ ಸಾಧನೆ, ಕಠೋರ ಸಾಧನೆ ಸಫಲವಾಗಿತ್ತು. ಆ ಸಾಫಲ್ಯ ಸಾಧಾರಣವಲ್ಲ; ಅದರ ಮೂಲ್ಯ ಮಹಾ ಭಯಂಕರ. ಈ ಸಾಧನೆಯಲ್ಲಿ ಸಿದ್ಧಿಯನ್ನು ಪಡೆಯುವ ಪ್ರಯತ್ನದಲ್ಲಿ ಅನೇಕರು ಹಾಳಾಗಿದ್ದಾರೆ, ಅನೇಕರು ವಿಧ್ವಸ್ತರಾಗಿದ್ದಾರೆ. ನಾನು ನನ್ನ ಸುಮಾರು ಐವತ್ತು ವರುಷ ವಯಸ್ಸಿನವರೆಗೆ ಗೋದಿಯ ವ್ಯಾಪಾರವನ್ನು ಅದ್ವಿತೀಯವಾಗಿ ನಡೆಸಿ, ಐದು ಕೋಟಿಗಿಂತಲೂ ಹೆಚ್ಚು ಡಾಲರುಗಳನ್ನು ಗಳಿಸಿದ್ದೆ. ಆದರೆ ಹಿಂದುಗಡೆ ನನಗೆ ಗೊತ್ತಾಯಿತು—ನನ್ನ ಗೋದಿ ವ್ಯವಸಾಯದಲ್ಲಿಯ ಆಶಾತೀತ ಸಾಫಲ್ಯದ ಫಲವಾಗಿ ಸಾವಿರಗಟ್ಟಲೆ ಚಿಕ್ಕ ವ್ಯವಸಾಯಿಗಳು ಹಾಳಾಗಿ ಮಣ್ಣು ಮುಕ್ಕಿದ್ದರು.

"ಆಮೇಲೆ ನನ್ನ ಮನಶ್ಚಕ್ಷುವಿನೆದುರು ಹಲವಾರು ದೃಶ್ಯಗಳು ಕನಸಿನಂತೆ ಒಂದೊಂದಾಗಿ ಮೂಡತೊಡಗಿದವು. ಅವೆಲ್ಲವೂ ಅತಿ ಭಯಾವಹವಾಗಿದ್ದವು. ಯಾವ ದುಃಸ್ವಪ್ನವೂ ಅವುಗಳಿಗಿಂತ ಭೀತಿಕರವಾಗಿರಲಾರದು. ನಿರುಪಾಯ ಅಸಹಾಯ ಧನಪತಿಗಳ ಹಾಹಾಕಾರ, ಗುಂಡಾಜನರ ಹಳದಿಯಾದ ಮೋರೆ, ತಮ್ಮ ಅನಿಶ್ಚಿತ ಭವಿಷ್ಯತ್ತಿನ ಗರ್ಭದಲ್ಲಿ ಏನಿದೆಯೋ ಎಂಬುದನ್ನರಿಯದೆ ಆ ಮುಖದಲ್ಲಿ ಎದ್ದು ಕಾಣುವ ಭಯಚಕಿತ ಭಾವ, ಅದರೊಂದಿಗೆಯೆ ತಾತ್ಕಾಲಿಕ ವಿಜಯ ಗರ್ವದಿಂದ ಅವರಿಗಾಗುತ್ತಿದ್ದ ಉಲ್ಲಾಸ, ಬಾರಬಾರಾ ಫೆಲ್ಪ್ಸನಳ ಲಾವಣ್ಯ ಮಂಡಿತ ಸುಂದರ ಮುಖದಲ್ಲಿ ಹತಾಶಾ ಜನಿತ ವಿಷಾದಭಾರಾವನತ ಸಕರುಣ ದೃಷ್ಟಿ, ಪ್ಯಾರೆಟ್‌ರ ರಜ್ಜುಬದ್ಧ ವಿಶಾಲ ದೇಹದಲ್ಲಿ ಅಸಾಧಾರಣ ಧೈರ್ಯದ ವಿಕಾಸ, ಸ್ಯಾಪರನ ಧನಲಾಲಸೆ ಮತ್ತು ಅವರಿಂದಾಗಿ ಆವನಿಗೆ ಬಂಧನ ಯಾತನೆ, ವಿಶ್ವಾಸಘಾತಕರಾದ ಪ್ರಹರಿಗಳಿಬ್ಬರ ಅಸ್ತ್ರಗಳ ಆಸ್ಫಾಲನ —ಇವೆಲ್ಲ ಒಂದೊಂದಾಗಿ ನನ್ನ ಮನಃಪಟದ ಮೇಲೆ ಚಲಚ್ಚಿತ್ರಗಳಂತೆ ಪಡಿ ಮೂಡಿ, ನನ್ನನ್ನು ಅಧೀರನನ್ನಾಗಿ ಮಾಡಿದವು, ಹತಬುದ್ಧಿಯನ್ನಾಗಿ ಮಾಡಿದವು, ಹುಚ್ಚನನ್ನಾಗಿ ಮಾಡಿದವು."

ಮೆಲ್ಡ್ರಮ್ ಹಠಾತ್ ಮೌನ ತಳೆದ. ಅತಿಶಯವಾದ ಉತ್ತೇಜನದಿಂದ ಅವನೆದೆ ಹಾರತೊಡಗಿತು. ಅವನು ಕ್ಷಣಹೊತ್ತು ವಿರಮಿಸಿ ಮುಂದುವರಿಸಿದ:

"ಆಮೇಲೆ? ಆಮೇಲೆ ಇನ್ನೇನು?—ಎಲ್ಲವೂ ಹೋಯಿತು, ಮೊದಲಿಂದ ಕೊನೆವರೆಗೆ ಎಲ್ಲವೂ ನಿರ್ಮೂಲ; ಎಲ್ಲವೂ ಧ್ವಂಸವಾಗಿ ಬಿಟ್ಟಿತು! ನಾನು ಅನೇಕ ವಿಶ್ವಾಸಘಾತಗಳಿಗೆ ಗುರಿಯಾಗಿ, ಬಹಳ ನಿರ್ಯಾತನೆಗಳನ್ನು ಅನುಭವಿಸಿ ನನಗೆ ಅರಿವಾಯಿತು—ಅರ್ಥೋಪಾರ್ಜನೆಯ ಸಾಧನೆಯಲ್ಲಿ ಜೀವನವನ್ನು ಸವೆಸುವುದು ನಿರರ್ಥಕವಾದದ್ದು. ಹೊನ್ನು ಸತ್ಯವಾಗಿಯೂ ಮಾನವ ಜೀವನದ ಮೂರ್ತಿಮಂತ ಅಭಿಶಾಪ. ಹೊನ್ನಿಲ್ಲದಿದ್ದರೆ ಮನುಷ್ಯನು ಸ್ವಾಭಾವಿಕವಾಗಿ ಜೀವನ ಯಾತ್ರೆಯನ್ನು ಸಾಗಿಸುತ್ತಿದ್ದನೆಂದು ನನಗೆನಿಸಿತು. ಜನರು ತಮ್ಮ ಸ್ವಪ್ರಯತ್ನದಿಂದ ಸಂಪಾದಿಸಿದ್ದರಲ್ಲಿಯೇ ವಿನಾಡಂಬರವಾಗಿ, ಸಚ್ಛಂದವಾಗಿ ಅವರ ಹೊಟ್ಟೆ ಬಟ್ಟೆ ಸಾಗುವುದು ಎಂದು ತೋರಿತು. ಬುದ್ಧಿದೋಷದಿಂದಾಗಿ ನಾನು ದುರಾಕಾಂಕ್ಷೆಯ ಸೃಷ್ಟಿ ಮಾಡಿದ್ದೇನೆ, ಅದನ್ನು ತಡೆಯುವುದು ಹೇಗೆ, ನನ್ನ ತಪ್ಪನ್ನು ತಿದ್ದುವುದು ಹೇಗೆ ಎಂಬ ವಿಚಾರದಲ್ಲಿಯೇ

ನಾನು ಪಾರಗಟ್ಟಲೆ ಮುಳುಗಿದ್ದೆ. ಕೊನೆಗೆ ನನ್ನಲ್ಲಿ ಹೊಸದೊಂದು ಅರಿವು ಉಂಟಾಯಿತು; ಬಂಗಾರದ ಪ್ರತಿಷ್ಠೆಯನ್ನು ಕುಗ್ಗಿಸಬೇಕು, ಅದನ್ನು ಸಹಜ ವಾಗಿ ದೊರೆಯುವಂತೆ ಮಾಡಬೇಕು; ಎಂದರೆ ಸುವರ್ಣದ ಮಹಾರ್ಘತೆಯ ಮೂಲಕ ಪೃಥ್ವಿಯಲ್ಲಿ ನಿತ್ಯವೂ ಕೇಳುವ ಅನಂತ ಹಾಹಾಕಾರವನ್ನು ಕೊನೆ ಗಾಣಿಸಬಲ್ಲೆ.

ಈ ಅಭಿಶಪ್ತ ದುರ್ಮೂಲ್ಯ ಧಾತುವಿನ ಲೋಭದಿಂದ ಮನುಷ್ಯನು ಮನುಷ್ಯತ್ವವನ್ನು ಮರೆಯುತ್ತಾನೆ; ಇಂದು ದೇವರಾಗಿದ್ದವನು ನಾಳೆ ಪಿಶಾಚ ನಾಗುತ್ತಾನೆ; ಗಂಡ ಹೆಂಡತಿಯನ್ನು ಬಿಡುತ್ತಾನೆ; ಹೆಂಡತಿ ಪಾತಿವ್ರತ್ಯವನ್ನು ತೊರೆದು ಕಲಂಕವನ್ನು ಹೊರುತ್ತಾಳೆ. ಬಂಧು-ಬಂಧುಗಳಲ್ಲಿ ಪರಸ್ಪರ ಕುತ್ತಿಗೆ ಕೊಯ್ಯುವ ಸಂಚು ನಡೆಯುತ್ತದೆ. ನ್ಯಾಯಾಲಯದಲ್ಲಿ ನಿತ್ಯವೂ ಪಿಶಾಚಿಗಳ ತಾಂಡವಲೀಲೆ ನಡೆಯುತ್ತದೆ, ಕೊಲೆಗಡಕರ ಚೂರಿ ರಾಜಬೀದಿಯಲ್ಲಿ ನಿರೀಹ ಪಥಿಕನ ಹೃತ್ಪಿಂಡವನ್ನು ಸೀಳುತ್ತದೆ. ಆದುದರಿಂದ ಈ ಚಿನ್ನವನ್ನು ಆದರ ಗೌರವ ಸಿಂಹಾಸನದಿಂದ ತಳ್ಳಿ ಬೀದಿಯ ಬಿಡಾಡಿಯನ್ನಾಗಿ ಮಾಡಬೇಕೆಂದು ಸಂಕಲ್ಪಿಸಿದೆ. ಕೃತ್ರಿಮ ಸುವರ್ಣವನ್ನು ತಯಾರಿಸಿ ಖನಿಜ ಸುವರ್ಣದ ಕಾಂಚನ-ಕೌಲೀನ್ಯವನ್ನು ನಷ್ಟಗೊಳಿಸುವೆ;—ಒಂದು ವೇಳೆ ನನ್ನ ಪ್ರಯತ್ನ ವಿಫಲವಾದರೂ ನಾನು ಕೃತಕೃತ್ಯನಾಗದಿದ್ದರೂ ನಿರಾಶನಾಗಿ ಸಂಕಲ್ಪವನ್ನು ಬಿಡಲಿಕ್ಕಿಲ್ಲವೆಂದು ನಿರ್ಧರಿಸಿದೆ. ಬಂಗಾರದ ಬಲದಿಂದ ಪೃಥ್ವಿಯ ಶಾಸನ ದಂಡವನ್ನು ನಡೆಯಿಸುತ್ತಿರುವ, ಅರ್ಥ ಸಾಮರ್ಥ್ಯದಿಂದ ಅಸಹಾಯ ದರಿದ್ರ ಶ್ರಮಜೀವಿಗಳ ಎದೆನೆತ್ತರವನ್ನು ಹೀರಿ ಹೊಟ್ಟೆ ತುಂಬಿಕೊಳ್ಳುತ್ತಿರುವ ಜನಗ ಳಿಗೆ ನಾನು ಕೃತ್ರಿಮ ಸ್ವರ್ಣವನ್ನು ಶೋಧಿಸಿದ್ದೇನೆಂಬುದನ್ನು, ಅವರ ಅರ್ಥದ ಪ್ರತಿಷ್ಠೆಯನ್ನು ನಷ್ಟಗೊಳಿಸಿದ್ದೇನೆಂಬುದನ್ನು ತೋರಿಸುತ್ತೇನೆ. ಇನ್ನು ಅರ್ಥ ಲೋಭದಿಂದ ಯಾರೂ ಆವರ ದಾಸ್ಯತ್ವವನ್ನು ಸ್ವೀಕರಿಸಲಾರರು. ಭಂಗಾರ ದಲ್ಲಿ ಮಾನವ ಜಾತಿಯ ಆಸಕ್ತಿಯನ್ನೇ ಕಳೆದಿದ್ದೇನೆ; ನಾನು ಜಗತ್ತಿನ ಇತಿ ಹಾಸ ಪ್ರವಾಹದ ದಿಶೆಯನ್ನೇ ಬದಲು ಮಾಡುತ್ತಿದ್ದೇನೆ; ಮನುಷ್ಯ ಜಾತಿಯ ಅಭಿಶಾಪವನ್ನು ನಿರಂತರವಾಗಿ ತೊಡೆದುಹಾಕುತ್ತಿದ್ದೇನೆ—ಎಂಬುದನ್ನು ಧನಾ ಧಿಕಾರಿಗಳಿಗೆ ಸಪ್ರಮಾಣವಾಗಿ ಮನವರಿಕೆ ಮಾಡಿಕೊಡುವೆ."

ನಕ್ಲಿಜ್ ಸ್ತಬ್ಧನಾಗಿ ಕುಳಿತು ಮೆಲ್ಡ್ರಮನ ಮರ್ಮಕಥೆಯನ್ನು ಕೇಳು

ತ್ತಲಿದ್ದ. ಅವನ ಯಾವ ಮಾತನ್ನೂ ವಿರೋಧಿಸಲಿಲ್ಲ; ಅವನನ್ನು ಸುಮ್ಮ ನಾಗಿಸುವುದಕ್ಕಾಗಿ ಬೆದರಿಸಲೂ ಇಲ್ಲ. ಯಾವ ಗಭೀರ ಚಿಂತನೆಯಲ್ಲಿಯೋ ಮುಳುಗಿರುವಂತೆ, ಪೈಶಾಚಿಕ ಸಂಕಲ್ಪವನ್ನು ಈಡೇರಿಸಿಕೊಳ್ಳುವ ವಿಚಾರದಲ್ಲಿ ಮೈಮರೆತಂತೆ ಕುಳಿತಿದ್ದ. ಮೆಲ್ಡ್ರಮ್ ಒಮ್ಮೆಲೆ ಮಾತು ನಿಲ್ಲಿಸಿದುದರಿಂದ ಅವನಿಗೆ ಬಾಹ್ಯಜ್ಞಾನ ಬಂದಿತು. ಅವನು ಮೆಲ್ಡ್ರಮನ ಕಡೆಗೆ ನೋಡಿದ. ಅವನ ಕಣ್ಣುಗಳಲ್ಲಿ ಅವಿಶ್ವಾಸ, ಅವನ ಮುಖದಲ್ಲಿ ವಿದ್ರೂಪ ಛಾಯೆ ಪ್ರತಿ ಫಲಿತವಾಗಿದ್ದವು.

ನಕ್ಲಿಜ್ ಹೂಂಕರಿಸಿ, ವಿಕೃತ ಉತ್ತೇಜಿತ ಸ್ವರದಲ್ಲಿ, "ಏಕೆ ಸುಮ್ಮನಾದೆ? ಹೇಳುತ್ತಿದ್ದ ಮಾತುಗಳನ್ನೆಲ್ಲ ಹೇಳಿ ಮುಗಿಸು. ಒಳ್ಳೇ ನಗೆಬರುವ ಮಾತು! ಬಹಳ ದಿನಗಳಾದವು, ನಾನು ಹೊಟ್ಟೆ ತುಂಬ ನಕ್ಕಿಲ್ಲ, ಈಗ ನಗುವುದಕ್ಕೆ ಒಳ್ಳೇ ಅವಕಾಶ ಸಿಕ್ಕಿದೆ." ಎಂದ.

ಅವನ ಮಾತಿಗೆ ಮೆಲ್ಡ್ರಮ್ ಬೆಲೆ ಕೊಡಲಿಲ್ಲ. ತನಗೆ ಕೇಳಿಸಿಯೇ ಇಲ್ಲವೆಂಬ ಭಾವದಲ್ಲಿ ಮುಖವೆತ್ತಿ ಸುತ್ತಲೂ ನಿರೀಕ್ಷಿಸಿದ. ವಿಜಯ ಗರ್ವ ದಿಂದ ಅವನ ಮೋರೆ ಕಳೆಯೇರಿತು. ಅದು ಅಸ್ವಾಭಾವಿಕವಾದರೂ ಅದರಲ್ಲಿ ಅಂತರಿಕತೆಯ ಅಭಾವವಿರಲಿಲ್ಲ.

ಮೆಲ್ಡ್ರಮ್ ಮತ್ತೆ ಹೇಳಲಾರಂಭಿಸಿದ: "ಹಿಂದಿನ ಕಾಲದ ಧಾತು ವಿದ್ಯಾವಿಶಾರದರು ಕೃತ್ರಿಮ ಸುವರ್ಣದ ನಿರ್ಮಾಣಕ್ಕಾಗಿ ಅವಲಂಬಿಸಿದ ಫಾರ್ಮ್ಯುಲಾಗಿಂತಲೂ ಹೆಚ್ಚು ಫಲಪ್ರದವಾದ ವೈಜ್ಞಾನಿಕ ಫಾರ್ಮ್ಯುಲಾ ಹುಡುಕಿ ಬಂಗಾರವನ್ನು ಮಾಡುವ ಪ್ರಯತ್ನದಲ್ಲಿ ನಾನು ನನ್ನ ಜೀವನವನ್ನೇ ಒಪ್ಪಿಸಿದೆ. ಆದರೆ ಸಿದ್ಧಿಯ ಕನಕಮಂದಿರವು ಬಹುದೂರವೇ ಉಳಿದುವನ್ನು ಕಂಡು ನನ್ನಲ್ಲಿ ನಿರಾಶೆ ತಲೆದೋರಿತು. ಆ ಸಮಯದಲ್ಲಿ ನನಗೆನಿಸುತ್ತಿತ್ತು —ನನ್ನ ಈ ಕಠೋರ ಅನುಷ್ಠಾನವು ನಿಷ್ಫಲವಾದರೆ, ಸಾಕಷ್ಟು ಪರಿಶ್ರಮ ಪಟ್ಟೂ ನನ್ನ ಜೀವನದ ವ್ರತದ ಉದ್ಯಾಪನವನ್ನು ಮಾಡಲಾರದೆ ಹೋದರೆ, ಆಗ ನನ್ನೆದುರಿಗಿದ್ದುದು ಒಂದೇ ಹಾದಿ. ನನ್ನ ಸಾಧನೆ ಕೊನೆಯ ಹಾದಿ ಯನ್ನೇ ಹಿಡಿಯುವುದೆಂದು ಗೊತ್ತು ಮಾಡಿಕೊಂಡೆ. ನನ್ನ ಸಂಪತ್ತೆಲ್ಲವನ್ನೂ ಬಂಗಾರದಲ್ಲಿ ಪರಿವರ್ತಿಸುವುದೇ ಆ ಹಾದಿ. ಇದು ಅತಿ ಕಠಿಣ ಕೆಲಸವೆಂಬದು

ನನಗೆ ತಿಳಿದಿತ್ತು. ಆದರೂ ಮೆಲ್ಲಮೆಲ್ಲನೆ ಬಲು ಎಚ್ಚರಿಕೆಯಿಂದ ಎಲ್ಲ ಏರ್ಪಾಡುಗಳನ್ನು ಮಾಡಿದರೆ ಇಷ್ಟಕಾರ್ಯ ಈಡೇರದೆ ಇರಲಾರದೆಂದು ನನಗೆ ತೋರಿತು. ಒಂದು ತಿಂಗಳ ಪ್ರಯತ್ನದಿಂದ ನನ್ನ ಕೆಲ ಸೊತ್ತನ್ನು ಪ್ಯಾರಿಸಿಗೆ ತರುವಲ್ಲಿ ಯಶಸ್ವಿಯಾದೆ. ಉಳಿದ ಸ್ವತ್ತನ್ನು ಆದಾದಂತೆ ಪ್ಯಾರಿಸಿಗೆ ಸಾಗಿಸು ವಂತೆ ನಾನು ವ್ಯವಸ್ಥೆ ಮಾಡಿದೆ. ಹೀಗೆ ಬಂಗಾರವನ್ನು ಹೇರಳವಾಗಿ ಸಂಗ್ರ ಹಿಸಿ, ಯಾರಿಗೂ ತಿಳಿಯದ ಹಾಗೆ ಇಲ್ಲಿಗೆ ಬಂದೆ. ಒಂದು ಸರ್ವಾಂಗಸುಂದರ ಲ್ಯಾಬೋರೆಟರಿ ಸ್ಥಾಪಿಸಿ ನನ್ನ ಕಠೋರ ಸಾಧನೆಯನ್ನು ಆರಂಭಿಸಿದೆ. ಕೃತಕ ಸುವರ್ಣವನ್ನು ತಯಾರಿಸುವ ಪ್ರಯತ್ನದಲ್ಲಿ ತೊಡಗಿದೆ. ಸುಮಾರು ಎರಡು ತಿಂಗಳು ಎಡೆಬಿಡದೆ ಶ್ರಮಿಸಿದ ಬಳಿಕೂ ನನ್ನ ಸಾಧನೆ ಸಾಧಿಸಲಿಲ್ಲವೆಂದೇ ಕಂಡುಬಂದಿತು. ಸಫಲವಾಗುವ ಸಂಭವವೂ ತೋರಲಿಲ್ಲ. ಕಡಿಮೆ ಬೆಲೆಯ ಬೇರೆ ಬೇರೆ ಧಾತುಗಳಿಂದ ರಾಸಾಯನಿಕ ಸಮ್ಮಿಶ್ರಣದ ಮೂಲಕ ಚೊಕ್ಕ ಬಂಗಾರವನ್ನು ಉತ್ಪಾದಿಸುವುದು, ಅನ್ಯಾನ್ಯ ಧಾತುಗಳನ್ನು ವೈಜ್ಞಾನಿಕ ಪ್ರಯೋಗದಿಂದ ಚಿನ್ನವನ್ನಾಗಿ ಮಾಡುವುದು ಸಂಭಾವ್ಯವೋ ಅಸಂಭಾವ್ಯವೋ ಅದಿರಲಿ, ನನಗೆ ಮಾತ್ರ ಅದು ಅಸಾಧ್ಯವೆಂದು ಮನವಟ್ಟಾಯಿತು. ಆದರೆ ನಾನಿನ್ನು ಹಿಮ್ಮೆಟ್ಟುವುದು ಅಶಕ್ಯವಾಗಿತ್ತು. ದೇಹ ಸಣ್ಣ ಮಾಡಿದರೂ ಕಾರ್ಯಸಿದ್ಧಿಯಾಗದಿದ್ದುದರಿಂದ ಜಗತ್ತನ್ನು ವಂಚಿಸುವ ಹಾದಿಯನ್ನು ಹಿಡಿದೆ. ನನ್ನ ಮನೋರಥ ಪೂರ್ಣವಾಗಿದೆ ಎಂದು ಪ್ರಪಂಚದ ಜನಕ್ಕೆ ತೋರಿಸುವುದ ಕ್ಕಾಗಿ ನನ್ನ ಸಂಚಿತ ಸ್ವರ್ಣ ರಾಶಿಯನ್ನು ನಮ್ಮ ಪ್ರಯೋಗಶಾಲೆಯಲ್ಲಿದ್ದ ವೈದ್ಯುತಿಕ ಕುಲುಮೆಯಲ್ಲಿ ಕರಗಿಸಿ, ಬಂಗಾರದ ಗಟ್ಟಿಗಳನ್ನು ಮಾಡತೊಡ ಗಿದೆ. ”

ಮೆಲ್ಡ್ರಮನ ವರದಿಯನ್ನು ಕೇಳಿ ಪ್ಯಾರೆಟ್ ರಜ್ಜುಬದ್ಧರಾಗಿ ಬಿದ್ದು ಕೊಂಡಲ್ಲಿಯೇ ಹಿಗ್ಗಿದರು. ಅವರು ಬಿಟ್ಟ ಸಮಾಧಾನದ ಉಸಿರು ಹತ್ತಿರ ಬಿದ್ದುಕೊಂಡಿದ್ದ ಏರೋಸ್ಮಿಥ್‌ನಿಗೆ ಕೇಳಿಸಿತು. ತಮ್ಮ ಹಣೆಬರಹ ಹೇಗೇ ಇರಲಿ, ಸ್ವರ್ಣಕಾರನ ಘೋಷಣೆಯಿಂದ ವಿಶ್ವದ ಅಧಿನಾಯಕರಿಗುಂಟಾದ ಭೀತಿಗೆ, ಚೊಕ್ಕ ಬಂಗಾರದ ಬೆಲೆ ಬಿದ್ದು ಹೋಗುವುದೆಂಬ ಧನಪತಿಗಳ ಚಿಂತೆಗೆ ಸತ್ಯದ ಆಧಾರವಿಲ್ಲವೆಂಬುದು ತಿಳಿದಾಗ ಅವರಿಗೆ ಅತೀವ ಆನಂದವಾ ಯಿತು. ಆದರಲ್ಲಿ ತಮಗೊದಗಿದ ಸಂಕಟವನ್ನೂ ಅವರು ಮರೆತರು. ಜಗತ್ತಿನ

ಸಭ್ಯತೆ ಗಂಡಾಂತರದಲ್ಲಿದೆ ಎಂಬ ಭಯ ಆಮೂಲಕ, ಹುರುಳಿಲ್ಲದ ಹುಚ್ಚು ಹೆಗ್ಗಳಿಕೆಯಿಂದ ವಿಶ್ವಕ್ಕೆ ಯಾವ ಕೇಡೂ ಆಗಲಾರದು ಎಂದು ಆವರೆಂದು ಕೊಂಡರು.

ತನ್ನ ಅದ್ಭುತ ಕಾರ್ಯ ವಿಫಲವಾಯಿತೆಂದು ಹೇಳುವಾಗ ಮೆಲ್ಟ್ರಮನ ಹೃದಯ ವಿದೀರ್ಣವಾಗುತ್ತಲಿತ್ತು. ಅವನು ಒಮ್ಮೆಲೆ ಸುಮ್ಮನಾದ. ತನ್ನ ವಿಪ್ಲವಾದ ಮನಸನ್ನು ಸ್ತಿಮಿತಕ್ಕೆ ತಂದುಕೊಳ್ಳಲು ಅವನಿಗೆ ಕೊಂಚ ಸಮಯ ತಗಲಿತು. ಕೆಲ ನಿಮಿಷ ಅವನು ತಲೆ ತಗ್ಗಿಸಿಕೊಂಡು ವಿಚಾರ ಮಾಡಿದ. ಆಮೇಲೆ ಬಾರಬಾರಾನ ಕಡೆಗೆ ನೋಡಿ ಬಹುಮಟ್ಟಿಗೆ ಸಂಯತ ಸ್ವರದಲ್ಲಿ ಮೆಲ್ಲಗೆ ಮಾತನಾಡಿದ:

"ಬಾರಬಾರಾ, ನಿನ್ನನ್ನು ಒಬ್ಬಳನ್ನೇ ಪ್ಯಾರೀಸಿನಲ್ಲಿ ಬಿಟ್ಟು, ಯಾರಿಗೂ ನಿನಗೂ ತಿಳಿಯಗೊಡದೆ ಸುದೂರ ಸ್ಥಳಕ್ಕೆ ಬಂದು ಫಸ್‌ವ್ಯೂದಲ್ಲಿ ವಾಸ ಮಾಡಿದೆ. ಅಡಿಗೆ ಮಾಡುವುದಕ್ಕಾಗಿ ಲಾರ್‌ಸೆನ್ನಳನ್ನು ಮಾತ್ರ ಸಂಗಡ ಕರೆ ತಂದೆ; ಹಾಂ, ಅಲ್ಲದೆ ನನ್ನ ಅನುಚರ ನಾತೆಯಿಂದ ಕಾನನನ್ನೂ ಕರೆದು ಕೊಂಡು ಬಂದೆ. ಅದು ಮೂರ್ಖತನದ ಕೆಲಸವಾಯಿತೆಂಬುದು ನನಗಾಗ ತಿಳಿಯಲಿಲ್ಲ. ಅವನೆಂತಹ ಲೋಭಿ, ಎಂತಹ ಅಸತ್ಯವಾದಿ, ಎಂತಹ ನೀಚ ಹತ್ಯಾಕಾರಿ ಎಂಬುದು ನನ್ನ ನಿದರ್ಶನಕ್ಕೆ ಬಂದಿರಲಿಲ್ಲ. ಗುಣವಂತನೆಂದೇ ಬಗೆದಿದ್ದೆ. ಅವನಂತಹ ಸೊನ್ನಗಾರ ಭೂಮಿಯ ಮೇಲಿಲ್ಲವೆಂದು ಮಾತ್ರ ತಿಳಿದಿದ್ದೆ. ನಿಜವಾಗಿಯೂ ಒಂದು ವಸ್ತುವಿನ ತದ್ರೂಪ ಪ್ರತಿವಸ್ತುವನ್ನು ಮಾಡುವುದರಲ್ಲಿ ಅವನು ಅದ್ವಿತೀಯ. ನಕ್ಲಿಜ್ ಏರೋಪ್ಲೇನಿನಲ್ಲಿ ಹೋಗಿ ತೆಗೆದು ಕೊಂಡು ಬಂದಿದ್ದ ನಸ್ಯದ ಡಬ್ಬಿಯಂತಹದೇ—ಅದೇ ಬಂಗಾರದ್ದಾಗಿ ಮಾರ್ಪಟ್ಟಿತೆಂಬ ಹಾಗೆ—ಬಂಗಾರದ ಡಬ್ಬಿಯನ್ನು ಅವನು ತಯಾರಿಸಿದ. ನನ್ನಲ್ಲಿದ್ದ ಬಂಗಾರವನ್ನು ಭಟ್ಟಿಯಲ್ಲಿಟ್ಟು ಗಟ್ಟಿ ಮಾಡುವ ಕೆಲಸವನ್ನು ನಕ್ಲಿಜನು ತನ್ನ ಸಹಕಾರಿಗಳೊಂದಿಗೆ ಮಾಡುತ್ತಲಿದ್ದ. ಇದಲ್ಲದೆ ನಾನು ಸ್ಯಾಪರನ ಸಹಾಯದಿಂದ ಹೇರಳ ಗಿನಿಗಳನ್ನು ಕೊಂಡಿದ್ದೆ. ಬಹು ಪೂರ್ವದಿಂದಲೂ ನಕ್ಲಿಜನೊಡನೆ ಅವನ ಮಿತ್ರತ್ವವಿದ್ದಿತು. ನಕ್ಲಿಜನ ಸಲಹೆಯಂತೆಯೇ ಅವನಿಗೆ ಈ ಕೆಲಸ ಒಪ್ಪಿಸಿದ್ದೆ. ಇಂಗ್ಲಂಡಿನ ಬೇರೆ ಬೇರೆ ಬ್ಯಾಂಕುಗಳಿಗೆ, ನನ್ನ ಸಾಧನ ಸಾಫಲ್ಯದ ಪ್ರಮಾಣವೆಂದು ಕಳಿಸಿದ ಚಿನ್ನದ ಗಟ್ಟಿಗಳನ್ನು ಸ್ಯಾಪರನೇ

ಬಯ್ಯುತ್ತಿದ್ದ. ಇವರೆಲ್ಲರೂ ನಿಷ್ಕಪಟಿಗಳೆಂದು, ನಿರ್ಲೋಭಿಗಳೆಂದು ನಾನು ನಂಬಿದ್ದೆ. ನನ್ನ ಮಹದುದ್ದೇಶದ ಬಗ್ಗೆ ಇವರ ಸಹಾನುಭೂತಿಯುಂಟೆಂದು ಭಾವಿಸಿದ್ದೆ. ಆದರೆ ಈಗ ? "

ಒಮ್ಮೆಲೆ ಅವನ ಮುಖ ಪೈಶಾಚಿಕ ಭಾವವನ್ನು ತಳೆಯಿತು. ಅವನ ಕಣ್ಣುಗಳಲ್ಲಿ ನರಕದ ಅಗ್ನಿಜ್ವಾಲೆ ಚಾಚಿತು. ಅವನ ಮೋರೆಯ ಕಡೆಗೆ ನೋಡಿ ನಕ್ಲಿಜ್ ತುಳಿಯಲ್ಪಟ್ಟ ಹಾವಿನಂತೆ ಭುಸುಗುಟ್ಟ ತೊಡಗಿದ. ಕೊನೆಗೆ ನಕ್ಲಿಜ್ ವಿಕೃತ ಸ್ವರದಲ್ಲಿ ಒದರಾಡಿದ: "ಭಲೆ ಭಂಡ, ನೀಚ; ಈಗ ಸಾಧುವಿನಂತೆ ನಟಿಸುತ್ತೀಯಲ್ಲವೆ ? ನಿನ್ನ ಕೂಡಿಟ್ಟ ಬಂಗಾರ ನಿನ್ನ ಬಹಾದೂರತನವನ್ನು ಇಡೀ ಪೃಥ್ವಿಯ ತುಂಬ ಸಪ್ರಮಾಣಗೊಳಿಸಲು ಸಾಲುವುದಿಲ್ಲವೆಂದು ಹೇಳಿ, ಬಂಗಾರ ಸಂಗ್ರಹಿಸುವಂತೆ ನನಗೆ ಸೂಚಿಸಲಿಲ್ಲವೆ ? ಆದರಂತೆ ನಾನು ಶೋಧನೆ ನಡೆಸಿ, ಐವತ್ತು ಲಕ್ಷ ಬಂಗಾರದ ಡಾಲರುಗಳು ಅಮೇರಿಕೆಯಿಂದ ಈ ದೇಶಕ್ಕೆ ಬರುತ್ತಿವೆಯೆಂಬುದನ್ನು ಅರಿತುಕೊಂಡೆ. ನಾವು ಅದನ್ನು ಅಪಹರಿಸಲೆಂದು ಹೋಗಿದ್ದೆವು. ಮರಳಿ ಬಂದು ನೋಡುತ್ತೇವೆ, ಈ ಹುಡುಗಿ ತಪ್ಪಿಸಿಕೊಂಡು ಪಲಾಯನ ಮಾಡಿದ್ದಳು. ಅದೇ ರಾತ್ರಿ ಅವಳನ್ನು ಹಿಡಿಯುವುದಕ್ಕಾಗಿ ನಾನು ಒಂದು ಕಡೆ, ನನ್ನ ಸಂಗಡಿಗರು ಒಂದು ಕಡೆ ಧಾವಿಸಿದೆವು. ತಿರುಗಿ ಮನೆಗೆ ಬಂದಾಗ ತಂದಿಟ್ಟ ಬಂಗಾರ ರಾಶಿ ಕಾಣಲಿಲ್ಲ. ಆ ಸಂಧಿಯನ್ನು ಸಾಧಿಸಿ ಅದನ್ನು ನೀನು ಬಚ್ಚಿಟ್ಟು ಬಿಟ್ಟಿದ್ದೆ."

"ಹಾಂ, ಅದನ್ನು ಬಚ್ಚಿಟ್ಟಿತ್ತು !" ಎಂದು ಉಪಹಾಸದೊಂದಿಗೆ ತಲೆ ಹಾಕುತ್ತ ಮೆಲ್ಡ್ರಮ್ ನುಡಿದ: "ಈ ಹುಡುಗಿ ಇಲ್ಲಿಗೆ ಬಂದಾಗ ಅವಳೊಂದಿಗೆ ನೀನು ನಡೆದುಕೊಂಡ ರೀತಿಯನ್ನು, ನನ್ನೊಡನೆ ವರ್ತಿಸಿದ ಪಶುರೀತಿಯನ್ನು ಕಂಡಾಗಲೇ ನಿಮ್ಮ ಸ್ವಭಾವದ ಸತ್ಯ ಪರಿಚಯ ನನಗಾಯಿತು. ಅಂದಿನಿಂದಲೇ ನನ್ನ ಗುಪ್ತ ನಿಧಿಯ ಗೊತ್ತುಗುರಿ ತಿಳಿಯದಂತೆ ಮಾಡಿದೆ. ನೀವು ಬೇಕಾದಷ್ಟು ಪ್ರಯತ್ನಿಸಿದಿರಿ; ಆದರೆ ಆ ನಿಧಿ ನಿಮ್ಮ ಕೈಗೆ ಹತ್ತಲಿಲ್ಲ. ಆದುದರಿಂದ ನೀವು ನನ್ನನ್ನು ಬಯ್ಯತೊಡಗಿದಿರಿ; ಪರಿಪರಿಯಿಂದ ಕಾಡತೊಡಗಿದಿರಿ, ಆಗ ನನಗೆ ನನ್ನ ಮೂರ್ಖತನದ ಫಲಭೋಗವನ್ನು ನಾನು ಉಣ್ಣುತ್ತಿದ್ದೇನೆಂದು ಎಲ್ಲವನ್ನೂ ಸಹಿಸಿಕೊಂಡೆ. ಮನುಷ್ಯ ಎಷ್ಟರ ಮಟ್ಟಿಗೆ ವಿಶ್ವಾಸಘಾತಕನಾಗಬಲ್ಲ, ಎಷ್ಟುಮಟ್ಟಿಗೆ ಪಿಶಾಚನಾಗಬಲ್ಲ ಎಂಬುದಕ್ಕೆ ಪ್ರತ್ಯಕ್ಷಪ್ರಮಾಣವೇ

ಅನುಭವಕ್ಕೆ ಬಂದಿತು."

ಮೆಲ್ಡ್ರಮನ ಮಾತುಗಳನ್ನು ಕೇಳಿ ನಕ್ಲಿಜ್ ಕ್ರೋಧತಪ್ತನಾಗಿ ಒಮ್ಮೆಲೆ ಕುರ್ಚಿಯಿಂದ ನೆಗೆದೆದ್ದು, "ಏ ನೀಚ ಮುದುಕ, ನಿನ್ನನ್ನು ಬಯ್ಯುವುದು ಈಗೇನು ಮುಗಿದಿದೆಯೆ? ನಿನಗೆ ಯಾತನೆ ಕೊಟ್ಟದ್ದಾದರೂ ಎಷ್ಟು? ಇನ್ನೂ ಹದಿನಾರಾಣೆ ಪೂರಾ ಬಾಕಿಯಿದೆ. ಲಾರ್‌ಸೇನಳ ಗತಿಯನ್ನು ಕಂಡೂ ನಿನಗದು ತಿಳಿದಿಲ್ಲವೆ? ಆ ಮುಂಡೆಯೆ ನಮ್ಮ ಎಲ್ಲ ಕುತ್ತಗಳಿಗೂ ಮೂಲ. ಅವಳು ಗುಪ್ತವಾಗಿ ಪ್ಯಾರಿಸಿಗೆ ಪತ್ರ ಬರೆದು ನಿನ್ನ ಮಗಳಿಗೆ ನಮ್ಮ ವಿಳಾಸ ತಿಳಿಸಿದಳು. ಅಷ್ಟೇ ಅಲ್ಲ, ನೀನು ನಮ್ಮ ಕೈಯೊಳಗೆ ಸಿಕ್ಕುಬಿದ್ದಿದ್ದೀ, ನಿನ್ನ ದುರ್ದಸೆ ಹೇಳಲಾಸಲ್ಲ ಎಂದು ಏನೇನೆಲ್ಲ ತಿಳಿಸಿ, ನಿನ್ನನ್ನು ನಮ್ಮ ಕೈಯಿಂದ ಬಿಡಿಸುವುದಕ್ಕಾಗಿ ಇಲ್ಲಿಗೆ ಬರಬೇಕೆಂದೂ ಬರೆದಿದ್ದಳು. ಎಂತಲೇ ಇವಳು ಇಲ್ಲಿಗೆ ಬಂದು ನಮ್ಮ ಮನೆಯ ಎಲ್ಲ ಸಮಾಚಾರವನ್ನೂ ಅರಿತುಕೊಂಡಳು. ನಾವು ಇವಳನ್ನು ಬಂಧನದಲ್ಲಿ ಇಟ್ಟಿದ್ದೆವು. ನಮಗೆ ಇವಳು ಯಾವ ಅಪಕಾರವನ್ನೂ ಮಾಡಲಾರದಂತೆ ವ್ಯವಸ್ಥೆ ಮಾಡಿದ್ದೆವು ಆದರೆ ಆ ಮುದಿಯಳು ಇವಳಿಗೆ ಸೆರೆಯ ಕೋಣೆಯೊಳಗಿಂದ ಹೊರಗೆ ಬರುವುದಕ್ಕೆ ಕೀಲಿಕೈ ಕೊಟ್ಟು ಸಹಾಯ ಮಾಡಿದಳು. ನಿನ್ನ ಈ ಮಗಳು ಸ್ಕಾಟ್ಲೆಂಡ್ ಯಾರ್ಡಿಗೆ ಹೋಗಿ ನಮ್ಮ ಗುಪ್ತ ಸಂಗತಿಗಳನ್ನು ಪೋಲಿಸರಿಗೆ ತಿಳಿಸಿದಳು. ನಾವು ನಿನ್ನ ಆ ಅಡಿಗೆಯವಳಿಗೆ ವಿಶ್ವಾಸಘಾತ ಮಾಡಿದ ಅಪರಾಧಕ್ಕಾಗಿ ಮರಣಶಿಕ್ಷೆ ಕೊಟ್ಟಿದ್ದೇವೆ. ಇನ್ನು—"

ಮೆಲ್ಡ್ರಮ್ ಅವನ ಮಾತನ್ನು ತಡೆದ. "ಅದನ್ನು ನಾನು ಬಲ್ಲೆ; ನೀವು ಅವಳನ್ನು ಗುಪ್ತವಾಗಿ ಕೊಲೆ ಮಾಡಿದ್ದೀರಿ. ನಿಮ್ಮ ದುರಾಲೋಚನೆ ಗೊತ್ತಾಗಿಯೆ ನಾನು ಜಾಗೃತನಾಗಿದ್ದೇನೆ." ಎಂದ.

"ಹಾಂ, ನೀನು ಜಾಗೃತನಾಗಿದ್ದೆ, ಆದಕ್ಕಾಗಿಯೇ ಇಂದು ನಿನಗೀ ಅವಸ್ಥೆ. ಸಿಕ್ಯಾಗೊ ನಗರದ ಅಸಮ ಸಾಹಸೀ ಚೋರ ಲೊಪೆಜನ ಹಣೆಬರಹ ಕೊನೆಗೇನಾಯಿತೆಂಬುದು ನಿನಗೆ ಗೊತ್ತಿರಲು ಸಾಕು. ಲೊಪೆಜನ ನೆನಪು ಇದೆ ತಾನೆ? ನ್ಯೂಯಾರ್ಕಿನಿಂದ ಸಿಕ್ಯಾಗೋಗೆ ಹೊರಟಿದ್ದ ಟ್ರೇನಿನಲ್ಲಿ ಕಳವು ಮಾಡಿದ್ದಕ್ಕಾಗಿ ಪೋಲಿಸರು ಅವನನ್ನು ಹಿಡಿದು ಜೇಲಿಗೆ ಅಟ್ಟಿದ್ದರು. ದೀರ್ಘಕಾಲದ ಸಶ್ರಮ ಶಿಕ್ಷೆಯನ್ನು ಅನುಭವಿಸಿ ಬಿಡುಗಡೆ ಹೊಂದಿದ

ಬಳಿಕ ಅವನು ಇಂಗ್ಲಂಡಿಗೆ ಓಡಿ ಬಂದ. ಲುಕಾಸ್ ಎಂದು ಹೆಸರನ್ನು ಬದಲಿಸಿಕೊಂಡು ಲಂಡನಿನಲ್ಲಿ ಒಂದು ಠಾಣ್ಯದಲ್ಲಿ ಸಾರ್ಜಂಟನಾಗಿ ಕೆಲಸಕ್ಕೆ ಸೇರಿದ. ಅವನಿಗೆ ನನ್ನ ಗುರುತಿತ್ತು. ನಾನು ಇಲ್ಲಿ ಇರುವೆನೆಂಬುದನ್ನು ಗೊತ್ತು ಹಿಡಿದು, ಪುರಸ್ಕಾರದ ಲೋಭಕ್ಕೆ ಬಿದ್ದು, ಕಾನ್ಸ್‌ಟೆಬಲ್ ಹಜೆಸನ ಜೊತೆ ಸೇರಿ ನನ್ನನ್ನು ಹಿಡಿಯಲು ಪ್ರಯತ್ನಿಸಿದ. ಸಾರ್ಜಂಟ್ ಪ್ರಿಂಗಲ್ ಸ್ಕಾಟ್ಲೆಂಡ್ ಯಾರ್ಡಿನಿಂದ ನಮ್ಮ ನಿವಾಸದ ಮೇಲೆ ಕಣ್ಣಿಡಲು ಬಂದರು. ಆಗ ಅವರು ಅವರಿಗೆ ಸಹಾಯ ಮಾಡುವರೆಂಬ ಭಯದಿಂದ ಅವರಿಬ್ಬರನ್ನೂ ದೂರಗೊಳಿಸುವ ಏರ್ಪಾಡು ಮಾಡಬೇಕಾಯಿತು. ಛದ್ಮವೇಷಧಾರಿಯಾದ ಲೊಪೆಜನನ್ನು ನಾಯಿಯನ್ನು ಕೊಲ್ಲುವಂತೆ ಗುಂಡಿಕ್ಕಿ ಕೊಂದೆ. ಇದು ನಿನಗೆ ಗೊತ್ತಿರಬೇಕೆಂದು ನನಗೆನಿಸುತ್ತದೆ. ಲೊಪೆಜ್ ಪೋಲಿಸ್ ನೋಕರಿ ಬಿಟ್ಟು ಬೇರೆ ಕಡೆ ವಾಸವಾಗಿದ್ದ. ಇನ್ನು ಅವನೊಡನೆ ಪೋಲಿಸರ ಸಂಬಂಧವಿಲ್ಲವೆಂದು ಎಲ್ಲರ ತಿಳಿವಳಿಕೆಯಾಗಿತ್ತು. ಆದರೆ ಅದು ಅವನ ಕಪಟತಂತ್ರ ಮಾತ್ರ. ನನ್ನನ್ನು ಹಿಡಿಯುವುದಕ್ಕಾಗಿ ಅವನು ಹಾಗೆ ನಾಟಕ ಹೂಡಿದ್ದ. ಈ ಉಪಾಯದಿಂದ ನನ್ನಕಣ್ಣಲ್ಲಿ ಮಣ್ಣೆರಚುವೆನೆಂದು ಅವನು ಎಣಿಕೆಹಾಕಿದ್ದ. ಆದರೆ ನಾನು ಅವನ ಹೊಂಚನ್ನು ತಿಳಿದು ಎಚ್ಚರದಿಂದ ಇದ್ದೆ. ಕೊನೆಗೆ ಅವನೇ ನನ್ನ ಪಿಸ್ತೂಲಿನ ಗುಂಡಿಗೆ ಈಡಾಗಬೇಕಾಯಿತು." ಎಂದು ನಕ್ಲಿಜ್ ವಿವರಿಸಿದ.

ಅದಕ್ಕೆ ಮೆಲ್ಡ್ರಮ್ ಅವಿಚಲಿತ ಸ್ವರದಿಂದ ಉತ್ತರವಿತ್ತ: "ಹಾಂ, ಅದು ನನಗೆ ಗೊತ್ತಿದೆ. ನೀನು ಅವರನ್ನು ಕೊಂದು ನಿನ್ನ ಸಂಕಲ್ಪದ ಮಾರ್ಗವನ್ನು ಮತ್ತಷ್ಟು ದುರ್ಗಮ ಮಾಡಿಕೊಂಡೆ ನಾನು ನನ್ನ ಸುವರ್ಣ ರಾಶಿಯನ್ನು ಎಲ್ಲಿ ಬಚ್ಚಿಟ್ಟಿರುವೆನೆಂಬುದು ನಿನ್ನ ಅನುಮಾನಕ್ಕೆ ನಿಲುಕದ ಮಾತಾಗಿದೆ."

ಕಿಟ್ ಏರೋಸ್ಮಿಥ್ ಹಠಾತ್ ತಲೆ ಎತ್ತಿ ಅವನ ಮುಖದ ಕಡೆಗೆ ನೋಡಿದ. ಕಾನ್ಸಟೆಬಲ್ ಹಜೆಸನೂ ನರಪಿಶಾಚನಾದ ನಕ್ಲಿಜನ ಕೈಯಲ್ಲಿ ಪ್ರಾಣ ನೀಗಿದ್ದಾನೆ ಎಂದು ಅವನಿಗೆನಿಸಿತು. ಅವನ ಹೆಣ ಆಗ ಆ ಸ್ಥಳದಲ್ಲಿ ಪೋಲಿಸರಿಗೆ ಸಿಕ್ಕದಿದ್ದರೂ ಕೆಲ ದಿನಗಳ ತರುವಾಯ ಆ ಪಾತಾಳ ಗೃಹದ ಅದೂರದಲ್ಲಿದ್ದ ಭೂಗರ್ಭದ ಗ್ರೇನಿನಲ್ಲಿ ಅದು ಸಿಕ್ಕಿತು. ಅವನನ್ನು ಹಣೆಗೆ

ಗುಂಡು ಹೊಡೆದು ಸಾಯಿಸಲಾಗಿತ್ತು.

ಮೆಲ್ಡ್ರಮನ ಮಾತನ್ನು ಕೇಳಿ ನಕ್ಲಿಜನ ಅನುಚರರು ಕ್ರೋಧದಿಂದ ಕರ್ಕಶ ಸ್ವರದಲ್ಲಿ, "ಒಳ್ಳೇದು, ಅದನ್ನು ನಾವು ನೋಡಿಕೊಳ್ಳುತ್ತೇವೆ" ಎಂದು ಒಮ್ಮೆಲೆ ನುಡಿದರು.

ಅವರ ಸಂಯುಕ್ತ ಕಂಠದ ಉಚ್ಚ ಕರ್ಕಶ ಧ್ವನಿಯು ಆ ನೆಲಮನೆಯ ವಾಯುಸ್ತರದಲ್ಲಿ ಪ್ರತಿಧ್ವನಿತವಾಗಿ ಅಡಗುವ ಮೊದಲೇ, ನಕ್ಲಿಜನ ಸಂಜ್ಞೆ ಯಂತೆ ಆ ಇಬ್ಬರು ಅನುಚರರು ತಮ್ಮ ಪಿಸ್ತೂಲುಗಳನ್ನು ತೆಗೆದು ಹಿಡಿದರು. ಪ್ಯಾರೆಟ್ ಮತ್ತು ಏರೋಸ್ಮಿಥ್‌ರು ರಜ್ಜುಬದ್ಧರಾಗಿ ಬಿದ್ದಲ್ಲಿಂದ ಎದ್ದುನಿಲ್ಲಲು ಅಸಮರ್ಥರಾಗಿದ್ದರು. ಅವರ ಕೈಯ ಪಿಸ್ತೂಲುಗಳು ಅಲ್ಲಿಂದ ಸ್ವಲ್ಪ ಅಂತರ ದಲ್ಲಿಯೇ ಜೋಡಾಗಿ ಉದ್ಯತವಾದವು.

ಮರುಕ್ಷಣದಲ್ಲಿಯೇ ದುಡುಮ್ ದುಃಮ್ ಎಂಬ ಶಬ್ದದಿಂದ ಆ ಕೋಣೆ ಪ್ರತಿಧ್ವನಿತವಾಯಿತು. ಮೆಲ್ಡ್ರಮ್ ತಲೆಯೆತ್ತಿ ಚಕಿತದೃಷ್ಟಿಯಿಂದ ಬಾಗಿಲ ಕಡೆ ನೋಡಿದ. ಆಮೇಲೆ ಅವನ ಅವಸನ್ನ ದೇಹ ರಜ್ಜುಬದ್ಧ ಅವಸ್ಥೆಯ ಲ್ಲಿಯೇ ಕುರ್ಚಿಯ ಮೇಲೆ ಸಿಥಿಲವಾಗಿ ಬಿದ್ದಿತು. ನಕ್ಲಿಜ್ ತತ್‌ಕ್ಷಣವೇ ಮೈಮುರಿದು ತನ್ನ ಕುರ್ಚಿಯಲ್ಲಿ ನೆಟ್ಟಗೆ ನಿಮಿರಿ ಕುಳಿತ. ಸುಲ್ಜ್ ಆಕ್ಷಣವೇ ಅಸ್ಪಷ್ಟವಾದ ಶಬ್ದ ಮಾಡಿ ಪಕ್ಕದ ಸುರಂಗವನ್ನು ಪ್ರವೇಶಿಸಿ ಕಾಣೆಯಾದ. ಮೂರು ನಾಲ್ಕು ನಿಮಿಷಗಳ ಮೇಲೆ ಅವನು ತಿರುಗಿ ಬಂದಾಗ ಮುಖ ಬಣ್ಣ ಗೆಟ್ಟಿತ್ತು. ಅವನು ಭಯದಿಂದ ವಿಹ್ವಲನಾದಂತಿತ್ತು. ಜಡಿತಸ್ವರದಲ್ಲಿ ಅವನು ಹೇಳಿದ: "ಲೋಹದ ಬಾಗಿಲ ಮೇಲೆ ಸುತ್ತಿಗೆಯ ಏಟು ಬೀಳುತ್ತಿವೆ. ಅವರು ಬಾಗಿಲನ್ನೊಡೆದು ಒಳಗೆ ಬರಲು ಪ್ರಯತ್ನಿಸುತ್ತಿದ್ದಾರೆಂದು ತೋರುತ್ತದೆ."

ಸುಲ್ಜನ ಮಾತನ್ನು ಕೇಳಿ ನಕ್ಲಿಜ್ ಕ್ರೋಧಭರದಿಂದ ಪ್ಯಾರೆಟರ ಕಡೆಗೆ ನೋಡಿದ. ಅವನ ಕಣ್ಣುಗಳಿಂದ ಕೆಂಡವೇ ಸುರಿಯುತ್ತಿರುವಂತೆ ಕಂಡಿತು. ಅವನು ಹೂಂಕರಿಸಿ ವಿಕೃತ ಸ್ವರದಿಂದ, "ಪೋಲಿಸರಲ್ಲವೆ? ಸರ್ದಾರ ಪಹರೆ ಯವನು ಒಬ್ಬನೇ ಇಲ್ಲಿಗೆ ಬರುವ ಸಾಹಸ ಮಾಡಲಾರ, ಇದು ನನಗೆ ಗೊತ್ತು. ಈ ವಿಷಯ ಮೊದಲೇ ಯೋಚಿಸಿ ನೋಡದಿದ್ದದ್ದು ಉಚಿತವಾಗ ಲಿಲ್ಲ." ಎಂದು ನುಡಿದ.

ಆಮೇಲೆ ಅವನ ವಿರೂಪ ಮುಖದಲ್ಲಿ ಪೈಶಾಚಿಕ ನಗೆ ತಾಂಡವವಾಡಿತು. "ಆದರೆ, ನಮಗೇನೂ ಅಂಥ ದುಶ್ಚಿಂತೆಗೆ ಕಾರಣವಿಲ್ಲವೆಂದು ನನಗೆನಿಸುತ್ತದೆ. ಅವರಿಗೂ ನಮಗೂ ನಡುವಿನ ಅಂತರ ಎಷ್ಟೇ ಅಲ್ಪವಿದ್ದರೂ ಅದು ನಾಲ್ಕು ಇಂಚು ದಪ್ಪವಾದ ಲೋಹದ ಹಲಗೆ. ಡಿನಾಮೈಟದ ಸಹಾಯವಿಲ್ಲದೆ ಅದನ್ನು ತೆಗೆಯುವುದು ಅವರಿಂದಾಗದ ಮಾತು. ಆದರೆ ಸ್ಥಳ ಶೋಧನೆಗೆ ಹೋಗುವಾಗ ಪೋಲಿಸರು ಎಲ್ಲಿ ಡಿನಾಮೈಟ್ ಒಯ್ಯುತ್ತಿರುವುದಿಲ್ಲ. ಆದಲ್ಲದೆ ಅವರು ವರುಷಗಟ್ಟಲೆ ಹೆಣಗಿದರೂ ಹಲಗೆಯನ್ನೊಡೆದು ಒಳಗೆ ಬರುವೆನೆಂದರೆ ಸಾಧ್ಯವಿಲ್ಲ. ನಮಗೆ ಇಲ್ಲಿ ಎಷ್ಟು ಸಮಯದ ಅಗತ್ಯವಿದೆಯೋ ಅಷ್ಟಕ್ಕಂತೂ ಕೊರತೆಯಾಗುವುದಿಲ್ಲ. ನಾವು ಇಲ್ಲಿಯ ಎಲ್ಲ ಕೆಲಸವನ್ನು ಮುಗಿಸಿಕೊಂಡು ಸ್ಥಾನಾಂತರಕ್ಕೆ ಯಥೇಚ್ಛವಾಗಿ ಹೊರಟು ಹೋಗಬಹುದು. ಅವರಿನ್ನೂ ಹೀಗೆಯೇ ಬಾಗಿಲನ್ನು ಬಡಿದುಕೊಳ್ಳುತ್ತಲೇ ಇರುವರು. ಏನೆನ್ನುತ್ತೀ ? ನನ್ನ ಮಾತು ನಿಜವೋ ಅಲ್ಲವೋ ? " ಎಂದು ಅವನು ನುಡಿದ.

ಪ್ಯಾರೆಟ್, ಏರೋಸ್ಮಿಥ್, ಬಾರಬಾರಾ, ಅವಸನ್ನನಾಗಿ ಬಿದ್ದ ಮೆಲ್ಡ್ರಮ್ ಕೂಡ, ತಮ್ಮ ಸಂಕಟ ಘನೀಭೂತವಾಗುತ್ತ ಬಂದಿದೆ ಎಂದು ತಿಳಿದುಕೊಂಡರು. ಪೋಲಿಸರಿಗೆ ತಾವಿಲ್ಲಿರುವುದು ಗೊತ್ತಾಗಿ, ಪಡೆಯೊಡನೆ ಬಂದು ತಮ್ಮನ್ನುಳಿಸಿಕೊಳ್ಳಲು ಪ್ರಯತ್ನಿಸಿದರೂ ಅವರ ಪ್ರಯತ್ನ ಸಫಲವಾಗುವ ಸಂಭವ ತೀರ ಕಡಿಮೆ. ಏಕೆಂದರೆ ನಕ್ಲಿಜ್ ಹೇಳಿದಂತೆ ದುರ್ಲಂಘ್ಯವಾದ ಲೋಹದ ಹಲಗೆ ಡಿನಾಮೈಟಿನ ಹೊರತು ದಾರಿ ಕೊಡುವುದು ಅಸಂಭವ. ವಿಶೇಷವಾಗಿ ನಕ್ಲಿಜ್ ಕನಿಕರಗೊಂಡು ಯಾರ ಪ್ರಾಣವನ್ನಾದರೂ ಉಳಿಸಿಯಾನೆಂಬುದೂ ಹೆಚ್ಚಿನ ಅಸಂಭವ. ಮೆಲ್ಡ್ರಮ್ ತನ್ನ ಹೊನ್ನಿನ ರಾಶಿಯನ್ನೆಲ್ಲ ಎಲ್ಲಿಯೋ ಬಚ್ಚಿಟ್ಟಿದ್ದರಿಂದ, ಎಷ್ಟು ಪ್ರಯತ್ನಪಟ್ಟರೂ ನಕ್ಲಿಜನಿಗೆ ಅದು ಸಿಕ್ಕದಿದ್ದುದರಿಂದ, ಎಲ್ಲರಿಗಿಂತ ಮೆಲ್ಡ್ರಮನ ಮೇಲೆಯೇ ಅವನ ಆಕ್ರೋಶ ಅಧಿಕವಾಗಿದೆ ಎಂದು ಏರೋಸ್ಮಿಥ್ ತಿಳಿದುಕೊಂಡ; ಅರ್ಥಾತ್ ನಕ್ಲಿಜ್ ಎಲ್ಲಕ್ಕೂ ಮೊದಲು ಮೆಲ್ಡ್ರಮನನ್ನು ಕೊಲೆ ಮಾಡುವನೆಂಬಲ್ಲಿ ಅವನಿಗೆ ಸಂದೇಹವಿರಲಿಲ್ಲ. ಆದರೆ ಅವನನ್ನು ಹೇಗೆ ಕೊಲ್ಲುವನೆಂಬುದು ಅವನ ಊಹೆಯನ್ನು ಮೀರಿತ್ತು. ಆದರೂ, ಮೆಲ್ಡ್ರಮನ ಪದತಲದಲ್ಲಿ ಯಾವುದಾದರೂ ಗುಪ್ತ ಗಹ್ವರದ

ಬಾಗಿಲು ಇರಬೇಕೆಂದು ಏರೋಸ್ಮಿಥ್‌ನಿಗೆ ಎನಿಸಿತು. ನಕ್ಲಿಜ್ ಏನಾದರೂ ಕೌಶಲದಿಂದ ಆ ಕದವನ್ನು ತೆರೆದು ಬಿಟ್ಟಕೂಡಲೆ ಮೆಲ್ಡ್ರುಮ್ ತನ್ನ ಕೆಳಗಿದ್ದ ಆಳವಾದ ಗಹ್ವರದಲ್ಲಿ ಬಿದ್ದು ಸಾಯುವನು, ಎಂದು ಅವನಿಗೆ ಎನಿಸಿತು. ಬೇಕಾದರೆ ನಕ್ಲಿಜ್ ಮೆಲ್ಡ್ರುಮನನ್ನು ಗುಂಡಿಕ್ಕಿ ಕೊಲ್ಲಬಹುದಿತ್ತು, ನಿಜ. ಆದರೆ ಅಷ್ಟು ಸಹಜವಾಗಿ ಅವನನ್ನು ಸಾಯಿಸುವುದು, ತನ್ನ ಮನಃಪೂತವಾಗಿ ಯಾತನೆ ಕೊಟ್ಟು ಆಲ್ಹಾದ ಪಡದೆ ಅವನ ಜೀವನವನ್ನು ಕೊನೆಗಾಣಿಸುವುದು ನಕ್ಲಿಜನಿಗೆ ಸ್ವಾಭಾವಿಕವಲ್ಲವೆಂದು ಏರೋಸ್ಮಿಥ್‌ನ ಗ್ರಹಿಕೆ. ಅವನು ಎಂತಹ ಪಿಶಾಚ ವೃತ್ತಿಯವನೆಂಬುದು ಅವನಿಗೆ ತಿಳಿಯದ ವಿಷಯವಲ್ಲ. ಆದರೆ ಆ ಗುಪ್ತ ದ್ವಾರವನ್ನು ಯಾರು ತೆರೆಯುವರೆಂಬುದು ಅವನ ಕಲ್ಪನೆಗೆ ಮೀರಿದುದಾಗಿತ್ತು.

ಏರೋಸ್ಮಿಥ್‌ನ ಈ ಕಲ್ಪನೆಯ ಪರಿಷ್ಕಾರವಾಗಲು ಹೆಚ್ಚು ವೇಳೆ ಹತ್ತಲಿಲ್ಲ. ನಕ್ಲಿಜ್ ದೊಣಗ ಸುಲ್ಜ್‌ನ ಮೋರೆ ನೋಡಿ, ಒಂದು ಕಣ್ಣನ್ನು ಮುಚ್ಚಿ ಇನ್ನೊಂದು ಕಣ್ಣನ್ನು ಸಂಕುಚಿತಗೊಳಿಸಿ ಏನೋ ಸನ್ನೆ ಮಾಡಿದ. ಏರೋಸ್ಮಿಥ್‌ನ ಹೊರತು ಅದು ಯಾರ ಗಮನಕ್ಕೂ ಬರಲಿಲ್ಲ. ಸುಲ್ಜ್ ಆ ಸಂಜ್ಞೆ ತಿಳಿದುಕೊಂಡು, ಅರೆನಿಮಿಷ ಮಾತ್ರ ಮೂಗಿನ ತುದಿಯಲ್ಲಿ ಬೆರಳಿಟ್ಟು, ಬಳಿಕ ಯಾವ ಕಡೆಗೂ ನೋಡದೆ ಪರದೆಯ ಹಿಂದುಗಡೆಯಲ್ಲಿ ಅದೃಶ್ಯನಾದ. ಆದರೆ ಮುಂದೆ ಒಂದೇ ನಿಮಿಷದಲ್ಲಿಯೇ ಅವನು ಬಿಳಿಯ ಪೊರ್ಸಲೇನಿನ ಎರಡು ತುಂಡುಗಳನ್ನು ತೆಗೆದುಕೊಂಡು ಬಂದನು. ಎರಡು ತುಂಡುಗಳೂ ಐದಾರು ಇಂಚು ಉದ್ದವಿದ್ದವು. ಅವುಗಳನ್ನು ನಿಃಶಬ್ದವಾಗಿ ನಕ್ಲಿಜ್‌ನಿಗೆ ಕೊಟ್ಟನು.

ಆ ಪೊರ್ಸಲೇನಿನ ತುಂಡುಗಳನ್ನು ನಕ್ಲಿಜ್ ತಿರುಗಿಸಿ ತಿರುಗಿಸಿ ನೋಡಿದನು. ಆಗ ಅವನ ಮೊಗದಲ್ಲಿ ಆನಂದವು ಉದ್ಭಾಸಿತವಾಯಿತು. ಅವೆರಡು ತುಂಡುಗಳಿಂದ ತಾನು ಎಂತಹ ಭೀಷಣ ಕಾರ್ಯವನ್ನು ಎಸಗುವೆನೆಂಬುದನ್ನು ನೆನೆದು ಪೈಶಾಚಿಕ ಆನಂದದಿಂದ ಅವನ ಹೃದಯಪೂರ್ಣವಾಯಿತು. ಬಿಳಿ ತೊಗಲಿನ ಮನುಷ್ಯಾಕಾರದೊಳಗೆ ಇಂತಹ ಪಶುತ್ವಕ್ಕಿಂತಲೂ ಕ್ರೂರವಾದ ಪ್ರವೃತ್ತಿ ಇರಬಹುದೆಂಬುದು ಏರೋಸ್ಮಿಥ್‌ನಿಗೆ ಕಲ್ಪನಾತೀತವಾಗಿತ್ತು. ನಕ್ಲಿಜ್ ಪೊರ್ಸಲೇನಿನ ಆ ತುಂಡುಗಳನ್ನು ಕೈಯಲ್ಲಿ ಹಿಡಿದುಕೊಂಡು ಕುರ್ಚಿಯಿಂದ

ಎದ್ದು ನಿಂತನು. ಕ್ಷಣಹೊತ್ತು ಪೈಶಾಚಿಕ ದೃಷ್ಟಿಯಿಂದ ಮೆಲ್ಮ್ರಮನ ಮೋರೆಯನ್ನು ನೋಡಿ, ಅವನ ಕುರ್ಚಿಯ ಬಳಿ ಇದ್ದ ಕಟ್ಟಿಗೆ ಮಂಚದ ಹತ್ತಿರ ಹೋದನು.

ಆ ನರರಕ್ಕಸನ ಮನೋಭಾವ ಏರೋಸ್ಮಿಥ್‌ನಿಗೆ ತುಸುತುಸು ಹೊಳೆದಂತಾಯಿತು. ಅವನು ಮಂಚವನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದ. ಆದರ ಮೇಲ್ ಹಲಗೆ ಅಖಂಡವಾದುದೆಂಬಂತೆ ತೋರಿದರೂ ಎರಡು ಹಲಗೆಗಳನ್ನು ಜೋಡಿಸಿದ್ದೆಂದು ಅವನಿಗೆ ತಿಳಿಯಿತು. ಎರಡು ಹಲಗೆಗಳು ಜೋಡಿಕೆಯ ಕುರುಹು ತೋರದಂತೆ ಹೊಂದಿಸಲಾಗಿದ್ದವು. ನಕ್ಲಿಜ್ ನಿಧಾನವಾಗಿ ಎರಡೂ ಹಲಗೆಗಳನ್ನು ಅತ್ತಿತ್ತ ಸರಿಸಿದನು. ಆಗ ಆ ಮಂಚ ಕಟ್ಟಿಗೆಯಿಂದ ಮಾಡಿದ ಹೌದಿನಲ್ಲಿ ಪರಿಣಮಿಸಿತು. ಆ ಹೌದು ಪೊರ್ಸಲೇನಿನ ಆವರಣದಿಂದ ಆವೃತವಾಗಿತ್ತು.

ಆಮೇಲೆ ಸುಲ್ಜ್ ಕಲ್ಲಿನಿಂದ ಮಾಡಿದ ಒಂದು ಸಣ್ಣ ಪಾತ್ರೆಯನ್ನೂ ಪೊರ್ಸಲೇನಿನಿಂದ ಮಾಡಿದ ಒಂದು 'ಫನೇಲ' ನ್ನೂ ನಕ್ಲಿಜನ ಕೈಯಲ್ಲಿ ಕೊಟ್ಟು, "ಎಲ್ಲವೂ ಅಣಿಯಾಗಿವೆ, ಇನ್ನು ಇವೆರಡನ್ನೂ ತಕ್ಕೊಳ್ಳಿರಿ. ಇದರಲ್ಲಿ ಡೋಜ್ ಸರಿಯಾಗಿದೆ." ಎಂದ. ಅವನ ಮುಖವೂ ಉಲ್ಲಸಿತವಾಯಿತು. ಎಂಥ ಭಯಂಕರ ಹಾಸವದು !

ನಕ್ಲಿಜ್ ಮಾತನಾಡಲಿಲ್ಲ. ಜೋಕೆಯಿಂದ ಹೌದಿನ ಪೊರ್ಸಲೇನಿನ ಆವರಣದ ಪಕ್ಕದಲ್ಲಿದ್ದ ಒಂದು ಮುಖನಳಿಕೆಯ ಮೇಲಿನ ಮುಚ್ಚಳವನ್ನು ತೆರೆದ. ಆ ಮುಖದಲ್ಲಿ 'ಫನೇಲ' ನ್ನು ಇರಿಸಿ ಕಲ್ಲಿನ ಭಾಂಡದಲ್ಲಿದ್ದ ತರಲ ಪದಾರ್ಥವನ್ನು ಎಲ್ಲವನ್ನೂ ಹೌದಿನಲ್ಲಿ ಸುರುವಿದ. ಕೂಡಲೇ ಫನೇಲಿನೊಳಗಿಂದ ದುಸ್ಸಹವಾದ ತೀವ್ರ ಗಂಧವು ಹೊರಟಿತು.

"ದುಡುಮ್ ದುಡುಮ್ ದುಮ್ !"

ಹೊರಗಿನ ಶಬ್ದದಿಂದ ಆ ಕೋಣೆ ಪ್ರತಿಧ್ವನಿತವಾಗತೊಡಗಿತು. ಬಾಗಿಲ ಮೇಲೆ ದೊಡ್ಡ ದೊಡ್ಡ ಹಾರಿ-ಸುತ್ತಿಗೆಗಳ ಏಟುಗಳು ಕ್ರಮಶಃ ಹೆಚ್ಚಾಗುತ್ತಲಿದ್ದವು; ಅವುಗಳ ಸದ್ದೂ ಹೆಚ್ಚು ಹೆಚ್ಚು ಭಯಂಕರವಾಗುತ್ತಲಿತ್ತು. ನಕ್ಲಿಜ್ ಭಾಂಡದಲ್ಲಿಯ ದ್ರವವನ್ನು ಹೌದಿನಲ್ಲಿ ಸುರಿದು ತನ್ನ ಕುರ್ಚಿಯಲ್ಲಿ ಕುಳಿತು

ಕೊಂಡು ಉತ್ಸಾಹದಿಂದ ಚುರುಟನ್ನು ಸೇದತೊಡಗಿದ. ಹೊರಗಿನ ಶಬ್ದ ದಿಂದ ಅವನು ಬಿಂದುಮಾತ್ರವೂ ವ್ಯಸ್ತನಾಗಲಿಲ್ಲ, ವಿವ್ರತನಾಗಲಿಲ್ಲ. "ಬಾಗಿಲಲ್ಲಿ ಪೋಲಿಸರೇ ಬಂದು ಧಾಂದಲೆ ಹಾಕುತ್ತಿದ್ದಾರೆಂದು ಕಾಣುತ್ತದೆ. ಬಾಗಿಲು ತೆರೆಯುವುದಕ್ಕಾಗಿ ಬಹುಶಃ ಎಂಥದೋ ದೊಡ್ಡ ಗದಾದಂಡ ತಂದಂತೆ ಕಾಣುತ್ತದೆ. ಆದರೆ ಅವರು ವ್ಯರ್ಥವಾಗಿ ದಣಿದುಕೊಳ್ಳುತ್ತಿದ್ದಾರೆ. ಡಿನಾಮೈಟಿನ ಹೊರತು ಬಾಗಿಲು ತೆಗೆಯುವುದು ಸಾಧ್ಯವೇ ಅಲ್ಲ." ಎಂದ.

ನಕ್ಲಿಜನ ಮಾತಿನಿಂದ ಸ್ಥೂಲದೇಹಿ ಸುಲ್ಜ್‌ನ ಮನಸ್ಸಿಗೆ ಸಮಾಧಾನವೆನಿಸಲಿಲ್ಲ. "ಶತ್ರುಗಳಿಗೂ ನಮಗೂ ನಡುವೆ ದಪ್ಪವಾದ ಹಲಗೆಯಿದೆ. ಅವರು ಅದನ್ನು ತಳ್ಳಿ ಅಥವಾ ಒಡೆದು ಒಳನುಗ್ಗಿ ನಮ್ಮನ್ನು ಆಕ್ರಮಿಸಲಾರರೆಂದು ನಂಬಿ ನೀವು ಇಲ್ಲಿ ಕುಳಿತಿರುವಿರಿ, ಅದಕ್ಕೆ ನನ್ನದೇನೂ ಅಭ್ಯಂತರವಿಲ್ಲ. ಆದರೆ ನನಗಾಗಲಿ ಕಾನನಿಗಾಗಲಿ ಹೀಗೆ ನಿಶ್ಚಿಂತರಾಗಿರಲು ಮನಸೊಪ್ಪದು. ನಾವು ಮೊಟ್ಟಮೊದಲು ಸುರಕ್ಷಿತವಾಗಲು ಯತ್ನಿಸುತ್ತೇವೆ. ನಾವು ಯಾವ ಆಶೆಯಿಂದ ಇಷ್ಟೆಲ್ಲ ಕಷ್ಟ ಸಹಿಸಿ, ಜೀವವನ್ನು ಕುತ್ತದಲ್ಲಿ ನೂಕಲು ಸಿದ್ಧರಾಗಿದ್ದೇವೋ ಆ ಆಶೆ ಪೂರ್ಣವಾಗುವ ಸಂಭವವೆಲ್ಲಿದೆ? ಆ ಸುವರ್ಣನಿಧಿಯನ್ನು ಈ ಮನೆಯಲ್ಲಿಯೇ ಬಚ್ಚಿಟ್ಟಿಲ್ಲ, ಮತ್ತೆಲ್ಲಿಯೋ ಬೇರೆ ಕಡೆ ಸಾಗಿಸಲಾಗಿದೆ ಎಂದೇ ನನಗೆ ಖಂಡಿತ ಎನಿಸುತ್ತದೆ. ಪೋಲಿಸರು ಚತುರ್ದಿಕ್ಕುಗಳಲ್ಲಿಯೂ ಶೋಧನೆ ಆರಂಭಿಸಿದ್ದಾರೆ. ಅದು ಅವರಿಗೇ ಎಲ್ಲಿಯಾದರೂ ಸಿಕ್ಕಬಹುದು. ಆದರೆ ನಾವು ಆ ಬಂಗಾರವನ್ನು ಹುಡುಕಿ ತೆಗೆಯಲು ಕೊನೆಯ ಪ್ರಯತ್ನ ಮಾಡಿ ನೋಡುತ್ತೇವೆ. ಒಂದು ವೇಳೆ ಅದೆಲ್ಲಿಯಾದರೂ ದೊರೆತರೆ, ಅದರಲ್ಲಿ ನಮಗೆ ಎಷ್ಟು ಒಯ್ಯಲು ಸಾಧ್ಯವೋ ಅಷ್ಟನ್ನು ಒಯ್ಯುವಾ. ಆದರೆ ಅದಕ್ಕೂ ಮೊದಲು ಮೆಲ್ಡ್ರುಮ್ ಕುನ್ನಿಯನ್ನು ಯಾವ ರೀತಿ ಕೊನೆಗಾಣಿಸಬೇಕೆನ್ನುವಿರೋ ಆ ರೀತಿ ಮಾಡಿರಿ. ಇನ್ನು ಹೆಚ್ಚು ಸಮಯ ಕಳೆಯುವುದು ನಮಗೆ ಅಸಹ್ಯವಾಗಿದೆ. ಪೋಲಿಸರು ಹಠಾತ್ ಏನು ಮಾಡಿಬಿಡುವರೋ ತಿಳಿಯುವುದು ಸಾಧ್ಯವಿಲ್ಲ. ಹೊತ್ತು ಸಿಕ್ಕಿರುವಾಗಲೇ ನಾವು ಪಾರಾಗಿ ಹೋಗುವುದು ಉಚಿತ. ಆದರೂ ಬಂಗಾರವನ್ನು ಹುಡುಕುವುದರಲ್ಲಿ ಇನ್ನೂ ಸ್ವಲ್ಪ ಸಮಯ, ನಾವು ಕಳೆಯಬೇಕಾಗುವುದು."

ನಕ್ಲಿಜನ ಮನಸ್ಸು ಕೂಡ ಸಂಪೂರ್ಣ ನಿಶ್ಚಿಂತವಾಗಿತ್ತೆಂದು ಹೇಳಲಾ

ಗುವುದಿಲ್ಲ. ಸುಲ್ಜನ ಮಾತಿಗೆ ಆವನು ಪ್ರತಿವಾದ ಎತ್ತಲಿಲ್ಲ. ಅದೇಕೆ, ಅವನ ಯೋಚನೆಯನ್ನು ಸಮರ್ಥಿಸಿಯೇ ನಕ್ಲಿಜ್ ಅವನಿಗೆ ಕಣ್ಣುಸನ್ನೆಯಿಂದ ಏನೋ ಸೂಚಿಸಿದ. ಆಮೇರೆಗೆ ಸುಲ್ಜ ಮತ್ತೆ ಆ ಪರದೆಯ ಹಿಂದೆ ಅದೃಶ್ಯ ನಾದ. ಆದರೆ ಒಂದು ನಿಮಿಷದಲ್ಲಿ ಅವನು ಮರಳಿ ಬಂದು ನಕ್ಲಿಜನೆದುರಿಗೆ ನಿಂತ. ಅವನ ವಿಲಕ್ಷಣವಾದ ಮುಖಭಂಗಿಯನ್ನು ನೋಡಿದಾಗ ಏರೋ ಸ್ಮಿಥ್‌ನ ಮನಸು ನಾನಾ ಚಿಂತೆಗಳಿಂದ ವಿಕ್ಷುಬ್ಧವಾಯಿತು.

ನಕ್ಲಿಜ್ ಈಗ ಕುರ್ಚಿಯಿಂದೆದ್ದು ಮತ್ತೆ ಕಟ್ಟಿಗೆ ಮಂಚದ ಬಳಿ ಸಾರಿದ. ಪೊರ್ಸಿಲೇನಿನ ಹೌದಿನ ಪಕ್ಕದಲ್ಲಿದ್ದ ಒಂದು ಮುಖ ನಳಿಕೆಯ ಮುಚ್ಚಳವನ್ನು ತೆರೆದು ತನ್ನ ಕುರ್ಚಿಯಲ್ಲಿ ಕುಳತುಕೊಂಡ. ಆಮೇಲೆ ಆವನು ಮೆಲ್ಡ್ರುಮನ ಮುಖದ ಕಡೆ ತನ್ನ ಉಗ್ರ ದೃಷ್ಟಿಯನ್ನೆಸೆದು, ಗಂಭೀರ ಸ್ವರದಲ್ಲಿ ಹೇಳತೊಡ ಗಿದ: "ಅಂದು ರಾತ್ರಿ ತಪ್ಪಿಸಿಕೊಂಡು ಓಡಿಹೋಗಿದ್ದ ನಿನ್ನ ಮಗಳನ್ನು ಹುಡು ಕುವುದಕ್ಕಾಗಿ ನಾನು, ನನ್ನ ಸಂಗಡಿಗರು ಮನೆಬಿಟ್ಟು ಹೋಗಿದ್ದಾಗ, ಯಾರೂ ಇಲ್ಲದ ಸಮಯದಲ್ಲಿ ನೀನು ಬಂಗಾರವನ್ನೆಲ್ಲ ಎಲ್ಲಿಯೋ ಗುಪ್ತಸ್ಥಳದಲ್ಲಿ ಅಡ ಗಿಸಿ ಬಿಟ್ಟಿದ್ದೀ, ಎಲ್ಲೆಂಬುದು ನಿನ್ನ ಹೊರತು ಯಾರಿಗೂ ಗೊತ್ತಿಲ್ಲ. ಅದನ್ನು ಎಲ್ಲಿ ಬಚ್ಚಿಟ್ಟಿರುವೆ ಎಂಬುದನ್ನು ಹೇಳುವುದಕ್ಕಾಗಿ ನಿನಗೆ ಎಷ್ಟು ನಿಮಿಷ ಸಮಯ ಕೊಡುವುದು ಸಾಧ್ಯವಾದೀತೋ ನಿಶ್ಚಯವಾಗಿ ಹೇಳಲಾಗುವುದಿಲ್ಲ. ಎಷ್ಟು ಬೇಗ ಹೇಳುವೆಯೋ ಅಷ್ಟು ನಿನಗೆ ಹಿತ. ಅನ್ಯಾಯವಾಗಿ ನೀನು ವಿಲಂಬ ಮಾಡಿದರೆ, ನಿನ್ನ ಬಾಯಿಯನ್ನು ಚಿರಕಾಲ ಮುಚ್ಚಿಸಿ ಬಿಡುವೆ; ಆಮೇಲೆ ಎಂದೂ ಒಂದು ಶಬ್ದವೂ ಈ ಬಾಯಿಯಿಂದ ಹೊರಡುವುದು ಶಕ್ಯ ವಿಲ್ಲ."

ಆವನ ಮಾತುಗಳೆಲ್ಲವನ್ನೂ ಮೆಲ್ಡ್ರುಮ್ ಕೇಳಿಕೊಂಡ—ನಿಶ್ಶಬ್ದವಾಗಿ. ಅವನ ಮುಖದಿಂದ ಒಂದೇ ಒಂದು ನುಡಿ ಹೊರಬರಲಿಲ್ಲ. ಸಂಪೂರ್ಣ ನಿರ್ವಿ ಕಾರವಾಗಿತ್ತು ಅವನ ಮೋರೆ. ಭಯ, ಕ್ಷೋಭ, ದುಃಖ ಯಾವುದರ ಚಿಹ್ನೆ ಮಾತ್ರವೂ ಅಲ್ಲಿ ಕಾಣಲಿಲ್ಲ.

ಅವನು ನೀರವವಾಗಿರುವುದನ್ನು ಕಂಡು ಅಧೀರನಾಗಿ ನಕ್ಲಿಜನೇ ಮತ್ತೆ ಮಾತನಾಡಿದ: "ಇಲ್ಲಿ ಕೇಳು ಮೆಲ್ಡ್ರುಮ್, ನಾನು ಕೊನೆಯ ಮಾತು ಹೇಳುತ್ತೇನೆ. ನಿನ್ನೊಡನೆ ತರ್ಕವಿತರ್ಕ ಮಾಡುವ ಇಚ್ಛೆ ನನಗಿಲ್ಲ. ಅದಕ್ಕೆ

ಸಮಯವೂ ಇಲ್ಲ. ಇದ್ದ ಅಲ್ಪ ಸಮಯದಲ್ಲಿಯೇ ಸದ್ಯದ ನಿನ್ನ ಅವಸ್ಥೆ ಯನ್ನು ತಿಳಿಸಿ ಹೇಳುತ್ತೇನೆ ನಿನಗೆ. ಆ ಗುಪ್ತ ಸ್ಥಾನದ ಗುರುತು ಹೇಳಿದರೆ ಅಲ್ಲಿ ನಮಗೆ ಆ ಬಂಗಾರ ಸಿಕ್ಕರೆ, ನಿನ್ನ ಬಿಡುಗಡೆಯ ಬೆಲೆಯೆಂದು ಅದನ್ನು ತಕ್ಕೊಂಡು ನಿನ್ನನ್ನು ಮುಕ್ತಗೊಳಿಸುವೆ; ಪ್ರಾಣ-ಕೈಕಾಲು ಸಮೇತವಾಗಿ ನೀನು ಈ ಪಾತಾಳಗೃಹದಿಂದ ಹೋಗಬಲ್ಲೆ; ನಿಮಗೆ ನಮ್ಮಿಂದ ಆಕ್ರಮಣದ ಭಯವಿರಲಾರದು. ನನ್ನ ಈ ಸೂಚನೆಗೆ ನೀನೊಪ್ಪದಿದ್ದರೆ, ಬಂಗಾರ ಬಚ್ಚಿಟ್ಟ ಎಡೆಯನ್ನು ತಿಳಿಸದಿದ್ದರೆ, ಎಂತಹ ಚಿತ್ರಹಿಂಸೆಯಿಂದ ನಿನಗೆ ಮರಣ ಒದಗು ವುದೋ ನೋಡಿಕೊ. ಅದು ಮಹಾ ಭಯಂಕರ. ಆ ಹೌದಿನಲ್ಲಿರುವ ದ್ರವ್ಯಕ್ಕೂ ನಿನಗೂ ಮಧ್ಯದಲ್ಲಿ ಎಷ್ಟು ಅಂತರವೆಂಬುದನ್ನು ಬಲ್ಲೆಯಷ್ಟೆ? ಅಂತರ ಒಂದು ಸ್ಕ್ರೂ ಮಾತ್ರ. ಆ ಸ್ಕ್ರೂ ತಿರುವಿ ಬಿಟ್ಟರಾಯಿತು. ನಿನ್ನ ಅವಸ್ಥೆ ಏನಾಗುವುದೆಂಬುದು ತಾನೆ ತಿಳಿಯುತ್ತದೆ. ಈ ಕೋಣೆಯಲ್ಲಿ ನಿನ್ನನ್ನು ಸೆರೆ ಹಾಕಿ ಆ ಸ್ಕ್ರೂ ತಿರುವಿ ನಾವು ಹೊರಟು ಹೋಗುತ್ತೇವೆ."

ನಕ್ಲಿಜ್ ನರರೂಪಿಯಾದ ಕಾಡಪಶುವೆ. ಇಲ್ಲದಿದ್ದರೆ, ಮೆಲ್ಡ್ರುಮನನ್ನು ಕ್ಷಣಕ್ಷಣಕ್ಕೂ ಚಿತ್ರಹಿಂಸೆ ಕೊಟ್ಟು ಕೊಲ್ಲುವುದಕ್ಕೆ ಅವನು ಕೈಕೊಂಡಂಥ ನಿರ್ದಯ ಏರ್ಪಾಡಿನಿಂದ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಕೊಲ್ಲು ವುದು ಅಸಂಭವವೇ. ಆ ತೊಟ್ಟಿಯ ಸ್ಕ್ರೂ ತಿರುವಿ ಬಿಟ್ಟರೆ, ವಿಷಾಕ್ತ ಉಗಿ ಕೋಣೆಯನ್ನೆಲ್ಲ ವ್ಯಾಪಿಸುವುದು; ಆ ಉಗಿ ಅವನ ಮೂಗಿನಲ್ಲಿ ಸೇರಿ ಅವನು ಅಸಹ್ಯ ವೇದನೆಯನ್ನು ಅನುಭವಿಸುವನು. ತನ್ನ ಒಂದೊಂದು ಅವಯವ ವನ್ನು ಹದನಾದ ಕತ್ತಿಯಿಂದ ಕಡಿಕಡಿದು ಚೆಲ್ಲಿದಂತೆ ಅವನಿಗೆನಿಸುವುದು. ಮೆಲ್ಡ್ರುಮ್ ರಸಾಯನ ಶಾಸ್ತ್ರವನ್ನು ಚೆನ್ನಾಗಿ ಅರಿತವನು. ನಕ್ಲಿಜನು ಯೋಜಿ ಸಿದ ಉಪಾಯದ ಭೀಷಣತೆಯ ತಿಳಿವಳಿಕೆ ಅವನಿಗಿಲ್ಲವೆಂದು ತಿಳಿದುಕೊಳ್ಳುವ ಕಾರಣವಿಲ್ಲ. ಆದರೆ ನಕ್ಲಿಜನ ಮಾತನ್ನು ಕೇಳಿ ಅವನ ಮುಖಭಾವದಲ್ಲಿ ಕೊಂಚವೂ ವ್ಯತ್ಯಾಸವಾಗಲಿಲ್ಲ. ಅವನ ಹಣೆಯ ಒಂದು ಶಿರವೂ ಸ್ಪಂದಿತ ವಾಗಲಿಲ್ಲ.

ಆದರೆ, ನಕ್ಲಿಜನ ಮಾತುಗಳನ್ನು ಕೇಳಿ ಬಾರಬಾರಾಗೆ ಮಾತ್ರ ಸುಮ್ಮನಿ ರುವುದಾಗಲಿಲ್ಲ. ಅವನು ಯಾವ ಪರಿಯಿಂದ ಮೆಲ್ಡ್ರುಮನನ್ನು ಕೊಲ್ಲುವನೆಂ ಬುದನ್ನು ನೆನೆದು ಅವಳು ಅಧೀರೆಯಾದಳು. ತನ್ನ ಕೈಕಾಲುಗಳನ್ನು ಕಟ್ಟೆ

ಕೆಡವಿದುದು ಅವಳಿಗೆ ಅತ್ಯಂತ ತುಚ್ಛವಾಗಿ ಕಂಡಿತು. ಆದರೆ ಅವಳು ಏನೋ ಮಾತನಾಡುವ ಮೊದಲೇ ಹೊರಗೆ ಲೋಹದ್ವಾರದ ಮೇಲೆ ಅತಿ ಪ್ರಚಂಡವಾದ ಆಘಾತವಾದ ಶಬ್ದ ಕೇಳಿಸಿತು. ಇಂತಹ ಆಘಾತವನ್ನು ಆ ಕಬ್ಬಿಣ ಕದ ಹೆಚ್ಚು ಸಹಿಸುವುದು ಸಾಧ್ಯವೇ ಇಲ್ಲ. ಕ್ಷಿಪ್ರದಲ್ಲಿಯೇ ಅದು ಮುರಿದು ಬೀಳುವುದು ಎಂದು ಎಲ್ಲರಿಗೂ ಎನಿಸಿತು.

ಆದರೆ ಆ ಶಬ್ದವನ್ನು ಗಣನೆಗೆ ತಾರದೆ ಬಾರಬಾರಾ, "ಆ ಹೌದಿನಲ್ಲಿ ಇಟ್ಟಿರುವುದೇನು ? ಆ್ಯಸಿಡ್ ತಾನೆ ? " ಎಂದು ನಕ್ಲಿಜನನ್ನು ಕೇಳಿದಳು.

ಈ ಪ್ರಶ್ನೆಗಾಗಿ ನಕ್ಲಿಜ್ ಆನಂದಬಡುತ್ತ, ಹೆಮ್ಮೆಬಡುತ್ತ ಉತ್ತರವಿತ್ತ: "ಹಾಂ, ಆ್ಯಸಿಡ್. ಹೌದು ಆ್ಯಸಿಡ್ಡಿನಿಂದ ತುಂಬಿದೆ. ಅಂಥಿಂಥ ಆ್ಯಸಿಡ್ಡಲ್ಲ. ಆ್ಯಸಿಡುಗಳ ರಾಜ. ಸಲ್ಫ್ಯೂರಿಕ್ ಆ್ಯಸಿಡ್; ರೂಢಿಯಲ್ಲಿ ವಿಟ್ರಿಯಲ್ ಎನ್ನುತ್ತಾರಲ್ಲ ಅದು."

ಈ ಮಾತಿಗೂ ಸ್ವಲ್ಪವೂ ವಿಚಲಿತನಾಗಲಿಲ್ಲ ಮೆಲ್ಡ್ರಮ್. ಸಲ್ಫ್ಯುರಿಕ್ ಆ್ಯಸಿಡಿನ ಉಗಿಯಿಂದ ತನ್ನನ್ನು ಕೊಲ್ಲಲಾಗುತ್ತಿದೆ, ತನಗೆ ಉಳಿಗಾಲದ ಆಶೆಯೇ ಇಲ್ಲ ಎಂಬುದನ್ನು ಅರಿತುಕೊಳ್ಳುವ ಶಕ್ತಿಯೇ ಆವನಿಗಿಲ್ಲದಿದ್ದರೆ, ಅವನ ಬಾಹ್ಯಜ್ಞಾನವೇ ಖಂಡಿತವಾಗಿ ಲುಪ್ತವಾಗಿರಬೇಕೆಂದು ಏರೋಸ್ಮಿಥ್‌ನಿಗೆನಿಸಿತು. ಅತ್ಯಂತ ಸಹಾನುಭೂತಿಯ ದೃಷ್ಟಿಯಿಂದ ಅವನು ಮೆಲ್ಡ್ರಮನನ್ನು ನೋಡಿದ. ಮೆಲ್ಡ್ರಮನ ವಿಷಯದಲ್ಲಿ ಅವನು ಎಷ್ಟೇ ಅಸಂತುಷ್ಟನಿದ್ದರೂ ಅವನ ಈ ಶೋಚನೀಯ ಅಂತ್ಯಾವಸ್ಥೆಯನ್ನು ನೆನೆದ ಅವನ ಮನಸ್ಸು ಮರುಗಿತು. ಆದರೆ, ತನ್ನ ಹಣೆಬರಹ ಹೇಗಿದೆಯೆಂಬುದು ತನಗೇ ಇನ್ನೂ ಗೊತ್ತಾಗಿರಲಿಲ್ಲ.

ನಕ್ಲಿಜ್ ಮೆಲ್ಡ್ರಮನನ್ನುದ್ದೇಶಿಸಿ ಕಠೋರ ಸ್ವರದಲ್ಲಿ ಮತ್ತೆ ಹೇಳಿದ: "ನೀನು ನನ್ನ ಸಮಯವನ್ನು ತುಂಬಾ ಹಾಳುಮಾಡಿದೆ; ಇನ್ನೂ ನಿನಗೆ ವಿಚಾರಕ್ಕೆ ಅವಕಾಶ ಕೊಡುವುದು ಸಾಧ್ಯವಿಲ್ಲ. ನೀನು ಏನು ನಿಶ್ಚಯ ಮಾಡಿದೆ ಅದನ್ನು ಈಗಲೇ ಹೇಳಿಬಿಡು. ಬಂಗಾರ ಬಚ್ಚಿಟ್ಟದ್ದು ಎಲ್ಲಿ, ಹೇಳುತ್ತೀಯೋ ಇಲ್ಲವೋ ?"

ಮೆಲ್ಡ್ರಮ್ ದೃಢ ಸ್ವರದಲ್ಲಿ ಉತ್ತರವಿತ್ತ: "ಜೀವದಂಜಿಕೆಯಿಂದ ನಾನು ಅದನ್ನು ಹೇಳುವೆನೆಂದು ನಿನ್ನ ಕಲ್ಪನೆಯೆ ? ನಾನು ನನ್ನ ವೈನೆತ್ತರ

ವನ್ನು ಸೀರು ಮಾಡಿ, ದೀರ್ಘ ಕಾಲದ ಕಠೋರ ಪರಿಶ್ರಮದಿಂದ ಗಳಿಸಿದ ಹೇರಳ ಹಣವನ್ನು ಬಂಗಾರದ ರಾಶಿ ಮಾಡಿದ್ದೇನೆ. ಅದನ್ನು ನಿನ್ನಂತಹ ಪಿಶಾಚನ ಭೋಗಕ್ಕಾಗಿ, ರಕ್ತಕಲುಷಿತವಾದ ನಿನ್ನ ಪಾಪಹಸ್ತದಲ್ಲಿ ಇಡುವೆ ನೆಂದು ಬಗೆದೆಯಾ? ಇಲ್ಲ, ಇಂತಹ ದುರಾಶೆಯನ್ನು ನೀನು ಮನಸಿನಲ್ಲಿಯೇ ತರಬೇಡ."

ಅವನ ಮಾತು ಕೇಳಿ ಬಾರಬಾರಾ ಅತಿಶಯ ವ್ಯಾಕುಲಗೊಂಡಳು. "ಹೀಗೇನು ಹೇಳುತ್ತೀಯಪ್ಪಾ ನೀನು! ನಿನ್ನ ಈ ಅಸಮ್ಮತಿಯ ಪರಿಣಾಮ ಎಂತಹ ಭಯಂಕರ ಶೋಚನೀಯ ಎಂಬುದನ್ನು ತಿಳಿಯುವ ಶಕ್ತಿ ನಿನಗಿಲ್ಲವೆ? ಇವನ ಬೇಡಿಕೆಯನ್ನು ನೀನು ಪೂರಯಿಸದಿದ್ದರೆ ಈ ನೀಚನು ನಿನ್ನನ್ನು ಯಾವ ರೀತಿ ಹಿಂಸಿಸಿ ಕೊಲ್ಲುವನೆಂಬುದಕ್ಕೆ ನಿದರ್ಶನ ಇಲ್ಲಿಯೇ, ನಿನ್ನೆದುರಿನಲ್ಲಿಯೇ ಇದೆ. ನೀನಷ್ಟೇ ಅಲ್ಲ, ನಾನು ಕೂಡ ಹೀಗೆಯೇ ಸಾವನ್ನು ಅಪ್ಪಿಕೊಳ್ಳಬೇಕಾ ದೀತು. ಹೀಗೆ ನೀನೂ ನಾನೂ ಇಬ್ಬರೂ ಸತ್ತು ಹೋಗುವುದಾದರೆ, ನೀನು ಕೂಡಿಟ್ಟ ಬಂಗಾರ ರಾಶಿಯಿಂದ ನಿನಗೇನು ಪ್ರಯೋಜನ? ಅದನ್ನು ಅನು ಭೋಗಿಸುವವರು ಯಾರು? ಅದು ಇದ್ದದ್ದೂ ಇಲ್ಲದ್ದೂ ಎರಡೂ ಸಮ ಅಲ್ಲವೆ?" ಎಂದಳು.

ಮೆಲ್ಡ್ರಮ್ ಹೇಳಿದ—ಈಗಲೂ ದೃಢಸ್ವರದಿಂದಲೇ: "ನನ್ನ ನಿನ್ನ ಬಗ್ಗೆ ನಾನು ಸ್ವಲ್ಪವೂ ವ್ಯಸ್ತನಾಗಿಲ್ಲ. ನನ್ನ ಭೋಗಕ್ಕಾಗಿ ಆ ವಿಪುಲ ಸ್ವರ್ಣರಾಶಿ ಯನ್ನು ಗಳಿಸಿಲ್ಲ ನಾನು. ನಿನಗೆ ಗೊತ್ತಿಲ್ಲ—ಗಳಿಸಿದವನು ಭೋಗಿಸುವುದಿಲ್ಲ. ನಾನು ಜೀವನದಲ್ಲಿ ಎಂದೂ ಭೋಗ ಸುಖಕ್ಕೆ ಎಳಸಿದವನಲ್ಲ. ವಿಶಾಲ ಮಾನವ ಸಮಾಜದ ಹಿತದ ಸಲುವಾಗಿ ನಾನೀ ಸ್ವರ್ಣ ರಾಶಿಯನ್ನು ಸಂಚ ಯಿಸಿದ್ದು; ಜಗತ್ತಿನ ಕಲ್ಯಾಣಕ್ಕಾಗಿ ಅದನ್ನು ಇಟ್ಟು ಹೋಗುವೆ. ಮಾನವ ಜಾತಿಯ ಕಷ್ಟ-ದುಃಖ-ಹಾಹಾಕಾರಗಳನ್ನು ಹೋಗಲಾಡಿಸುವುದಕ್ಕಾಗಿ ಒಂದು ಸಾಮಾನ್ಯ ವ್ಯವಸ್ಥೆಯಾದರೂ ನನ್ನಿಂದಾಯಿತಲ್ಲ ಎಂಬ ಮನಃಸಮಾಧಾನ ದಿಂದ ನಗುನಗುತ್ತ ನಾನು ಜೀವ ಬಿಡುತ್ತೇನೆ."

ಏರೋಸ್ಮಿಥ್ ಇವನನ್ನೇ ಹುಚ್ಚನೆಂದು ತಿಳಿದಿದ್ದ. ಜಗತ್ತಿನಲ್ಲಿ ಇಂತಹ ಹುಚ್ಚರು ಕ್ವಚಿತ್ತಾಗಿಯೇ ಸಿಕ್ಕಬಹುದು. ಹುಚ್ಚರ ಮುಖದಿಂದ ಇಂತಹ ಪ್ರಲಾಪವೂ ಕ್ವಚಿತ್ತಾಗಿ ಹೊರಡಬಹುದು.

ಒತ್ತಟ್ಟಿಗೆ ಮೆಲ್ಡ್ರುಮನ ಈ ಬಗೆಯ ದೃಢತೆ—ಇವನನ್ನು ಅತ್ಯಂತ ಅಮಾನುಷ ಯಾತನೆ ಕೊಟ್ಟು ಕೊಲೆ ಮಾಡಿದರೂ ಸಾವಿನ ಸಂಕಟದಲ್ಲೂ ಕಾತರನಾಗದೆ ಇವನು ಗುಪ್ತ ಸಂಗತಿಯನ್ನು ಬಹಿರಂಗಪಡಿಸದಿದ್ದರೆ, ಇವನನ್ನು ಕೊಲ್ಲುವುದರಿಂದ ಪಡೆಯುವ ಲಾಭವೇನು ಎಂಬ ಚಿಂತೆ; ಇನ್ನೊತ್ತಟ್ಟಿಗೆ ಲೋಹದ್ವಾರದ ಮೇಲೆ ಪ್ರಚಂಡವಾದ ಪೆಟ್ಟುಗಳು ಅವಿರತವಾಗಿ ಬೀಳುತ್ತಿವೆ —ಈ ಕ್ಷಣದಲ್ಲಿಯೋ ಇನ್ನು ಕ್ಷಣದಲ್ಲಿಯೋ ಅದು ಮುರಿದು ಬೀಳುವ ಭಯ. ಉಭಯ ಸಂಕಟದಲ್ಲಿ ಸಿಕ್ಕ ನಕ್ಲಿಜ್ ಕ್ರೋಧದಿಂದ ಅಧೀರನಾದ, ಅಸಹಿಷ್ಣುವಾದ. ಮೆಲ್ಡ್ರುಮನಿಗೊದಗಿದಂತಹ ಶೋಚನೀಯ ಅವಸ್ಥೆಯಲ್ಲಿ ಮತ್ತೊಬ್ಬರಾಗಿದ್ದರೆ ಈ ಅಗ್ನಿಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದು ಶಕ್ಯವೇ ಇಲ್ಲ ಅವನಿಗೆನಿಸಿತು. ಆದರೆ ನಕ್ಲಿಜ್ ಇನ್ನೂ ಹತಾಶನಾಗಿರಲಿಲ್ಲ. ಹಠಾತ್ತನೆ ಒಂದು ವಿಚಾರ ಹೊಳೆದು ಅವನ ಕಣ್ಣುಗಳು ಬೆಳಗಿದವು.

"ಅವನನ್ನು ಆ ಆಸನದಿಂದ ಕೆಳಗಿಳಿಸು" ಎಂದು ಸುಲ್ಜನಿಗೆ ಹೇಳಿದ.

ಸುಲ್ಜ್ ಅವನ ಅಪ್ಪಣೆಯನ್ನು ತಡವಿಲ್ಲದೆ ನೆರವೇರಿಸಿದ. ಮೆಲ್ಡ್ರುಮನನ್ನು ಆಸನದಿಂದೆತ್ತಿ, ಮಿಕ್ಕವರನ್ನು ಕೆಡಹಿದಲ್ಲಿ ಕೆಡನಿದನು. ನಕ್ಲಿಜ್ ತತ್ಕ್ಷಣವೆ ಎದ್ದುನಿಂತ. ಕ್ರೋಧದಿಂದ ಅವನ ಮೋರೆ ನೀಲಿ ಬಣ್ಣದ್ದಾಗಿತ್ತು. ಇದು ಮನುಷ್ಯ ಪ್ರಾಣಿಯಲ್ಲ, ಸಿಟ್ಟಿಗೆದ್ದ ಕರಡಿ ಎಂಬಂತೆ ಅವನು ಕಾಣುತ್ತಿದ್ದ. ಬಾರಬಾರಾನ ಬಳಿ ಸಾರಿ ಅವನೆಂದ: "ನಿನ್ನ ತಂದೆಯ ಕಲ್ಯಾಣಕ್ಕಾಗಿ ಬಹಳ ಕಾತರಳಾಗಿದ್ದೀ, ಆದರೆ ಬಂಗಾರವನ್ನಿಟ್ಟ ಸ್ಥಳವನ್ನು ಅವನು ಹೇಳಲೊಲ್ಲ. ಅದನ್ನವನು ಹೇಳದಿದ್ದರೆ ಅವನ ಬದಲು ನಿನ್ನನ್ನೇ ಬಲಿ ಕೊಡುತ್ತೇನೆ ಅದಕ್ಕೆ ನೀನು ಸಿದ್ಧಳಾಗು."

ಎನ್ನುತ್ತ ಅವನು ಸುಲ್ಜನಿಗೆ ಸನ್ನೆಯಿಂದ ಏನೋ ತಿಳಿಸಿದ. ಕೂಡಲೇ ಅವನು ಬಾರಬಾರಾನನ್ನು ಎತ್ತಿ, ಮೆಲ್ಡ್ರುಮನನ್ನಿರಿಸಿದ್ದ ಪೀಠದ ಮೇಲೆ ಕುಳ್ಳಿರಿಸಿದ. ನಕ್ಲಿಜನ ಮನೋನೀತ ಯೋಜನೆಯನ್ನರಿತು, ಬಾರಬಾರಾನಿಗೆ ಒದಗಲಿರುವ ಚಿತ್ರಹಿಂಸೆಯ ಮರಣವನ್ನು ನೆನೆದು ಏರೋಸ್ಮಿಥ್ ಬಿದ್ದುಕೊಂಡಲ್ಲಿಯೇ ಚಡಪಡಿಸಿದ. ಆದರೆ ಅವನನ್ನೇ ಪಿಚಂಡಿ ಬಿಗಿದು ಕೆಡವಿದ್ದಾರೆ; ಬಾರಬಾರಾನನ್ನು ಉಳಿಸಿಕೊಳ್ಳುವುದಿರಲಿ, ಆತ್ಮರಕ್ಷಣೆಯ ಶಕ್ತಿಯೂ ಅವನಿಗಿರಲಿಲ್ಲ. ಅವನು ತೆಪ್ಪಗೆ ಬಿದ್ದುಕೊಂಡು ಅವಳು ಪಡುವ ಸಂಕಟವನ್ನು ಕಣ್ಣು

ಬಿಟ್ಟುಕೊಂಡು ನೋಡಬೇಕಾಗಿತ್ತು. ಆದರೆ ಅವನ ಮನಸು ಅತ್ಯಂತ ಉತ್ತೇಜಿತವಾಗಿತ್ತು. ರಜ್ಜುಬದ್ಧ ಅವಸ್ಥೆಯಲ್ಲಿ ಬಿದ್ದುಕೊಂಡಿರುವುದು ಅವನಿಗೆ ಅಸಹ್ಯವಾಯಿತು. ಮುಕ್ತತೆಗಾಗಿ ಅವನು ಅಸಾಧ್ಯವಾಗಿ ಹೆಣಗಿದ. ಅದು ಫಲ ಕೊಡಲಿಲ್ಲ. ತಿರುಗಿ, ಕಿತ್ತಾಟದಿಂದ ಹಗ್ಗದ ಕಟ್ಟು ಮತ್ತಷ್ಟು ಬಿಗಿಯಾಗಿ ರಟ್ಟೆಗಳನ್ನು ಕೊರೆಯಿತು. ಅವನ ಮನದ ತಾಳ್ಮೆ ತಪ್ಪಿ ಉನ್ಮತ್ತನಂತೆ ಕೂಗಾಡಿದ. ನಕ್ಲಿಜನನ್ನು ಬಯ್ದು, ಅವನಿಗೆ ಹೆದರಿಕೆ ಹಾಕಿದ. ಆದರೆ ನಕ್ಲಿಜ್ ಅದಕ್ಕೆಲ್ಲ ಲಕ್ಷ್ಯವನ್ನೇ ಕೊಡಲಿಲ್ಲ. ಒಂದುಸಲ ಮಾತ್ರ ಅವನ ಮೋರೆಯ ಕಡೆ ನೋಡಿ ಅವಜ್ಞೆಯಿಂದ ನಕ್ಕ.

ಆಮೇಲೆ ನಕ್ಲಿಜ್ ಮೆಲ್ಡ್ರುಮನನ್ನುದ್ದೇಶಿಸಿ "ಇಲ್ಲಿ ಕೇಳು ಮೆಲ್ಡ್ರುಮ್, ನೀನೇನೋ ಸಂಕಲ್ಪವನ್ನೇ ಮಾಡಿದ್ದೀ—ನನ್ನ ಪ್ರಶ್ನೆಗೆ ಉತ್ತರ ಕೊಡಬಾರದು, ಬಂಗಾರ ಬಚ್ಚಿಟ್ಟ ಸ್ಥಳ ನನಗೆ ತಿಳಿಸಬಾರದು ಎಂದು. ಆದರೆ ನಿನ್ನನ್ನು ಬಾಯಿ ಬಿಡಿಸುವಂತೆ, ನಾನು ಕೇಳಿದ್ದಕ್ಕೆ ಉತ್ತರ ಕೊಡುವಂತೆ ಮಾಡಲು ನಾನು ಒಳ್ಳೆಯ ಉಪಾಯ ಹೂಡಿದ್ದೇನೆ." ಎಂದು ನುಡಿದು ಜೇಬಿನಿಂದ ಗಡಿಯಾರವನ್ನು ತೆಗೆದು ಮತ್ತೆಂದ: "ಇನ್ನು ಎರಡು ನಿಮಿಷ ಸಮಯ ಕೊಡುತ್ತೇನೆ ನಿನಗೆ. ಹಾಂ, ಎರಡು ನಿಮಿಷಗಳಲ್ಲಿ ನನ್ನ ಪ್ರಶ್ನೆಗೆ ಉತ್ತರ ಕೊಡದಿದ್ದರೆ, ಆಮೇಲೆ ಉತ್ತರ ಕೊಡುವುದೂ ಒಂದೇ ಬಿಡುವುದೂ ಒಂದೇ. ಅದಕ್ಕಾಗಿ ನೀನು ಜೀವದಿಂದ ಇರುತ್ತೀ ಎಂದು ಸರ್ವಥಾ ಭಾವಿಸಬೇಡ. ನಿನ್ನನ್ನೂ ಈ ಎಲ್ಲ ಜನರನ್ನೂ ಕೊಲ್ಲದೆ ನಾನು ಇಲ್ಲಿಂದ ಹೋಗುವುದಿಲ್ಲ."

ಇದುವರೆಗೂ ಮೆಲ್ಡ್ರುಮ್ ಸಂಪೂರ್ಣ ನಿರ್ವಿಕಾರನಾಗಿದ್ದ, ಅವಿಚಲಿತನಾಗಿದ್ದ; ಪ್ರಾಣಭಯದಿಂದ ಅವನು ಕಿಂಚಿತ್‌ಮಾತ್ರವೂ ಕಾತರನಾಗಿರಲಿಲ್ಲ. ಈಗ ಮಾತ್ರ ಅವನು ವಿಚಲಿತನಾಗದಿರಲಿಲ್ಲ. ಅವನ ಮುಖಭಾವದಲ್ಲಿ ಉದ್ವೇಗದ ಚಿಹ್ನೆಗಳು ಕಾಣತೊಡಗಿದವು, ಅವನ ಮನದ ದೃಢತೆಯಲ್ಲಿ ಸಡಿಲು ಹುಟ್ಟತೊಡಗಿತು, ಒಂದು ಕ್ಷಣ ಅವನು ಹತಾಶನಾದ. ಆದರೂ ಅವನ ಬಾಯಿಂದ ಯಾವ ಮಾತುಗಳೂ ಹೊರಡಲಿಲ್ಲ.

"ಇನ್ನು ಒಂದು ನಿಮಿಷ ಮಾತ್ರ ಉಳಿಯಿತು." ನಕ್ಲಿಜ್ ತನ್ನ ಉತ್ತೇಜಿತ ವಿಕೃತ ಸ್ವರದಲ್ಲಿ ಗಡಿಯಾರವನ್ನು ನೋಡುತ್ತ ಹೇಳಿದ.

ಈಗ ಮೆಲ್ಡ್ರಮನ ತುಟಿಗಳು ಕೊಂಚ ಅದರಿದವು. ಆದರೆ ಬಾಯಿಂದ ಮಾತು ಹೊರಡಲೇ ಇಲ್ಲ. ಅವನ ದೃಢತೆಯಿಂದ ನಕ್ಲಿಜನಿಗೆ ಮತ್ತಷ್ಟು ರೇಗಿತು. ಅವನ ಕಣ್ಣುಗಳಿಂದ ಕಿಡಿಗಳೇ ಉದಿರತೊಡಗಿದವು. ಅವನು ಒಂದೇ ನೆಗೆತದಿಂದ ಹೆಡೆಮುಡಿಗಟ್ಟಿ ಕೆಡಹಿದ್ದ ಬಾರಬಾರಾನ ಬಳಿ ಸಾರಿದ. ತನ್ನನ್ನು ಕಂಡು ಅವಳು ಆಕ್ರಮಣ ಭೀತಿಯಿಂದ ತನ್ನ ತಂದೆಯನ್ನು ಗುಪ್ತ ಸಂಗತಿ ಹೇಳುವಂತೆ ಅಲ್ಪರಿಯುವಳೆಂದು ನಕ್ಲಿಜ್ ನಂಬಿದ್ದ. ಅದರಿಂದ ಅವಳ ಕಾತರ ನಿವೇದನೆಯ ಪರಿಣಾಮವಾಗಿ ಮೆಲ್ಡ್ರಮನ ಸಂಕಲ್ಪ ಸಡಿಲುವುದು, ಚಿನ್ನವಿಟ್ಟ ಸ್ಥಳವನ್ನು ಪ್ರಕಟಗೊಳಿಸದೆ ವಿಧಿಯಿಲ್ಲವಾಗುವುದು: ಎಂದು ಅವ ನೆಣಿಕೆ. ಬಾರಬಾರಾನನ್ನು ಚೆನ್ನಾಗಿ ಹೆದರಿಸಿ ಬಿಟ್ಟರಾಯಿತು, ತನ್ನ ಕೆಲಸ ವಾಯಿತು ಎಂದು ಬಗೆದಿದ್ದ ಅವನು. ಆದರೆ ಹತ್ತಿರ ಹೋಗಿ ನೋಡಿದಾಗ ಅವಳು ಭಯದಿಂದ ಮೂರ್ಛೆ ಹೊಂದಿದ್ದಳು; ಹೆದರಿಸುವುದರಿಂದ ಏನೂ ಪ್ರಯೋಜನವಾಗುವಂತಿರಲಿಲ್ಲ.

ಹೊರಗಡೆ ಲೋಹದ್ವಾರಕ್ಕೆ ತೆರಪಿಲ್ಲದೆ ಬೀಳುತ್ತಿದ್ದ ಮುದ್ಗರ ಪ್ರಹಾರದ ಮಹಾರವದಿಂದ ಕೋಣೆ ಅವಿರತವಾಗಿ ಪ್ರತಿಧ್ವನಿತವಾಗುತ್ತಿತ್ತು. ಅದನ್ನು ಕೇಳಿ, ಕದ ಚೌಕಟ್ಟು ಸಹಿತವಾಗಿ ಕಿತ್ತು ಬೀಳುವುದೆಂದು ನಕ್ಲಿಜನಿಗೆನಿಸಿತು. ಲೋಹದ್ವಾರವನ್ನು ಮುರಿದು ಕೆಡವಿ ಪೋಲಿಸರು ಒಳನುಗ್ಗುವುದು ಅಸಂಭವ ವೆಂಬ ಅವನ ನಂಬುಗೆ ಹಾರತೊಡಗಿತು. ಅವನು ಅತ್ಯಂತ ಅಧೀರನಾದ. ಅನಿಶ್ಚಿತ ಭಯದಿಂದ ಮೂಢನಂತಾಗಿ ಅವನು ಹೌದಿನ ಸ್ಕ್ರೂ ತಿರುವಿ ಬಿಟ್ಟ. ಅದರಿಂದ ಸಲ್‌ಫ್ಯೂರಿಕ್ ಆ್ಯಸಿಡಿನ ಹೊಗೆ ಹೊರಡತೊಡಗಿತು. ಅದರ ಅಸಹ್ಯ ತೀವ್ರ ವಾಸನೆಯಿಂದ ಕೋಣೆ ತುಂಬಿತು; ಅಲ್ಲಿಯ ಹವೆ ಪಳಪಳಕ್ಕೂ ಹೆಚ್ಚು ಹೆಚ್ಚು ವಿಷಾಕ್ತವಾಗತೊಡಗಿತು. ಮೂರ್ಛಿತಳಾದ ಬಾರಬಾರಾನ ಮೂಗಿನಲ್ಲಿ ಆ ವಿಷ ಸೇರಿ ಶೀಘ್ರದಲ್ಲಿಯೇ ಅವಳು ಅವಿಭೂತಳಾಗುವಳು, ತಿರುಗಿ ಚೇತರಿಸಿಕೊಳ್ಳುವಳೆಂಬ ಆಸೆಯೇ ಇಲ್ಲವೆಂಬುದನ್ನು ನೆನೆದು ಏರೋ ಸ್ಮಿಥ್‌ನ ಎದೆ ತಳಮಳಿಸಿತು. ತನ್ನ ಕೈಯ ಕಟ್ಟುಗಳನ್ನು ಹರಿದೊಗೆಯಲು ಅವನು ಹೆಣಗಿದ, ಎಲ್ಲ ವ್ಯರ್ಥವಾಯಿತು. ಅವನು ಕ್ರೋಧ ಕ್ಷೋಭಗಳಿಂದ ಗರ್ಜಿಸತೊಡಗಿದ. ಆದರೆ ನಕ್ಲಿಜ್ ಅದಕ್ಕೆ ಸೊಪ್ಪುಹಾಕಲಿಲ್ಲ.

"ಈಗಲಾದರೂ ಹೇಳು, ಬಂಗಾರವನ್ನು ಎಲ್ಲಿ ಅಡಗಿಸಿಟ್ಟಿದ್ದೀ?"

ನರ್ಕ್ಲಿಜ್ ವಿಕೃತ ಸ್ವರದಲ್ಲಿ ಗದರಿಸಿ ಕೇಳಿದ. "ಈಗಲಾದರೂ ಹೇಳು, ಬಂಗಾರ ಎಲ್ಲಿಟ್ಟಿದ್ದೀ?"

ಆಯುಷ್ಯದಲ್ಲಿಯ ಕೊನೆಮಟ್ಟದ ಆ ಸಂಕಟ ಪರಿಸ್ಥಿತಿಯಲ್ಲಿ, ಮೃತ್ಯುವಿನ ಧೂಮಧೂಸರ ಪಕ್ಷಚ್ಛಾಯೆ ಮುಟ್ಟಿರುವಾಗ, ಮಗಳು ಎಚ್ಚರುದಪ್ಪಿ ಹತ್ತಿರವೇ ಬಿದ್ದಿರುವ ಕಾಲದಲ್ಲಿ ಕೂಡ ರಜ್ಜುಬದ್ಧನಾಗಿರುವ ಮೆಲ್ಡ್ರುಮನ ಮುಖದಿಂದ ಒಂದು ಶಬ್ದವೂ ಹೊರಡಲಿಲ್ಲ.

ನರ್ಕ್ಲಿಜ್ ತನ್ನ ಗಡಿಯಾರದ ಕಡೆಗೆ ನೋಡಿ ಅತ್ಯಂತ ಉತ್ತೇಜನದಿಂದ ಉಬ್ಬಿ ಹಲ್ಲು ಕಡಿಯುತ್ತ ಕರ್ಕಶ ಸ್ವರದಲ್ಲಿ ಹೇಳಿದ: "ಇನ್ನು ಅರ್ಧ ನಿಮಿಷ ಮಾತ್ರ—ಮೂವತ್ತು ಸೆಕಂಡು ಮಾತ್ರ. ಆಮೇಲೆ ಎಲ್ಲವೂ ಮುಗಿದು ಹೋಗುವುದು. ಇನ್ನು ಇಪ್ಪತ್ತು ಸೆಕಂಡು!"

ಅದನ್ನು ತನ್ನ ಕೈಕೆಳಗೆ ಬಿಟ್ಟು ಕ್ರುದ್ಧ ವನ್ಯಪಶುವಿನ ಹಿಂಸ್ರದೃಷ್ಟಿಯಿಂದ ಬಾರಬಾರಾನ ಕಡೆಗೆ ನೋಡಿದ. ಅವಳು ಆಗಲೂ ಅಚೇತನಳಾಗಿ ಬಿದ್ದಿದ್ದಳು. ವಿಪರೀತ ಮಾನಸಿಕ ಉತ್ತೇಜನದಿಂದ ಉಸಿರಿಡುತ್ತ ಮೆಲ್ಡ್ರುಮನ ಕಡೆ ನೋಡಿದ.

ಮೆಲ್ಡ್ರುಮ್ ವಿಹ್ವಲದೃಷ್ಟಿಯಿಂದ ಜ್ಞಾನಹೀನಳಾದ ಮಗಳ ಕಡೆ ನೋಡಿದ. ಅವಳ ಕಳೆಗುಂದಿದ ಮೊಗವನ್ನು ಕಂಡು, ಅವಳ ಅಮಂಗಲದ ಭಯದಿಂದ ಅವನ ಹೃದಯದಲ್ಲಿ ಕಲಮಲವೆದ್ದಿತು; ಅವನ ದೀರ್ಘಕಾಲದ ದೃಢಸಂಕಲ್ಪವು ಚಲವಿಚಲವಾಯಿತು. ಈಗ ತನ್ನ ಸೋಲನ್ನೊಪ್ಪಿಕೊಳ್ಳದೆ ಇರಲು ಅವನಿಂದಾಗಲಿಲ್ಲ; ಹತಾಶ ಭಾವದಿಂದ ನರ್ಕ್ಲಿಜನ ಮೋರೆ ನೋಡುತ್ತ, "ಬಾರಬಾರಾನ ಜೀವ ಉಳಿಸು, ನಾನು ನನ್ನ ಬಂಗಾರವನ್ನೆಲ್ಲ ಎಲ್ಲಿ ಬಚ್ಚಿಟ್ಟಿರುವೆನೆಂಬುದನ್ನು ನಿನಗೆ ಹೇಳುತ್ತೇನೆ. ಆದರೆ ನಿನಗೆ ಆ ವಿಪುಲ ಸುವರ್ಣ ನಿಧಿ ಸಿಕ್ಕೊಡನೆಯೇ........"

ಅವನ ಮಾತು ಮುಗಿಯುವ ಮೊದಲೆ ನೂರು ಸಿಡಿಲುಗಳು ಎರಗಿದಂತೆ ಮಹಾಶಬ್ದದಿಂದ ನೆಲ ನಡುಗಿದಂತಾಯಿತು. ಆ ಶಬ್ದಾಘಾತದಿಂದ ಏರೋಸ್ಮಿಥ್‌ನ ಕಿವಿಗಳು ಕಿವುಡಾದವು. ಕೆಲವು ವರುಷಗಳ ಹಿಂದೆ ಅವನು ಜಾಗತಿಕ ಮಹಾಯುದ್ಧದಲ್ಲಿ ಹೋರಾಡುತ್ತಿರುವಾಗ ಅವನ ಅಕ್ಕಪಕ್ಕದಲ್ಲಿ ಬೀಳು

ತ್ತಿದ್ದ ಬಾಂಬುಗಳ ಪ್ರಳಯ ಕಾಲದ ಮೇಘಗಳ ಗರ್ಜನೆಯಂತಹ ಭಯಂಕರ ಶಬ್ದಗಳನ್ನು ಕೇಳಿದ್ದ. ಈಗ ಶತ್ರುಗಳ ಸೆರೆಯಲ್ಲಿ, ರಜ್ಜುಬದ್ಧನಾಗಿ ಬಿದ್ದು ಕೊಂಡ ಅವಸ್ಥೆಯಲ್ಲಿ, ಬಾಂಬು ಸ್ಫೋಟದ ಶಬ್ದದಂತಹ ಶಬ್ದವನ್ನು ಕೇಳುವಂತಾಯಿತು. ಯುದ್ಧಕ್ಷೇತ್ರದ ವಿಸ್ಮೃತಪ್ರಾಯವಾದ ಆ ಘಟನಾ ಚಿತ್ರಗಳು ಅವನ ಅವಸನ್ನ ಹೃದಯದಲ್ಲಿ ಜಗ್ಗನೆ ಮೂಡಿದವು. ಈ ವಜ್ರಪಾತದಂತಹ ಶಬ್ದದ ಕಾರಣ ಮಾತ್ರ ಅವನಿಗೆ ಗೊತ್ತಾಗಲಿಲ್ಲ. ಆದರೆ, ಆ ಶಬ್ದದ ಜೊತೆಯಲ್ಲಿಯೇ ಆ ಕೋಣೆಯಲ್ಲಿಯ ಸರ್ವವೂ ಬುಡಮೇಲಾಗಿ ಬಿಟ್ಟಿತೇನೋ. ಗೋಡೆಗಳು ನಾಲ್ಕೂ ಕಡೆಯಿಂದ ಬೀಳತೊಡಗಿದವು; ಇಟ್ಟಿಗೆ ತೊಲೆ ಜಂತಿಗಳು ಮುರಿದು ಬೀಳತೊಡಗಿದವು; ಕೋಣೆತುಂಬ ದೂಳು ಇಡುಗಿತು; ದಟ್ಟವಾಗಿ ಕಾರ್ಮೋಡ ಮುಸುಕಿದಂತೆ ಕತ್ತಲು ಕವಿಯಿತು. ಯಾರಿಗೂ ಏನೂ ಕಾಣಿಸದಾಯಿತು.

ಇದೇ ಸಮಯದಲ್ಲಿ ಭಯಂಕರವಾದ ಘಟನೆಯೊಂದು ಸಂಘಟಿಸಿತು. ಒಂದು ಕ್ಷಣದ ಹಿಂದೆ ನಕ್ಲಿಜ್ ಯಾವ ಕಾಷ್ಠಾಸನದ ಹತ್ತಿರ ಗಡಿಯಾರ ಹಿಡಿದುಕೊಂಡು ನಿಂತು ಮೆಲ್ಡ್ರುಮನನ್ನು ಬೆದರಿಸುತ್ತಿದ್ದನೋ ಆ ಆಸನವು ಒಮ್ಮೆಲೆ ಮುರಿದು ಬಿದ್ದಿತು. ಅವನು ನೆಲೆ ತಪ್ಪಿ ಆ ಭಗ್ನ ಕಾಷ್ಠಾಸನದ ಕೆಳಗೆ ಬಿದ್ದೊಡನೆ, ಅದರ ಹತ್ತಿರವಿದ್ದ ಸಲ್ಫ್ಯೂರಿಕ್ ಆ್ಯಸಿಡಿನಿಂದ ತುಂಬಿದ ಹೌದು ಉರುಳಿತು; ಆ್ಯಸಿಡ್ ಎಲ್ಲವೂ ಅವನ ಮೈಮೇಲೆ ಸುರಿಯಿತು. ಬಾರಬಾರಾ—ಮೆಲ್ಡ್ರುಮನನ್ನು ಕೊಲ್ಲುವುದಕ್ಕಾಗಿ ಅವನು ಯೋಜಿಸಿದ್ದ ತೀವ್ರ ಆ್ಯಸಿಡಿನಿಂದಲೇ ಅವನ ಸರ್ವಾಂಗವು ದಗ್ಧವಾಗಿ ಅವನು ಆರ್ತನಾದ ಮಾಡಲಾರಂಭಿಸಿದ. ಆದರೆ ಆ ಅಸಹ್ಯ ಯಾತನೆಯನ್ನು ಅವನು ಹೆಚ್ಚು ಸಮಯ ಅನುಭವಿಸಬೇಕಾಗಲಿಲ್ಲ. ಬಹಳವಾದರೆ ಹತ್ತು ಸೆಕಂಡು ಅವನು ಕ್ಷೀಣ ಸ್ವರದಲ್ಲಿ ಆರ್ತನಾದ ಮಾಡಿರಬಹುದು; ಬಳಿಕ ಅವನ ಕಂಠ ಚಿರನೀರವವಾಯಿತು.

ಆಮೇಲೆ ಅಲ್ಲಿ ಏನು ಘಟಿಸಿತೆಂಬುದು ಯಾರಿಗೂ ತಿಳಿಯಲಿಲ್ಲ. ಕೆಲ ಸಮಯದಲ್ಲಿ ಎಲ್ಲ ವಿಭ್ರಾಟವ ಕೊನೆಗೊಂಡಿತು. ಆ ಕೋಣೆಯಲ್ಲಿ ಗಭೀರ ನಿಃಸ್ತಬ್ಧತೆ ವಿರಾಜಮಾನವಾಯಿತು. ಇಡುಗಿದ ದೂಳಿ-ಸುಣ್ಣದ ಹುಡಿ ತೊಲಗಿ ಸುತ್ತುಕಡೆ ವಾತಾವರಣ ಸ್ವಚ್ಛವಾಯಿತು.

ಆ ಭೀಷಣ ಕಲ್ಲೋಲದಲ್ಲಿ ಘಟಿಸಿದ ಕಾಂಡವೇನೆಂದು ಕಿಟ್ ಏರೋ

ಸ್ಮಿಥ್‌ನಿಗೆ ತಿಳಿಯಲಿಲ್ಲ. ಅವನ ದೃಷ್ಟಿಶಕ್ತಿ, ಅವನ ಬಾಹ್ಯಜ್ಞಾನ ಲುಪ್ತವಾಗಿ ದ್ದವು. ಎಲ್ಲವೂ ನಿಃಶಬ್ದವಾದ ಮೇಲೆ ಅವನಿಗೆ ಪ್ರಜ್ಞೆಯುಂಟಾಯಿತು. ಅವನು ಕಣ್ಣು ತೆರೆದು ಸುತ್ತಲೂ ನೋಡಿದ. ಆಶ್ಚರ್ಯ! ಆ ಕೋಣೆಯ ಗೋಡೆ ಹಾರಿ ಹೋಗಿತ್ತು. ಅದರಾಚೆ ಹತ್ತಿರದಲ್ಲೇ ಒಂದು ಭಾರೀ ಮೋಟರ್ ಲಾರಿ ನಿಂತಿತ್ತು. ಕೋಣೆಯ ಕಮಾನು ಅದರ ಮೇಲೆ ಮುರಿದು ಬಿದ್ದಿತ್ತು. ಆ ಕೋಣೆಯಲ್ಲಿ ಹೊಸ ಜನರೂ ಹಲವರು ಕಂಡುಬಂದರು.

ಮಣ್ಣು-ಸುಣ್ಣ ಬಿದ್ದು ಏರೋಸ್ಮಿಥ್‌ನ ಕಣ್ಣುಗಳು ಉರಿಯುತ್ತಿದ್ದವು. ಅವನು ಕಣ್ಣುಜ್ಜಿಕೊಂಡು ಕಣ್ಣೆರಿ ಕಡಿಮೆಯಾದ ಮೇಲೆ ಚೆನ್ನಾಗಿ ನೋಡಿದ. ಸುಪರಿಂಟೆಂಡೆಂಟ್ ಪ್ಯಾರೆಟ್ ಯಾವ ಗಾಯಪೆಟ್ಟುಗಳಿಲ್ಲದೆ ಬಿಡುಗಡೆ ಹೊಂದಿ ದ್ದರು. ಅವರು ಅವನ ದೇಹದ ಮೇಲೆ ಬಾಗಿ ಅವನ ಹೆಡಮುರಿಗೆಯ ಹಗ್ಗ ವನ್ನು ಕೊಯ್ಯುತ್ತಲಿದ್ದರು. ಅವರ ಪ್ರಯತ್ನದಿಂದ ಏರೋಸ್ಮಿಥ್ ಬಂಧ ಮುಕ್ತನಾಗಿ ಎದ್ದು ಕುಳಿತನು. ಅವನ ಅವಸನ್ನವಾದ ಮನವು ಕರ್ತವ್ಯಪಥ ದಲ್ಲಿ ಮುಂದುವರಿಯಲು ವ್ಯಾಕುಲಗೊಂಡಿತು. ಕಟ್ಟು ಬಿಚ್ಚಿದ ಮೇಲೂ ಸಂಕಟ ಕಾಲದಲ್ಲಿ ನಿಷ್ಕ್ರಿಯನಾಗಿರುವುದು ಕಾಪುರುಷ ಲಕ್ಷಣವೆಂದು ಅವನಿಗೆ ನಿಸಿತು. ಅವನು ಸುತ್ತಲೂ ನೋಟ ಆಡಿಸಿ, ಬಂಧನದಿಂದ ನೊಂದು ಕಸುವ ಳಿದ ಕೈಯನ್ನು ಹಿಂದೆ ಹೇಳಿದ ವರವೆಯ ಕಡೆ ನೀಡಿ, "ನೋಡಿರಿ ನೋಡಿರಿ, ಪರದೆಯ ಆಚೆ ನೋಡಿರಿ" ಎಂದು ಸ್ಖಲಿತ ಸ್ವರದಲ್ಲಿ ನುಡಿದ.

ಪ್ಯಾರೆಟ್ ವಿಸ್ಮಯದಿಂದ ಆ ಕಡೆ ನೋಡಿದರು. ಕೂಡಲೆ ಅತ್ಯಂತ ವ್ಯಗ್ರ ಭಾವದಿಂದ ಎದ್ದುಹೋಗಿ ತೆರೆಯನ್ನು ಬದಿಗೆ ಸರಿಸಿದರು. ಕ್ಷಣ ಹೊತ್ತು ಅವರು ವಿಹ್ವಲರಾಗಿ ನಿಶ್ಚಲರಾಗಿ ನಿಂತುಬಿಟ್ಟರು. ಅವನ ವಾಕ್ಶಕ್ತಿ ಕೂಡ ಲುಪ್ತವಾಗಿ ಬಿಟ್ಟಿತು. ಆಮೇಲೆ ಆತ್ಮಸಂವರಣ ಮಾಡಿಕೊಂಡು, "ಏನು ಸರ್ವನಾಶ! ಉಃ, ಎಂಥ ಭಯಾನಕ ವ್ಯಾಪಾರ!" ಆವೇಗದಿಂದ ಉದ್ಗರಿಸಿ ದವರೆ, ತೆರೆಯ ಬದಿಗೆ ಧಾವಿಸಿ ಹೋದರು.

ಅಲ್ಲಿ ಫ್ಯೂಜ್ ಜೋಡಿಸಿದ ಒಂದು ಕರಿಯ ಪಾತ್ರೆ ಅವರಿಗೆ ಕಂಡಿತು. ಇನ್ನೊಂದು ಕ್ಷಣದಲ್ಲಿಯೇ ಅದು ಬಾಂಬಿನಂತೆ ಸ್ಫೋಟವಾಗಿ ಕೋಣೆಯಲ್ಲಿದ್ದ ಎಲ್ಲರನ್ನೂ ನಾಶಗೊಳಿಸುವುದೆಂಬುದನ್ನು ಅರಿತುಕೊಂಡು, ತತ್‌ಕ್ಷಣವೇ ಅವರು ಫ್ಯೂಜನ್ನು ತಪ್ಪಿಸಿದರು. ಏಕೆಂದರೆ ಕೆಲ ನಿಮಿಷಗಳ ಹಿಂದೆ ಆ

ಫ್ಯೂಜಿಗೆ ಬೆಂಕಿ ತಗುಲಿಸಲಾಗಿದ್ದಿತು. ಆ ಪಾತ್ರೆಯಲ್ಲಿದ್ದದ್ದು 'ಎಮಿನಲ್' ದ್ರವ್ಯ. ಫ್ಯೂಜಿನ ಬೆಂಕಿ ಅದಕ್ಕೆ ಸೋಂಕಿದ ಮಾತ್ರವಲ್ಲಿಯೇ ಆ ಕೋಣೆ ಸಂಪೂರ್ಣ ಧ್ವಂಸವಾಗುತ್ತಿತ್ತು. ಒಂದು ದೊಡ್ಡ ಯುದ್ಧನೌಕೆಯನ್ನು ನಾಶಗೊಳಿಸುವಷ್ಟು ಎಮಿನಲ್ ಅದರಲ್ಲಿತ್ತು.

ಅದು ತಪ್ಪಿದಷ್ಟಕ್ಕೆ ಎಲ್ಲ ವಿಭ್ರಾಟಗಳೂ ಮುಗಿಯಲಿಲ್ಲ. ಪ್ಯಾರೆಟರು ಮುಂದಿನ ಕರ್ತವ್ಯಕ್ಕಾಗಿ ಆ ಸ್ಥಳದಿಂದ ಹೊರಡುವ ಹೊತ್ತಿಗೆ, ನೆಲದ ಮೇಲೆ ಬಿದ್ದಿದ್ದ ವರ್ತುಲಾಕಾರದ ಕೃಷ್ಣವರ್ಣದ ಪದಾರ್ಥವನ್ನು ಎಡವಿ ಬಿದ್ದು ಬಿಟ್ಟರು. ಅವರು ಎಡವಿದ್ದು ಅದೊಂದು ನರಮುಂಡ. ಆದರ ತಲೆಯ ಮೇಲೆ ದೊಡ್ಡದೊಂದು ಪೆಟ್ಟಿಗೆ ಬಿದ್ದಿತ್ತು. ಪೆಟ್ಟಿಗೆ ಒಳ್ಳೇ ಗಟ್ಟಿಮುಟ್ಟಾದದ್ದು. ನಾಲ್ಕೂಕಡೆ ಕಬ್ಬಿಣ ಪಟ್ಟಿಗಳನ್ನು ಬಡಿದು ಭದ್ರಪಡಿಸಲಾಗಿತ್ತು. ಜಗಜಟ್ಟಿಗಳಂತಹ ಮೂರು ನಾಲ್ಕು ಜನ ಅವನ್ನು ಸರಿಸಲು ಸೆಣಸಿದರೂ ಸರಿಯದಷ್ಟು ಭದ್ರವಾಗಿತ್ತು ಅದು. ಕೊನೆಗೆ, ಕೆಲ ಜನ ಪೋಲಿಸರೂ ಅವರ ಪ್ರಯತ್ನಕ್ಕೆ ಕೈಕೊಟ್ಟಾಗ ಆ ಪೆಟ್ಟಿಗೆ ವಿಕಟಾಕಾರದ ನರಮುಂಡದ ತಲೆಬಿಟ್ಟು ಸರಿಯಿತು. ಅದರಡಿಯಲ್ಲಿ ಸಿಕ್ಕ ಆ ದುರ್ಭಾಗ್ಯನು ಯಾರೆಂಬುವುದನ್ನು ಗುರುತಿಸಲಾಗದಷ್ಟು ಮುಖ ಜಿಬ್ಬಿಯಾಗಿತ್ತು. ಉಡಿಗೆ ತೊಡಿಗೆಯಿಂದ ನಕ್ಲಿಜನ ನಂಬುಗೆಯ ಕೈಯಾಳು ಕಾನ್ ಇವನೆಂದು ಪ್ಯಾರೆಟ್ ಗುರುತು ಹಿಡಿದರು. ಗುಪ್ತ ಸ್ಥಾನದಲ್ಲಿದ್ದ ಬಂಗಾರವನ್ನು ಹುಡುಕುವುದಕ್ಕಾಗಿ ಕಾನ್ ಆ ಕೋಣೆಯಲ್ಲಿ ಸುತ್ತಾಡುತ್ತಿದ್ದ; ಆ ಸಮಯದಲ್ಲಿ ತೆರೆಯ ಆಚೆಯ ಕೋಣೆಯ ಗೋಡೆಯೂ ಕಪ್ಪರಿಸಿಕೊಂಡು ಬಿದ್ದಿತು; ಆ ಗೋಡೆಯ ಒಳಗಡೆಯಲ್ಲಿ, ಅದೃಶ್ಯ ಗುಪ್ತ ಗಹ್ವರದಲ್ಲಿ ಮೆಲ್ಡ್ರಂ ಬಂಗಾರ ಬಚ್ಚಿಟ್ಟಿದ್ದ; ಗೋಡೆಯೊಂದಿಗೆ ಅದೂ ಬೀಳುವಾಗ, ಅದರಡಿಯಲ್ಲಿಯೇ ನಿಂತಿದ್ದ ಕಾನನ ತಲೆಯ ಮೇಲೆ ಬಿದ್ದಿತ್ತು. ಆ ಪೆಟ್ಟಿಗೆಯಲ್ಲದೆ ಇನ್ನೂ ಕೆಲವು ಚಿನ್ನ ತುಂಬಿದ ಪೆಟ್ಟಿಗೆಗಳು ನೆಲಕ್ಕೆಬಿದ್ದು ಒಡೆದಿದ್ದವು. ಆ ಪೆಟ್ಟಿಗೆಗಳಲ್ಲಿ ಐದು ಡಾಲರ್ ಬೆಲೆಯ ರಾಶಿ ರಾಶಿ ಅಮೇರಿಕನ್ ಸುವರ್ಣ ಮುದ್ರೆಗಳು ತುಂಬಿದ್ದವು. ಹೊನ್ನಮಳೆಯಾದಂತೆ ಕೋಣೆ ತುಂಬ ಸೂರೆಯಾಗಿದ್ದವು.

## ೧೨

ಸುವರ್ಣ ಮುದ್ರೆಗಳಿಂದ ತುಂಬಿದ ಸಂಪುಟವೊಂದು ಬಿದ್ದು ಪ್ಯಾರೆಟರ ಎಡಗಾಲಿಗೆ ಗಾಯವಾಗಿತ್ತು. ಅದರದೊಂದು ಮೊಳೆ ಪಾದದಲ್ಲಿ ನಟ್ಟು ಬಹಳ ನೋವಾದುದರಿಂದ ಅವರು ಆಸ್ಪತ್ರೆಯಲ್ಲಿ ಆರೈಕೆ ಹೊಂದಬೇಕಾಯಿತು. ಅವರ ಎಷ್ಟೋ ಸಹಕಾರಿಗಳು ಆಸ್ಪತ್ರೆಯಲ್ಲಿ ಅವರನ್ನು ಕಂಡು ಕಾಲು ಹೇಗಿದೆ ಯೆಂದು ಯೋಗಕ್ಷೇಮ ವಿಚಾರಿಸಿದರು. ಅದಕ್ಕವರು,

"ಹಾಳಾಗಲಿ ನನ್ನ ಕಾಲು. ನನ್ನ ಕಾಲಿನ ಚಿಂತೆ ನನಗಿಲ್ಲ. ಇಂದು ನಾಳೆ ನೆಟ್ಟಗಾಗಿಯೇ ಆಗುವುದು. ನಾನಿಲ್ಲಿ ನಿಷ್ಕ್ರಿಯನಾಗಿ ಬಿದ್ದುಕೊಂ ಡುದರಿಂದ, ಸುದ್ದಿ ಸಮಾಚಾರ ಒಂದೂ ಗೊತ್ತಾಗುವುದಿಲ್ಲ. ಆ ಪಾತಾಳ ಭವನದಲ್ಲಿ ಮೋಟಾರ್ ಲಾರಿ ಹೇಗೆ ಬಂದಿತ್ತು, ಎಲ್ಲಿಂದ ಬಂದಿತ್ತು ಎಂಬುದೂ ನನಗೆ ತಿಳಿಯಲಿಲ್ಲ. ಅದನ್ನೆಲ್ಲ ನಾನು ಮೊದಲು ಅರಿತುಕೊಳ್ಳ ಬೇಕಾಗಿದೆ." ಎಂದರು.

ಸಾರ್ಜಂಟ್ ಪ್ರಿಂಗಲನೂ ಆಸ್ಪತ್ರೆಗೆ ಅವರನ್ನು ಕಾಣಲು ಹೋಗಿದ್ದ. ಅವನನ್ನು ಅನುಲಕ್ಷಿಸಿಯೇ ಪ್ಯಾರೆಟ್ ಈ ಮಾತನಾಡಿದರು. ಅವನು ಒಂದು ಕುರ್ಚಿಯನ್ನೆಳೆದುಕೊಂಡು ಅವರ ತಲೆದಸೆಯಲ್ಲಿ ಕುಳಿತುಕೊಂಡು ನಸುನಗೆ ಯೊಡನೆ ಉತ್ತರವಿತ್ತ:

"ಹಲವು ಕಡೆ ಹಲವಾರು ಜನ ತಮ್ಮ ಧನವನ್ನು ಬಲು ಜೋಕೆಯಿಂದ ಅಡಗಿಸಿಟ್ಟುದನ್ನು ನೋಡಿಬಲ್ಲೆ. ಆದರೆ ಮೆಲ್ಡ್ರಮ್ ತನ್ನ ಬಂಗಾರವನ್ನು ಬಚ್ಚಿಟ್ಟ ಬಗೆ ಮಾತ್ರ ಅತ್ಯಪೂರ್ವ, ಅತ್ಯದ್ಭುತ. ಅವನ ಗುಪ್ತಗೃಹದ ಸುತ್ತ ಕಾವಲಿರುವಂತೆ ನೀವು ನನಗೆ ವಿಧಿಸಿದ್ದಿರಿ; ನಾನದನ್ನು ಸಾಧ್ಯಾನುಸಾರವಾಗಿ ಪಾಲಿಸುತ್ತ ಇದ್ದೆ. ಕೊನೆಗೆ ಆ ಕಟ್ಟಡದ, 'ಮೃತ್ಯುಭವನ' ವೆಂದು ಯಥಾರ್ಥ ವಾಗಿ ಹೆಸರಿಡಬಹುದಾದ ಆ ಭಯಂಕರ ಮನೆಯ ಕಿರಿದಂತರದಲ್ಲಿ ತೋಟದ ಲ್ಲಿದ್ದ ತೋಟಿಗನ ಮನೆಯೆಂದು ಕಂಡುಬರುತ್ತಿದ್ದ ಮನೆಯನ್ನು ಪರಿಶೋಧಿಸು ವಂತೆ ನನಗೆ ಅಪ್ಪಣೆಯಾಯಿತು. ಅದರ ಮೇರೆಗೆ ನಾನು ಜೊತೆಗೊಬ್ಬನನ್ನು ಕರೆದುಕೊಂಡು ಅಲ್ಲಿಗೆ ಹೋದೆ. ಆ ಮನೆಯಲ್ಲಿ ಅಸಾಧಾರಣವಾದುದೇನೂ ಕಾಣಲಿಲ್ಲ. ಆದರೆ ಲಕ್ಷಾವಧಿ ಸೊಳ್ಳೆಗಳ ದಂಡು ನಮ್ಮ ಮೇಲೆ ದಾಳಿ ಮಾಡಿ

ದವು. ಮೂವತ್ತಾರು ಗಂಟೆ ಕಾಲ ಕಣ್ಣು ಪಿಳುಕಿಸುವುದೂ ಯಾರಿಗೂ ಸಾಧ್ಯವಾಗಲಿಲ್ಲ. ನಮ್ಮ ಆ ಸುಯೋಗ ಸಹಕಾರಿ ಸೊಳ್ಳೆಗಳ ಕಡಿತವನ್ನು ತಾಳಲಾರದೆ ಅಯ್ಯೋ ಎಂದು ಒದರುತ್ತ ಓಡಿಹೋಗಿಬಿಟ್ಟೆ. ಆ ಮಶಕ ಸೈನ್ಯದ ಮಧ್ಯದಲ್ಲಿ ಕಾಯುತ್ತ ನಿಂತುಕೊಂಡೆ. ಆ ಕುಟೀರದ ಒಳಗೂ ಹೊರಗೂ ಯಾವ ರಹಸ್ಯದ ಆಭಾಸವೂ ಗೋಚರವಾಗಲಿಲ್ಲ. ನನ್ನನ್ನು ಬಿಡಿ, ವಿಖ್ಯಾತ ತುಬ್ಬುಗಾರರಾದ ಮಿ. ಬ್ಲೇಕರೇ ಆಗಿದ್ದರೂ ಅಲ್ಲಿ ಯಾವ ರಹಸ್ಯಸೂತ್ರವನ್ನು ಹುಡುಕುವುದೂ ಸಾಧ್ಯವಿರಲಿಲ್ಲ. ಇರಲಿ.

ನಾನು ಅಲ್ಲಿದ್ದ ಪ್ರತಿವಸ್ತುವನ್ನೂ ಪರೀಕ್ಷಿಸುತ್ತ ಹೊರಟಿರುವಾಗ ಒಂದು ಕಡೆ ನೆಲದಲ್ಲಿ ಒಂದು ಸರಪಳಿಯಿದ್ದುದು ಕಂಡಿತು. ಅದು ಆ ಮನೆಯ ಒಂದು ಪಕ್ಕಗೋಡೆಯಲ್ಲಿ ಸೇರಿ ಅದೃಶ್ಯವಾಗಿತ್ತು. ಈ ಸರಪಳಿ ಇಲ್ಲಿ ಏಕೆ ಹೀಗೆ ಇಟ್ಟಿದೆ ಎಂದು ವಿಚಾರ ಮಾಡತೊಡಗಿದೆ. ಅದರ ಇನ್ನೊಂದು ತುದಿ ಗೋಡೆಯ ತೂತಿನೊಳಗಿಂದ ಎಲ್ಲಿ ಹೇಗೆ ಅದೃಶ್ಯವಾಗಿದೆ ಎಂದು ಯೋಚಿಸಿದೆ. ಯಾವನಾದರೂ ತುಬ್ಬುಗಾರನಾಗಿದ್ದರೆ ಅದರ ಕಾರಣವನ್ನು ಹುಡುಕಲು ಆಗ್ರಹಪಡದೆ ಇರುತ್ತಿರಲಿಲ್ಲ. ಹಾಗೆ ನನಗೂ ಪ್ರಬಲ ಆತುರ ಹುಟ್ಟಿತೆಂದು ಹೇಳುವುದು ಬೇಡ. ಒಳ್ಳೇ ಜಾಗರೂಕತೆಯಿಂದ ನಾನು ಅದರ ಶೋಧನೆಯನ್ನು ಆರಂಭಿಸಿದೆ. ಎಷ್ಟೋ ಹೊತ್ತು ಅರಿಸಿದ ಬಳಿಕ, ಮನೆಯ ಇನ್ನೊಂದು ಗೋಡೆಯ ಒಂದುಕಡೆಯಲ್ಲಿ ಒಂದು ನೇಗಿಲಿನ ಕುಳ ಇದ್ದುದು ಕಾಣಿಸಿತು. ಅದು ಜಂಗು ತಿಂದದ್ದು, ನಿರುಪಯೋಗಿಯಾದದ್ದು. ಅಂತಹದು ಆ ರೀತಿ ಬಿದ್ದಿರುವುದರಿಂದ ಯಾರಿಗೂ—ತುಬ್ಬುಗಾರರಿಗೆ ಕೂಡ—ಅಚ್ಚರಿಯಾಗಲಿ, ಅನುಮಾನವಾಗಲಿ ಆಗುವ ಸಂಭವವಿರಲಿಲ್ಲ. ನನಗೂ ಆಗಲಿಲ್ಲ. ಆದರೆ ಮನೆಯ ಒಂದು ಕಡೆಯಲ್ಲಿ ಒಂದು ಜಂಗು ಹಿಡಿದ ಸರಪಳಿ, ಇನ್ನೊಂದು ಕಡೆಯಲ್ಲಿ ಅಂತಹದೇ ನಿರುಪಯುಕ್ತವಾದ, ಅದಕ್ಕಿಂತ ಜಂಗುತಿಂದ ನೇಗಿಲ ಕುಳ—ಇವುಗಳಲ್ಲಿ ಪ್ರತ್ಯಕ್ಷ ಸಂಬಂಧ ಕಾಣದಿದ್ದರೂ ಪರೋಕ್ಷ ಸಂಬಂಧ ಇದ್ದಿರಬಹುದೇ ಇಲ್ಲವೇ ಎಂಬುದನ್ನು ಶೋಧಿಸುವ ಕುತೂಹಲ ನನಗೆ ಹೆಚ್ಚಿತು. ಯಾವ ತುಬ್ಬುಗಾರನಿಗೂ ಹೀಗಾಗುವುದು ಸ್ವಾಭಾವಿಕವಷ್ಟೇ. ನಾನು ಆ ಕುಳವನ್ನು ಜಗ್ಗಿದೆ. ಕೂಡಲೆ ನೇಗಿಲ ಹಿಡಿಕೆ ಹೊರಬಿದ್ದಿತು. ಕುಳ ಹಿಡಿಕೆಯಿಂದ ಸುಮಾರು ಆರಡಿ ದೂರ ಹೋಗಿ ಬಿದ್ದು—"

ಅವನು ನಡೆಸಿದ ಶೋಧನೆಯ ವರ್ಣನೆಯನ್ನು ಪ್ಯಾರೆಟ್ ಕಣ್ಣುಮುಚ್ಚಿಕೊಂಡು ಕೇಳುತ್ತಲಿದ್ದರು. ನಡುವೆ ಒಂದು ಮಾತನ್ನೂ ಆಡಲಿಲ್ಲ. ಅವನ ವಾಗ್ಝರಿಯನ್ನು ತಡೆಯಲು ಹವಣಿಸಲಿಲ್ಲ. ಆದರೀಗ ಅವರ ಸಹನೆ ಕೈಮೀರಿತು. ಅವರೆಂದರು: "ಚೆನ್ನಾಗಿದೆ ಕಥೆ. ಆದರೆ ಇದು ತಿಂಗಳಾನು ತಿಂಗಳು ಧಾರಾವಾಹಿಯಾಗಿ ಸಾಗುವುದೋ ಏನು, ಸಣ್ಣ ಕತೆಯಂತೆ ಒಂದು ತಿಂಗಳಲ್ಲಿಯೇ ಮುಗಿದೀತೋ? ನಿಮ್ಮ ಕಥೆಯ ತಂತ್ರವನ್ನು ನೋಡಿದಾಗ ನನಗೆನಿಸುತ್ತದೆ, ಮಾಸಪತ್ರಿಕೆಯಲ್ಲಿ ಪ್ರತಿತಿಂಗಳು 'ಮುಂದುವರಿಯುವುದಾಗಿ' ಪ್ರಕಟವಾಗುವ ಕಾದಂಬರಿಯಾಗಲು ತಕ್ಕುದು."

ಪ್ರಿಂಗಲನಿಗೆ ಸ್ವಲ್ಪ ನಾಚಿಕೆ ಎನಿಸಿತು. ಅವನೆಂದ; "ನಿಮಗೆ ಯಾವ ವಿಷಯ ತಿಳಿದುಕೊಳ್ಳಲೂ ಕಷ್ಟವಾಗಬಾರದೆಂದು, ನನ್ನ ವೃತ್ತಾಂತವನ್ನು ಸ್ವಲ್ಪ ವಿಸ್ತಾರವಾಗಿ ವಿವರಿಸಲಾರಂಭಿಸಿದ್ದೆ. ಇದರಿಂದ ನಿಮಗೆ ಬೇಸರವಾಗುತ್ತಿದ್ದರೆ ಇನ್ನು ಮುಂದಿನದನ್ನು ಸಂಕ್ಷೇಪವಾಗಿಯೇ ಹೇಳುತ್ತೇನೆ.— ನಾನು ಆ ಹಿಡಿಕೆಯನ್ನು ಹಿಡಿದು ಜಗ್ಗಲಾರಂಭಿಸಿದೆ. ಆದರೆ ಆ ಹಿಡಿಕೆಯ ಇನ್ನೊಂದು ತುದಿಯನ್ನು ನೆಲದಿಂದ ಹೊರತೆಗೆಯುವುದು ಸಾಧ್ಯವಾಗಲಿಲ್ಲ. ಹಾವು ಹುತ್ತದಲ್ಲಿ ಹೆಡೆ ಸೇರಿಸಿದರೆ, ಆದರ ಬಾಲ ಹಿಡಿದು ಬೇಕಾದಷ್ಟು ಎಳೆಯಿರಿ, ಆದನ್ನು ಹೊರಗೆ ತರುವುದು ಸಾಧ್ಯವಿಲ್ಲ. ಆ ಹಿಡಿಕೆಯ ಸ್ಥಿತಿಯೂ ಹಾಗೆಯೇ. ಅದರ ಇನ್ನೊಂದು ತುದಿ ನೆಲದಿಂದ ಹೊರಗೆ ಬರಲೇ ಇಲ್ಲ. ಕೊನೆಗೆ ಅದನ್ನು ಲಕ್ಷ್ಯಗೊಟ್ಟು ಪರೀಕ್ಷಿಸಿದೆ; ಅದು ಹಿಡಿಕೆಯೇನೋ ಹೌದು, ಆದರೆ ನೇಗಿಲ ಹಿಡಿಕೆಯಲ್ಲ ಎಂಬುದು ನಿದರ್ಶನಕ್ಕೆ ಬಂದಿತು."

ಪ್ಯಾರೆಟ್ ಅಧೀರರಾಗಿ ಕ್ಷೀಣ ಸ್ವರದಿಂದ ನುಡಿದರು: "ನೀವು ನಿಮ್ಮ ತುಬ್ಬುಗಾರಿಕೆಯ ಕಥೆಯನ್ನು ಹೇಳುತ್ತಾ ಇರ್ರಿ: ನಾನು ಸ್ವಲ್ಪ ನಿದ್ರೆ ಮಾಡುತ್ತೇನೆ. ನಿಜವಾದ ಕೆಲಸದ ವಿಷಯ ಬಂದಾಗ ಎಚ್ಚರಿಸಿರಿ; ಆಗ ಮನಗೊಟ್ಟು ಕೇಳಲು ಪ್ರಯತ್ನಿಸುತ್ತೇನೆ."

ಅವರ ಅಭಿಪ್ರಾಯ ತಿಳಿದು ಪ್ರಿಂಗಲ್ ಆಗ್ರಹದಿಂದ ಉತ್ತರವಿತ್ತ, "ಈಗಲೇ ಬಂದುಬಿಟ್ಟಿತು, ನಿಜವಾದ ಕೆಲಸದ ವಿಷಯ. ಅದನ್ನು ಕೇಳಿದರೆ ನಿಮ್ಮ ನಿದ್ರೆ ಓಡಿಹೋಗುವುದು—ಅಂಥ ಆಶ್ಚರ್ಯದ ಘಟನೆ ಅದು! ಇನ್ನು ಕೇಳಿರಿ—ಆ ಹಿಡಿಕೆಯನ್ನು ಹಿಡಿದು ಬಲವಾಗಿ ಎಳೆದೊಡನೆ ಆ ಗೃಹದ ಅರ್ಧ

ನೆಲ ಮೇಲೆದ್ದು ಬಂದಿತು. ನೆಲ ಗೋಡೆಗಳ ಮೇಲ್ಮಟ್ಟಕ್ಕೆ ಏರಿದಾಗ ಅಲ್ಲೊಂದು ಇಳುಕಲಾದ ಮಾರ್ಗವುಂಟಾಯಿತು. ಅದು ನೆಲದಡಿಯಲ್ಲಿ ಹೋಗಿ ಅದೃಶ್ಯವಾಗಿದ್ದಿತು. ಆ ಮಾರ್ಗವಾಗಿ ನಾವು ಮುಂದುವರಿದು ಒಂದು ಕೋಣೆಯನ್ನು ತಲುಪಿದೆವು. ಅಲ್ಲೊಂದು ಸರಕು ಹೇರಿದ ಮೋಟರ್ ಲಾರಿ ನಿಂತಿತ್ತು. ಆರಡಿಯಷ್ಟು ಎತ್ತರ ಅದೆಷ್ಟೋ ಪೆಟ್ಟಿಗೆಗಳನ್ನು ಹೇರಿದ್ದರು."

ಅದನ್ನು ಕೇಳಿ ಪ್ಯಾರೆಟ್ ವಿಸ್ಮಯದಿಂದ ಮೈಮರೆತು, ಕಾಲಿನ ನೋ-ವನ್ನು ಮರೆತು ಹಾಸಿಗೆಯಲ್ಲಿ ಚಟ್ಟನೆ ಎದ್ದು ಕುಳಿತರು. "ಆ ಅದ್ಭುತ ರಮ್ಯ ಕಥೆಯಲ್ಲಿ ವರ್ಣಿತವಾದ ಕೌತುಕಾವಹವಾದ ಗುಪ್ತನಿಧಿಯು ಕಥೆಗಿಂತಲೂ ಅದ್ಭುತ!" ಅತ್ಯಂತ ಉತ್ಸಾಹದಿಂದ ನುಡಿದರು.

ಪ್ರಿಂಗಲ್ ಮುಂದುವರಿಸಿದ: "ಈ ಪಾತಾಳ ಮಂದಿರ ಭೂಮಿ ಹುಟ್ಟಿದಾಗಿನಿಂದಲೇ ಅಲ್ಲಿದ್ದುದೆಂದು ನನಗೆನಿಸಿತು. ನೆಲ ಒಡೆದಿತ್ತು. ಕಾಲದ ಆಘಾತಗಳನ್ನು ಸಹಿಸಿ ಸಹಿಸಿ ಅದು ಪತನೋನ್ಮುಖವಾಗಿರುವಂತೆ ತೋರಿತು. ಆ ಜೀರ್ಣವಾದ ನೆಲ ಹತ್ತು ಟನ್ನು ಭಾರದ ಲಾರಿಯ ಭಾರವನ್ನು ಹೇಗೆ ತಾಳಿಕೊಂಡಿತೋ ನನಗಂತೂ ತಿಳಿಯದು. ಲಾರಿಯಲ್ಲಿ ಹೇರಿದ ಎಲ್ಲ ಪೆಟ್ಟಿಗೆಗಳಲ್ಲಿಯೂ ಬಂಗಾರ ತುಂಬಿದ್ದಿತೆಂದು ನಾನು ಶಪಥ ಮಾಡಿ ಹೇಳಬಲ್ಲೆ."

ಪ್ಯಾರೆಟ್ ಏನೋ ಮಾತನಾಡಲು ಹವಣಿಸಿದರು. ಪ್ರಿಂಗಲ್ ಅವರಿಗೆ ಅವಕಾಶ ಕೊಡಲಿಲ್ಲ. "ಅಷ್ಟು ಪೆಟ್ಟಿಗೆಗಳು ಮಾತ್ರವೇ ಏನು ? ಟೊಣ್ಣೆಯರಾದ ಹತ್ತು ಜನ ಪೋಲಿಸರು ಲಾರಿಯಮೇಲೆ ಕುಳಿತಿದ್ದರು. ಇಷ್ಟಾದರೂ ಆ ನೆಲಗಟ್ಟು ಕೆಳಗಿಳಿಯದೆ ಎಲ್ಲ ತಾಳಿಕೊಂಡಿತ್ತು."

ಪ್ಯಾರೆಟ್ ಹೇಳಿದರು: "ಅದರ ಕೆಳಗಿನ ಕೋಣೆಯಲ್ಲಿ ಆಗ ಅರ್ಧ ಡಜನ್ ಪೋಲಿಸರು ಲಗ್ಗೆ ನಡಸಿದ್ದರು."

ಪ್ರಿಂಗಲ್ ಹೇಳಿದ: "ನಾವು ಅಲ್ಲಿ ನಾಲ್ಕೂ ಕಡೆ ಸುತ್ತಾಡುತ್ತಿರುವಾಗ ಅಲ್ಲಿ ಇನ್ನೊಂದು ಕಿರಿಯುಗಲಾದ ಗುಪ್ತ ಮಾರ್ಗ ಕಂಡೆವು. ಅದು ಆ ಕೋಣೆಯ ಗೋಡೆಯಲ್ಲಿದ್ದ ಅದೃಶ್ಯ ದ್ವಾರದೊಳಗಿಂದ ಹಾಯ್ದು ಹೊರಗೆ ಹೋಗಿತ್ತು. ಆ ಬಾಗಿಲು ಅಡುಗೆಮನೆಯ ಅಗ್ನಿಕುಂಡದ ಬದಿಯಲ್ಲಿತ್ತು."

ಪ್ಯಾರೆಟ್ ಎಂದರು: "ನಕ್ಲಿಜ್ ಈ ಗುಪ್ತ ತಥ್ಯವನ್ನೇ ಮೆಲ್ಡ್ರಮನಿಂದ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದನೆಂದು ಕಾಣುತ್ತದೆ."

ಪ್ರಿಂಗಲನೊಂದಿಗೆ ಕಿಟ್ ಏರೋಸ್ಮಿಥ್‌ನೂ ಪ್ಯಾರೆಟರ ಹಾಸಿಗೆಯ ಬಳಿ ಕುಳಿತಿದ್ದ. ಅವನು ಸ್ತಬ್ಧಭಾವದಿಂದ ಎಲ್ಲವನ್ನೂ ಕೇಳುತ್ತಲಿದ್ದು ಈಗ ಮಾತನಾಡಿದ: "ಅವನು ಫ್ಯೂಜಿಗೆ ಜೋಡಿಸಿ ಇಟ್ಟಿದ್ದ ಬಾಂಬಿನಿಂದ ನಮ್ಮನ್ನು ಹಾರಿಸಬೇಕೆಂದು ಸಂಕಲ್ಪಿಸಿದ್ದನೆಂದು ತೋರುತ್ತದೆ. ನಮ್ಮ ಸುದೈವದಿಂದ ಸುಲ್ಜ್ ಆ ಫ್ಯೂಜಿಗೆ ಬೆಂಕಿ ಕೊಟ್ಟು ಪರದೆಯ ಹಿಂದಿನಿಂದ ನಮ್ಮ ಹತ್ತಿರ ಬಂದಾಗ, ಉಲ್ಲಾಸ ಉತ್ಸಾಹಪೂರ್ಣವಾಗಿದ್ದ ಅವನ ಮೋರೆಯನ್ನು ನಾನು ನೋಡಿದೆ. ನಮ್ಮನ್ನು ನಷ್ಟಗೊಳಿಸುವುದಕ್ಕಾಗಿ ಅವನು ಏನೋ ಒಂದು ಅಮಾನುಷ ಯೋಜನೆಯಲ್ಲಿ ವ್ಯಕ್ತನಾಗಿರುದನೆಂದು ಅವನ ಭಾವಭಂಗಿಯನ್ನು ನೋಡಿ ನನ್ನ ಸ್ಪಷ್ಟವಾದ ಭಾವನೆಯಾಗಿತ್ತು."

ಪ್ಯಾರೆಟ್ ಅತ್ಯಂತ ಗಂಭೀರ ಭಾವದಿಂದ ನುಡಿದರು: "ಎಲ್ಲಕ್ಕಿಂತ ಹೆಚ್ಚು ವಿಸ್ಮಯದ ವಿಷಯವೆಂದರೆ,—ಇದನ್ನು ನಾನು ದೈವಾನುಗ್ರಹವೆಂದೇ ಹೇಳುತ್ತೇನೆ—ಆ ಲಾರಿ ಬಿದ್ದ ಧಕ್ಕೆಯಿಂದಲೇ ಆ ಮರದ ಆಸನ ಬಿದ್ದು, ಅದು ತಾಗಿ ಹೌದು ಉರುಳಿ, ಅದರಲ್ಲಿಯ ಆ್ಯಸಿಡೆಲ್ಲ ನಕ್ಲಿಜನ ಮೈಮೇಲೆ ಚೆಲ್ಲಿ ಅವನು ಸುಟ್ಟುಕೊಂಡು ಸತ್ತ. ಆದರೂ ಮಿಸ್ ಫೆಲ್ಟನ್ ದೂರ ಹಾರಿಬಿದ್ದು ಮೈಯಲ್ಲಿ ಪೆಟ್ಟು ತಗಲಿದರೂ ಜೀವಕ್ಕೆ ಅಪಾಯವಾಗದೆ ಉಳಿದುಕೊಂಡಳು. ಆ್ಯಸಿಡಿನ ಒಂದು ಹನಿಯೂ ಅವಳ ಮೈಗೆ ಸಿಡಿಯಲಿಲ್ಲ. ದೇವರು ದಯಾಮಯನು. ಇರಲಿ. ಹತಭಾಗ್ಯ ಮೆಲ್ಡ್ರಮನ ಬುದ್ಧಿಭ್ರಮಣದ ಪರಿಣಾಮ ಏನಾಯಿತೆಂಬುದು ತಿಳಿದಿದೆಯೇ ನಿಮಗೆ?"

ಏರೋಸ್ಮಿಥ್ ಉತ್ತರವಿತ್ತ: "ಮೆದುಳು ಬೇನೆಯ ಪ್ರಧಾನಚಿಕಿತ್ಸಕರು ಅವನನ್ನು ಪರೀಕ್ಷಿಸಿದ್ದಾರೆ. ಆರು ತಿಂಗಳ ಕಾಲ ಮಸ್ತಿಷ್ಕ ಚಾಲನೆಯನ್ನು ನಿಲ್ಲಿಸಿ, ಸಮುದ್ರ ವಾಯುವಿನ ಸೇವನೆ ಮಾಡಿದರೆ ಅವನ ತಲೆ ಪೂರ್ಣ ನೆಟ್ಟಗಾಗುವುದೆಂದು ಅವರ ಖಂಡಿತ ಅಭಿಪ್ರಾಯ. ಅತಿಯಾಗಿ ತಲೆ ನಡೆಸಿದ್ದರಿಂದಲೇ ಅವನ ಮೆದುಳು ಕೆಟ್ಟಿದೆಯಂತೆ; ಅಲ್ಲದೆ ವಿವೇಕದ ಕಠೋರ ಆಕ್ರಮಣವೂ ಅವನ ಬುದ್ಧಿವಿಕಾರದ ಇನ್ನೊಂದು ಕಾರಣ. ವ್ಯವಸಾಯ ಕ್ಷೇತ್ರದಲ್ಲಿ ಅಪರಿಮಿತ ಯಶಸ್ಸು ಹೊಂದಿ ಗೋದಿಯ ವ್ಯಾಪಾರವನ್ನು ಸಂಪೂರ್ಣ

ಸ್ವಾಯತ್ತ ಮಾಡಿಕೊಂಡಿದ್ದನು. ಇದು ಅತ್ಯಂತ ಅಸಂಗತ, ನೀತಿನಿಂದಿತ ಕಾರ್ಯ. ಅವನ ಈ ಬಗೆಯ ಅತ್ಯಾಚಾರದಿಂದ ಅಸಂಖ್ಯ ಬಡ ಒಕ್ಕಲಿಗರು ಹಾಳಾಗಿದ್ದರು; ರೊಟ್ಟಿಯ ಬೆಲೆ ಮಿತಿಮೀರಿ ಹೆಚ್ಚಿ ಬಡವರು ಉಪವಾಸದಿಂದ ಅಥವಾ ಅರೆಹೊಟ್ಟೆಯಿಂದ ಕಾಲ ಕಳೆಯುವಂತಾಗಿತ್ತು. ಅವರ ಒಡಲಿನ ತಳಮಳದ ನಿಟ್ಟುಸಿರಿನ ಫಲ ಮತ್ತು ಅವರ ಬಾಳಿನ ಗೋಳಿನ ಹಾಹಾಕಾರದ ಫಲ ಸಿಕ್ಕದೆ ಹೋದೀತೆ? —ಆದರೆ ಮೆಲ್ಡ್ರುಮನ ಕಾರ್ಯ ಇನ್ನೂ ಹೆಚ್ಚಿದೆ. ಸುಲ್ಜ್ ಫೌಜದಾರಿ ಕಟ್ಟಳೆಗೆ ಗುರಿಯಾಗಿದ್ದಾನೆ; ಆ ಮೊಕದ್ದಮೆಯಲ್ಲಿ ಸರಕಾರದ ಪರವಾಗಿ ಮುಖ್ಯಸಾಕ್ಷಿಯೆಂದು ಮೆಲ್ಡ್ರುಮನಿಗೆ ನ್ಯಾಯಾಲಯದಲ್ಲಿ ಹಾಜರಾಗಲು ಸಮನ್ಸಾಗಿದೆ."

ಪ್ಯಾರೆಟ್ ಕೇಳಿದರು: "ಆದರೆ ಒಂದು ವಿಷಯ ನನಗಿನ್ನೂ ಸರಿಯಾಗಿ ಗೊತ್ತಾಗಲಿಲ್ಲ. ಕೃತ್ರಿಮ ಸುವರ್ಣವನ್ನು ನಿರ್ಮಿಸುವ ಸ್ಥಳ ಎಲ್ಲಿದೆಯೆಂಬುದು ನಾವೆಷ್ಟು ಶ್ರಮಪಟ್ಟರೂ ತಿಳಿದುಬರಲಿಲ್ಲ. ನಾವು ಈ ವಿಷಯ ನಿಮ್ಮೊಡನೆ ವಿಚಾರವಿನಿಮಯ, ಚರ್ಚೆಮಾಡಲಿಲ್ಲ. ಆವರೂ ಆ ಶೋಧನೆಯ ಪ್ರಯತ್ನವನ್ನು ಸುಪ್ತರಾಗಿ ನಡೆಸಿಯೇ ಇದ್ದೆವು. ಈ ಕಾರ್ಯದಲ್ಲಿ ನಿಮ್ಮ ಯಾವ ಸಂಬಂಧವೂ ಇರಲಿಲ್ಲವಾದರೂ ಫಸ್‌ವ್ಯೂವೇ ಖೊಟ್ಟಿ ಚಿನ್ನದ ಕಾರಖಾನೆಯೆಂದು ಥಕ್ಕನೆ ತಿಳಿದುಕೊಂಡಿರಿ. ಎಲ್ಲರಿಗಿಂತ ಮುಂಚೆ ನೀವು ಈ ಶೋಧ ಎಲ್ಲಿ ಹಚ್ಚಿದಿರಿ ?"

ಏರೋಸ್ಮಿಥ್ ಹೇಳಿದ: "ಈ ಭಾಗದಲ್ಲಿ ನನ್ನ ಓಡಾಟ ಮೊದಲಿಂದಲೂ ಇತ್ತು. ಫಸ್‌ವ್ಯೂದ ಕುಖ್ಯಾತಿಯನ್ನು ಬಹು ದಿನಗಳಿಂದಲೂ ಕೇಳುತ್ತಿದ್ದೆ. ಆ ಮನೆ ಮೃತ್ಯುಭವನ ಎಂದು ಎಂದಿನಿಂದಲೂ ಹೆಸರಾಗಿದೆ. ಅಲ್ಲಿ ಅನೇಕ ದುರ್ಘಟನೆಗಳು ಜರುಗಿವೆ, ಅವುಗಳಲ್ಲಿ ಅನೇಕರ ಪ್ರಾಣಾಹುತಿಯಾಗಿದೆ. ಬಾರಬಾರಾನ ಉದ್ಧಾರ ಮಾಡುವುದಕ್ಕೆ ಹೋದ ದಿನವೇ, ಮೆಲ್ಡ್ರುಮನನ್ನು ಅವನ ಅನುಚರರ ಸಹಿತವಾಗಿ ಸ್ಥಾನಾಂತರಗೊಳಿಸುವುದಕ್ಕಾಗಿ ನಾನು ನನ್ನ ಕೆಲವು ಜನರ ಸಹಾಯದಿಂದ ಆ ಮನೆಯನ್ನು ಆಕ್ರಮಿಸುವ ಅಭಿನಯ ಮಾಡಿದೆ. ಮೆಲ್ಡ್ರುಮನೂ ಅವನ ಅನುಚರರೂ ಮನೆಯನ್ನು ಹಾಗೆಯೇ ಬಿಟ್ಟು, ಬಂದೂಕು ತೆಗೆದುಕೊಂಡು ಅವರನ್ನು ಬೆನ್ನಟ್ಟಿ ಹೋದರು. ಆಗ ನನಗೆ ಮೆಲ್ಡ್ರುಮನ ಲೆಬೋರೇಟರಿಯಲ್ಲಿ ಪ್ರವೇಶಿಸಲು ಸಂಧಿ ಒದಗಿತು.

ಒಳಹೊಕ್ಕು ಅದನ್ನು ಪರೀಕ್ಷಿಸಿದಾಗ ಅಲ್ಲಿ ಧಾತುವಿಜ್ಞಾನದ ಪ್ರಯೋಗಗಳು ನಡೆಯುತ್ತಿರಬೇಕೆಂಬ ಸಂದೇಹವುಂಟಾಯಿತು. ಆ ಕೋಣೆಯಲ್ಲಿ ಧಾತು ವಿಜ್ಞಾನ ಸಂಬಂಧದ ಅನೇಕ ಅಮೂಲ್ಯ ಅಪ್ರಾಪ್ಯ ಗ್ರಂಥಗಳನ್ನು ನೋಡಿ ದಾಗ ಆ ಸಂದೇಹ ಗಟ್ಟಿಯಾಯಿತು. ಅವುಗಳ ಲೇಖಕರೊಳಗಿನ ಕೆಲ ವೊಂದು ಲೇಖಕರು ವಿವಿಧ ಧಾತುಗಳ ಸಮ್ಮಿಶ್ರಣದಿಂದ ಬಂಗಾರ ಮಾಡಲು ಪ್ರಯತ್ನಿಸಿದವರೆಂಬುದೂ ನನಗೆ ತಿಳಿದಿತ್ತು. ಆದರೆ ಕೃತ್ರಿಮ ಸುವರ್ಣವನ್ನು ಮಾಡುವ ಪ್ರಯತ್ನ ವಿಫಲವಾಗುವುದೆಂದು ನನ್ನ ತಿಳಿವಳಿಕೆಯಾಗಿತ್ತು; ಏಕೆಂ ದರೆ ಇವೊತ್ತಿನ ವರೆಗೂ ಬಹು ಪ್ರಯತ್ನ ಪಟ್ಟರೂ ಯಾರೂ ಅದರಲ್ಲಿ ಯಶ ಪಡೆದಿಲ್ಲ. ಆದರೆ ಎಂಟೂ ದಿಕ್ಕುಗಳಲ್ಲಿಯೂ ಚೊಕ್ಕ ಚಿನ್ನದ ಗಟ್ಟಿಗಳನ್ನು ಕಳಿಸಲಾಗಿದೆಯೆಂಬುದನ್ನೂ ಸರ್ ಕ್ಲೆಮೆಂಟರ ಹಿತ್ತಾಳೆಯ ನಸ್ಯದ ಡಬ್ಬಿ ೨೨ ಕ್ಯಾರೆಟಿನ ವಿಶುದ್ಧ ಸ್ವರ್ಣದಲ್ಲಿ ಪರಿಣತವಾಗಿದೆಯೆಂಬುದನ್ನು ಕೇಳಿದಾಗ ನನ್ನ ಮನಸು ಬಹಳ ಕುಗ್ಗಿ ಹೋಯಿತು. ಆದರೆ ಸ್ಯಪರನಿಂದ ನಾನು ಆ ವ್ಯಾಪಾ ರದ ನೈಜತೆಯನ್ನು ಅರಿತುಕೊಂಡೆ."

ಸರಕಾರದ ಪರರಾಷ್ಟ್ರ ಶಾಖೆಯಿಂದ ಫಸ್ವ್ಯಾದ ಮೇಲೆ ಕಣ್ಣಿಡುವುದಕ್ಕೆ ಏರೋಸ್ಮಿಥ್‌ನಿಗೆ ಅಪ್ಪಣೆಯಾಗಿತ್ತಾದರೂ ಸ್ಕಾಟ್ಲೆಂಡ್ ಯಾರ್ಡಿಗೆ ಗೊತ್ತಿಲ್ಲ ದಂತೆ ಚಾರ ವಿಭಾಗದ ಕಾರ್ಯದಲ್ಲಿ ನಿಯುಕ್ತನಾಗಿದ್ದ. ಈ ವಿಷಯವನ್ನು ಅವನು ಪ್ಯಾರೆಟರ ಮುಂದೆ ಪ್ರಕಟಗೊಳಿಸಲಿಲ್ಲ.

"ಸ್ಯಪರನಿಂದ ನಿಮಗೆ ವಾಸ್ತವ ಸಂಗತಿ ಹೇಗೆ ತಿಳಿಯಿತು ? ಅವನು ನಿಮ್ಮ ಮುಂದೆ ಏನಾದರೂ ಹೇಳಿದ್ದನೇ ?" ಪ್ಯಾರೆಟ್ ಕೇಳಿದರು.

"ಏನೂ ಹೇಳಲಿಲ್ಲ. ಆದರೆ ಅವನು ಒಂದು ಬ್ಯಾಂಕಿನಲ್ಲಿ ಒಮ್ಮೆ ನಾಲ್ವತ್ತು ಸಾವಿರ ಪೌಂಡುಗಳ ಬಂಗಾರ ಅಪಹರಿಸಿ ಕಾರಾಗೃಹ ಸೇರಿದ್ದ. ಆದರೂ ಅವನ ಹತ್ತಿರ ಒಂದು ಗುಂಜಿ ತೂಕ ಬಂಗಾರವೂ ಸಿಕ್ಕಲಿಲ್ಲ. ಸೆರೆ ಮನೆಯಿಂದ ಬಿಡುಗಡೆ ಹೊಂದಿ ಬಂದು ಮುರುಕು ಮನೆಯಲ್ಲಿ ಇರುತ್ತಿದ್ದ, ಅರಹೊಟ್ಟೆ–ಉಪವಾಸಗಳಿಂದ ದಿನ ನೂಕುತ್ತಿದ್ದ. ಅವನ ಈ ಬಗೆಯ ವ್ಯವಹಾರವನ್ನು ನೋಡಿದರೆ ನಿಮಗೆ ಏನೆನಿಸುತ್ತದೆ ಹೇಳಿರಿ." ಎಂದ ಏರೋಸ್ಮಿಥ್.

"ಅವನ ಮೇಲೆ ಸ್ಕಾಟ್ಲೆಂಡ್ ಯಾರ್ಡಿನವರು ತೀಕ್ಷ್ಣ ದೃಷ್ಟಿ ಇಟ್ಟಿರಬೇಕು. ಅದಕ್ಕಾಗಿ ಅವನು ಬಂಗಾರ ಬಚ್ಚಿಟ್ಟು ಆ ರೀತಿ ಕಾಲಯಾಪನ ಮಾಡುತ್ತಿರಬೇಕು." ಎಂದರು ಪ್ಯಾರೆಟ್.

ಏರೋಸ್ಮಿಥ್ ಹೇಳತೊಡಗಿದ: "ಆಮೇಲೆ ಒಂದುದಿನ ಸ್ಯಾಪರ್ ಬಹು ಬೆಲೆ ಬಾಳುವ ಉಡಿಗೆ ತೊಡಿಗೆ ಧರಿಸಿ ಒಂದು ಬ್ಯಾಂಕಿನಿಂದ ಹೊರಬರುವುದನ್ನು ಹಠಾತ್ತಾಗಿ ನೋಡಿದೆ ನಾನು. ಅಂದೇ ಆ ಬ್ಯಾಂಕಿನ ಆಡಳಿತಗಾರರನ್ನು ಕಾಣಿಸಿಕೊಂಡೆ. ಸ್ಯಾಪರ್ ಆ ಬ್ಯಾಂಕಿನಲ್ಲಿ ಇಪ್ಪತ್ತು ಸಾವಿರ ಪೌಂಡುಗಳ ಡಾಲರ್ ಬಿಲ್ಲನ್ನು ಠೇವಿಟ್ಟಿದ್ದಾನೆಂದೂ ಇನ್ನೆರಡು ದಿನಗಳಲ್ಲಿ ಮತ್ತೆ ಅಷ್ಟು ಹಣ ಇಡುವೆನೆಂದು ಹೇಳಿದ್ದಾನೆಂದೂ ಅವರಿಂದ ತಿಳಿಯಿತು. ಮೆಲ್ಡ್ರಮನೇ ಅವನ ಬಂಗಾರವನ್ನು ತೆಗೆದುಕೊಂಡು ಆ ಬಿಲ್ಲನ್ನು ಕೊಟ್ಟಿದ್ದನೆಂದೂ ಆ ಹಣ ಅಮೇರಿಕೆಯಿಂದ ಈ ಬ್ಯಾಂಕಿಗೆ ಬಂದುದೆಂದೂ ಆಮೇಲೆ ತಿಳಿಯಿತು. ಮೆಲ್ಡ್ರಮನೇ ಆ ಹೇರಳ ಸೊತ್ತಿನ ಒಡೆಯ. ಇದರಿಂದ ಮೆಲ್ಡ್ರಮ್ ತನ್ನ ಧನವನ್ನೆಲ್ಲ ಬಂಗಾರದಲ್ಲಿ ಪರಿವರ್ತಿಸುತ್ತಿರುವನೆಂದು ನಾನರಿತುಕೊಂಡೆ. ಆ ವಿಪುಲ ಸ್ವರ್ಣರಾಶಿಯನ್ನು ಹಸ್ತಗತ ಮಾಡಿಕೊಳ್ಳಲು ಮೆಲ್ಡ್ರಮನ ನಚ್ಚಿನ ಗೆಳೆಯ ಯಾವ ಆಟ ಹೂಡಿದ್ದನೆಂಬುದು ನಿಮಗೆ ಗೊತ್ತೇ ಇದೆ. ಅಮೇರಿಕೆಯಿಂದ ಮೆಲ್ಡ್ರಮನಿಗೆ ಬಂದಿದ್ದ ಹುಂಡಿಯನ್ನು ಒಯ್ಯುವುದಕ್ಕಾಗಿ ಆ ನೆಲಮನೆಗೆ ಹೋಗಿದ್ದ. ಆದರೆ ಅಷ್ಟರೊಳಗೇ ಮೆಲ್ಡ್ರಮ್ ನಕ್ಲಿಜನ ಸೆರೆಯಾಳಾಗಿದ್ದ. ಸ್ಯಾಪರ್ ಹೋದೊಡನೆ ನಕ್ಲಿಜ್ ಅವನನ್ನೂ ಕಟ್ಟಿ ಹಾಕಿದ. ಆಮೇಲೆ ತನ್ನ ಸ್ವಾರ್ಥದ ದಾರಿಯನ್ನು ಪರಿಷ್ಕಾರ ಮಾಡಿಕೊಳ್ಳುವುದಕ್ಕಾಗಿ ಅವನನ್ನು ಹೇಗೆ ಕೊಲ್ಲಬೇಕೆಂದು ಸಂಕಲ್ಪಿಸಿದ್ದನೆಂಬುದು ನಮಗೆಲ್ಲರಿಗೂ ತಿಳಿದ ವಿಷಯ."

ಪ್ಯಾರೆಟ್ ಮಾತಿನ ಓಘವನ್ನು ಒಮ್ಮೆಲೆ ಬೇರೆ ಕಡೆ ಹೊರಳಿಸಿದರು. "ಸರಿ. ಬಾರಬಾರಾನೊಡನೆ ನಿಮ್ಮ ಮದುವೆಯ ಮಾತು ಎಲ್ಲಿಯ ವರೆಗೆ ಮುಂದುವರಿದಿದೆ ? ನಿಮ್ಮ ನಿವೇದನೆ ಗ್ರಾಹ್ಯವಾಗಿದೆ ತಾನೆ ?" ಎಂದು ಕೇಳಿದರವರು.

ಏರೋಸ್ಮಿಥ್ ಕುಂಠಿತ ಭಾವದಿಂದ ಉತ್ತರವಿತ್ತ: "ಹಾಂ, ಮಿಸ್ಟರ್ ಮೆಲ್ಡ್ರಮ್ ಶೀಘ್ರದಲ್ಲೇ ಸಮುದ್ರಯಾತ್ರೆ ಕೈಕೊಳ್ಳುವರು. ಅಷ್ಟರೊಳಗೇ ಬಾರಬಾರಾ ಅವರ ಒಪ್ಪಿಗೆಯನ್ನು ಕೇಳಿಕೊಳ್ಳುವಳು."

"ಚಮತ್ಕಾರ ಹುಡಿಗಿ! ಈಗಿನ ಹುಡುಗಿಯರು ತಮ್ಮ ಮದುವೆಗೆ ಹಡೆದ ತಂದೆಯ ಒಪ್ಪಿಗೆಯನ್ನೇ ಕೇಳುವುದಿಲ್ಲ. ಮಲತಂದೆಯ ಮಾತಂತೂ ದೂರವೇ ಉಳಿಯಿತು. ಇರಲಿ. ಬೇಗನೆ ವಿವಾಹೋತ್ಸವದಲ್ಲಿ ನಾವು ಭಾಗಿಗಳಾಗಿ ವಧೂವರರ ಶುಭ ಕೋರುವಂತಾಗಲಿ ಎಂದು ಹಾರೈಸುತ್ತೇನೆ." ಎಂದರು ಪ್ಯಾರೆಟ್ ಸಂತೋಷದಿಂದ ನಸುನಗುತ್ತ.

